ಪ್ರತಿಭಾ ಗ್ರಂಥಮಾಲೆ, ಧಾರವಾಡ. ವರ್ಷ ೨ ಕಿರಣ ೭

# ರಮಾನಾಥ

## ಸ್ವರ್ಗೀಯ ಪ್ರೇಮಚಂದರ “ ಗಬನ್ ” ಕಾದಂಬರಿಯ ಅನುವಾದ



**ಕು. ಶಿ. ಹರಿದಾಸಭಟ್ಟ**

‘ ಕನ್ನಡ ಜಾಣ ’, ರಾಷ್ಟ್ರಭಾಷಾ ವಿಶಾರದ ’, ಉಡುಪಿ.



ಪ್ರಕಾಶಕರು :

**ಭಾಲಚಂದ್ರ ಘಾಣೇಕರ**

ಸಮಾಜ ಪುಸ್ತಕಾಲಯ, ಧಾರವಾಡ.

ಮಾರ್ಚ ೧೯೪೬ ]   [ ಬೆಲೆ : ೩-೦-೦

# ಪ್ರಕಾಶಕರ ಮಾತು

ಕನ್ನಡದಲ್ಲಿ ಉಪನ್ಯಾಸ ಸಾಮ್ರಾಟ್ ದಿ. ಪ್ರೇಮಚಂದರ ಕಾದಂಬರಿಯು ಅನುವಾದವಾಗಿ ಪ್ರಕಟವಾಗುತ್ತಿರುವದು ಇದೇ ಮೊದಲನೆಯದೆಂದು ಹೇಳಲಡ್ಡಿಯಿಲ್ಲ. "ರಮಾನಾಥ" ಬೇಗನೆ ಪ್ರಕಟವಾಗದ್ದರಿಂದ ಚಂದಾದಾರರ ಪತ್ರಗಳು ಒಂದರಮೇಲೊಂದು ಬರುತ್ತಿವೆ. ಪ್ರೇಮಚಂದರ ಸಾಹಿತ್ಯದ ಬಗ್ಗೆ ಕನ್ನಡಿಗರಲ್ಲಿರುವ ಕುತೂಹಲವೇ ಇದರ ಕಾರಣವೆನ್ನಲೇನೂ ಅಭ್ಯಂತರವಿಲ್ಲ. ಇದರ ಮುದ್ರಣ ನಡೆದು ಹಲವಾರು ತಿಂಗಳು ಆಗಿ ಹೋಗಿದ್ದವು. ಕೆಲಸಗಾರರ ಅಭಾವಕ್ಕಾಗಿ ಪ್ರೆಸ್ಸಿನವರಿಗೆ ಹೊತ್ತಿಗೆ ಪುಸ್ತಕ ಕೊಡಲಾಗಲಿಲ್ಲ. ನಿರೀಕ್ಷಣೆಗಿಂತ ಪುಸ್ತಕವೂ ದೊಡ್ಡದಾಯಿತು. ನಿಜವಾಗಿ ಇಂಥ ದೊಡ್ಡ ಹೊತ್ತಿಗೆಗೆ ಒಳ್ಳೇ ಕಾಗದ ಒಳ್ಳೇ ಮುದ್ರಣದ ಆವಶ್ಯಕತೆಯಿತ್ತು. ದುರ್ದೈವದಿಂದ ನಮಗೆ ಆ ಹೊತ್ತಿಗೆ ಇವು ಅನುಕೂಲವಾಗಲಿಲ್ಲ. ಈ ಬಗ್ಗೆ ನಾವು ನಮ್ಮ ಚಂದಾದಾರರನ್ನೂ, ಬರೆಹಗಾರರನ್ನೂ ಕ್ಷಮೆ ಕೇಳಿಕೊಳ್ಳದೆ ಗತ್ಯಂತರವಿಲ್ಲದಾಗಿದೆ. ಮುಂದಿನ ಆವೃತ್ತಿಗಳಲ್ಲಿ ಇಂಥ ದೋಷಗಳು ಆಗದಂತೆ ನೋಡಿಕೊಳ್ಳುತ್ತೇವೆ.

ಈ ಪುಸ್ತಕವನ್ನು ಭಾಷಾಂತರ ಮಾಡಿಕೊಟ್ಟ ಶ್ರೀ. ಕು. ಶಿ. ಹರಿದಾಸ ಭಟ್ಟರಿಗೂ, ಇದನ್ನು ಕನ್ನಡಕ್ಕೆ ಅನುವಾದ ಮಾಡಿಕೊಳ್ಳಲು ಅಪ್ಪಣೆಯಿತ್ತ ಪ್ರೇಮಚಂದರ ಚಿರಂಜೀವರಾದ ಶ್ರೀಮಾನ್ ಶ್ರೀಪತರಾಯ್ ಅವರಿಗೂ, ಅಪ್ಪಣೆ ಕೊಡಿಸುವ ಕಾರ್ಯದಲ್ಲಿ ನೆರವಾದ ಶ್ರೀ. ಗುರುನಾಥ ಜೋಶಿಯವರಿಗೂ ನಾವು ತುಂಬಾ ಆಭಾರಿಯಾಗಿದ್ದೇವೆ.

ಮುದ್ರಕರು : ಏ. ಪಿ. ಚೌಗಲಾ, ವೀರಭಾರತ ಪ್ರೆಸ್, ಬೆಳಗಾಂವಿ.

●

ಬಂಗಾಳಿ-ಭಾಷೆಯ ಕಾದಂಬರಿಗಳಲ್ಲಿ ಹಲವು ಈಗಾಗಲೇ ಕನ್ನಡಕ್ಕೆ ಅನುವಾದಿಸಲ್ಪಟ್ಟಿದ್ದು ನಮ್ಮ ಜನದ ಮನ್ನಣೆಯನ್ನೂ ಪಡೆದಿವೆ. ಅದರಂತೆ ಉತ್ಕೃಷ್ಟ ಹಿಂದೀ ಕಾದಂಬರಿಗಳು ಕನ್ನಡಕ್ಕೆ ಇನ್ನೂ ಬರತೊಡಗಿಲ್ಲ. ಅದರಲ್ಲಿಯೂ 'ಕಾದಂಬರಿ ಸಾಮ್ರಾಟ'ರೆಂದು ಹೆಸರ್ವಡೆದ ಸ್ವರ್ಗೀಯ ಪ್ರೇಮಚಂದರ ಕಾದಂಬರಿ ಕನ್ನಡಕ್ಕೆ ಪರಿವರ್ತಿತವಾಗುವುದು ಇದೇ ಮೊದಲ ಬಾರಿ. ಪ್ರೇಮಚಂದರ 'ಗಬನ್'ನ್ನು ಕನ್ನಡಿಸುವ ಯೋಗ ನನಗೆ ದೊರಕಿದುದು ನನ್ನ ಸೌಭಾಗ್ಯವೆಂದೆಣಿಸುತ್ತೇನೆ.

ಜತೆಗೆ ಕಾರ್ಯದ ಗುರುತ್ವದ ಅರಿವೂ ಇಲ್ಲದೆ ಇಲ್ಲ. ನನ್ನಂತಹನಿಂದ ಇದು ಸಾಧ್ಯವೇ ಎಂದೊಮ್ಮೆ ಬಗೆದೆ. ಆದರೆ ಮನುಷ್ಯನ ಮನಸ್ಸು ಬಲು ವಿಚಿತ್ರ. ಅನೇಕಶಃ ಅದು ತನ್ನ ಯೋಗ್ಯತೆಯ ವಿಚಾರವನ್ನು ಮೂಲೆಗೊತ್ತಿಯೇ ಕಾರ್ಯಪ್ರವೃತ್ತವಾಗುತ್ತದೆ. ತನ್ನನ್ನು ಮುಗ್ಧಗೊಳಿಸಿದ ವಸ್ತುವನ್ನು ತನ್ನದನ್ನಾಗಿ— ತನ್ನದೇ ಆಗಿ— ಮಾಡಿಕೊಳ್ಳಲು ಹವಣಿಸುತ್ತದೆ. ಇದರಿಂದಲೇ ಮನುಷ್ಯನು ಕೆಲವೊಮ್ಮೆ ಸಾಹಸದ ಕೆಲಸಕ್ಕಿಳಿಯುತ್ತಾನೆ. ಈ ಅನುವಾದದ ಕತೆಯೂ ಅಂತೆಯೆ.

ಇಲ್ಲವಾದರೆ ಪ್ರೇಮಚಂದ್ರರ ಸರ್ವತೋಮುಖಿ ಪ್ರತಿಭೆಯ ದ್ಯೋತಕವಾದ ಗಬನ್ ಎಲ್ಲಿ? ಈ ಅನುವಾದಕನ ಯೋಗ್ಯತೆ ಎಲ್ಲಿ? ಆದರೂ ಕೂಡ ಇನ್ನು ಹೆಚ್ಚುಕಾಲ ಕನ್ನಡಿಗರು ಪ್ರೇಮಚಂದರ ಕಾದಂಬರಿಗಳ ಸವಿಯುಣಿಸಿನಿಂದ ವಂಚಿತರಾಗಿರುವುದು ಯುಕ್ತವಲ್ಲೆಂದು ಬಗೆದು ಹೀಗೆ ದುಡುಕಿದ್ದಾಗಿದೆ.

ಹಿಂದೀಯ ಆಧುನಿಕ ಗದ್ಯಶೈಲಿಯ ನಿರ್ಮಾತೃಗಳಲ್ಲೊಬ್ಬರಾದ ಪ್ರೇಮಚಂದರ ಶೈಲಿಯ ಮಾರ್ದವ, ಓಜಸ್ಸು, ಸೂಕ್ಷ್ಮತೆ ಇವು ನನ್ನೀ ಅನುವಾದದಲ್ಲಿ ಎಷ್ಟುಮಟ್ಟಿಗೆ ಬಂದಿರುವುದೆಂಬುದನ್ನು ಸುಜ್ಞ ವಾಚಕರೇ ನಿರ್ಣಯಿಸತಕ್ಕುದು. ಇದರಲ್ಲಿನ ಕುಂದುಗಳೆಲ್ಲ ನನ್ನವೆಂದೂ, ಗುಣಗಳಿದ್ದರೆ ಅವೆಲ್ಲ ಪ್ರೇಮಚಂದರವೆಂದೂ ಭಾವಿಸಬೇಕಾಗಿ ನನ್ನ ಕಳಕಳಿಯ ಬಿನ್ನಹ.

ಪ್ರೇಮಚಂದರ ಕಾದಂಬರಿಗಳೆಂದರೆ ಭಾರತದ ರಾಷ್ಟ್ರೀಯತೆಯ ಪ್ರತೀಕಗಳು. ಪ್ರಕೃತ ಕಾದಂಬರಿಯು ಹಿಂದೂ ಸಮಾಜದ ಕುಂದುಕೊರತೆ

ಗಳನ್ನೆತ್ತಿ ತೋರಿಸುವಂತಹುದಿರುವುದರಿಂದ ಅವರ ರಾಷ್ಟ್ರೀಯ ದೃಷ್ಟಿಯ ಪ್ರಭಾವ ಇಲ್ಲಿ ಅಷ್ಟು ವಿಶದವಾಗಿ ಕಂಡುಬರುವುದಿಲ್ಲವಾದರೂ, ಈ ಅನುವಾದದಿಂದ ಕನ್ನಡಿಗರಿಗೆ ಪ್ರೇಮಚಂದರ ಕಾದಂಬರಿಗಳ ಅಲ್ಪ ಪರಿಚಯವಾದರೂ ಆದೀತೆಂದು ಎಣಿಸುವೆ. ಆ ಪರಿಚಯ ನಮ್ಮ ನಾಡ-ನುಡಿ ಮತ್ತು ತಾಯ್ನುಡಿ ಇವುಗಳ ಪರಸ್ಪರ ಬಾಂಧವ್ಯವನ್ನು ಬೆಳೆಸುವುದಕ್ಕೆ ಸಹಕಾರಿಯಾದೀತೆಂದು ನಂಬುವೆ. ಅಷ್ಟಾದರೆ ನನ್ನ ಯತ್ನ ಸಫಲ.

ಅನುವಾದದ ಶೈಲಿಯ ಕುರಿತು ಎರಡು ಮಾತು. ಸಂಭಾಷಣೆಯ ಸಂದರ್ಭಗಳಲ್ಲೆಲ್ಲ ಮಂಗಳೂರು ಕಡೆಯ ಶೈಲಿಯನ್ನೆ ಬಳಸಿಕೊಂಡಿರುವೆ. ಅಲ್ಲಲ್ಲಿ ಮೂಲವನ್ನು ಅತಿ ಹೆಚ್ಚಾಗಿ ಅನುಸರಿಸಹೋಗಿಯೋ ಅಥವಾ ನ್ನನ ಸ್ವಂತ ಅಶಕ್ತತೆಯಿಂದಲೋ ಹಲಕೆಲವು ವಾಕ್ಯರಚನಾ ದೋಷಗಳೂ ಇನ್ನಿತರ ಕುಂದುಗಳೂ ಉಂಟಾಗಿರಬಹುದು. ಆದಾಗ್ಯೂ ಪ್ರೇಮಚಂದರ ಕಥನಕಲೆ ಈ ದೋಷಗಳನ್ನು ಮರೆಯಿಸುವಷ್ಟು ಶಕ್ತಿಶಾಲಿಯೆಂಬುದನ್ನರಿತೇ ಮುಂದುವರಿದಿದ್ದೇನೆ.

ಈ ಅನುವಾದವನ್ನು ಇಂತಹ ಮುಗ್ಗಟ್ಟಿನ ಕಾಲದಲ್ಲಿಯೂ ಅಚ್ಚು ಹಾಕಿಸುವೆವೆಂದು ಆಶ್ವಾಸನೆಯನ್ನಿತ್ತು ಮುಂದೆ ಬಂದು ಉಪಕರಿಸಿದ ಪ್ರತಿಭಾ ಗ್ರಂಥಮಾಲೆಯ ಸಂಪಾದಕರಾದ ಶ್ರೀ. ಭಾಲಚಂದ್ರ ಘಾಣೇಕರರ ಉಪಕಾರವನ್ನು ನಾನೆಷ್ಟು ಸ್ಮರಿಸಿದರೂ ಅಲ್ಪವೇ. ಈ ಪುಸ್ತಕದ ಕರಡು ಪ್ರತಿಯ ಕೆಲ ಭಾಗವನ್ನು ತಿದ್ದಲು ನೆರವಾದ ಗೆಳೆಯ ಶ್ರೀ. ನೆಕ್ಕಾರ ಸದಾನಂದರಾಯ ಬಿ. ಎ. ಇವರಿಗೂ, ಕೈಬರೆಹದ ಪ್ರತಿಯನ್ನು ಅಂದವಾಗಿ ಬರೆದುಕೊಟ್ಟ ಶ್ರೀ. ಪ್ರಭಾಕರ ವೈಕಲ್ಸಂಕ ಬಿ. ಎಸ್‌ಸಿ. ಇವರಿಗೂ, ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ನನ್ನದೊಂದು ಮಹತ್ವಾಕಾಂಕ್ಷೆ. ಪ್ರೇಮಚಂದರ ಇದಕ್ಕೂ ಉತ್ಕೃಷ್ಟ ಕಾದಂಬರಿಗಳು ಇನ್ನೂ ಹಲವಿವೆ. ಅವುಗಳಲ್ಲಿ ಕೆಲವನ್ನಾದರೂ ಕನ್ನಡಿಸಬೇಕು. ತನ್ಮೂಲಕ ತಾಯಿನುಡಿ-ನಾಡನುಡಿಗಳೆರಡರ ಸೇವೆಯನ್ನೂ ಯಥಾಶಕ್ತಿ ಸಲ್ಲಿಸಬೇಕು-- ಎಂಬುದೇ ಅದು. ಈ ನನ್ನ ಹಂಬಲು ಶೀಘ್ರದಲ್ಲೇ ಕೈಗೂಡುವಂತಾಗಲೆಂದು ತಮ್ಮೆಲ್ಲರ ಶುಭೇಚ್ಛೆಯನ್ನು ಕೋರುವ,

**ಕು. ಶಿ. ಹರಿದಾಸಭಟ್ಟ**

# ರಮಾನಾಥ

## ೧

ಮಳೆಯ ದಿನಗಳು—ಶ್ರಾವಣಮಾಸವು. ಆಕಾಶವಲ್ಲಿ ಬಂಗಾರದ ಮಿರುಗಿನ ಮೋಡಗಳು ತೇಲುತ್ತಿವೆ. ಆಗಾಗ ಹನಿ ಹನಿ ಮಳೆಯು ಬರುತ್ತಲಿದೆ. ಮಧ್ಯಾಹ್ನವು ಕಳೆದು ಆಗಲೇ ಹೆಚ್ಚು ಹೊತ್ತಾಗಿಲ್ಲವಾದರೂ ಸಾಯಂಕಾಲವಾದಂತೆ ಕಾಣಿಸುತ್ತಿದೆ. ಮಾವಿನ ತೋಟದಲ್ಲಿ ಉಯ್ಯಾಲೆಗಳನ್ನು ಕಟ್ಟಿರುವರು. ಹುಡುಗಿಯರು ಜೋಕಾಲಿಯಾಡುತ್ತಿದ್ದಾರೆ; ಅವರ ತಾಯಂದಿರೂ ಸಹ. ನಾಲ್ಕೈದು ಮಂದಿ ತಾವೇ ತೂಗುತ್ತಿರುವರು. ಇನ್ನು ಕೆಲವರು ತೂಗಿಸಿಕೊಳ್ಳುತ್ತಿರುವರು ಹಲವೊಂದು ರಾಗಗಳ ಹಲವಾರು ಹಾಡುಗಳು ಹುಮ್ಮಸಿನಿಂದ ಹೊಮ್ಮುತ್ತಿವೆ ಈ ತಿಂಗಳಲ್ಲಿ ಹೆಂಗಸರ ಬಾಲ್ಯಸ್ಮೃತಿಗಳು ಜಾಗ್ರತವಾಗುತ್ತವೆ. ಹನಿ ಹನಿ ಮಳೆಯು ಹೃದಯದ ಚಿಂತೆಗಳೇನಿದ್ದರೂ ಅವನ್ನು ತೊಳೆಯುವುದು; ಬಾಡಿದ ಮನವನ್ನಾದರೂ ಚಿಗುರಿಸುವುದು. ಎಲ್ಲರ ಎದೆಗಳೂ ಉಲ್ಲಾಸಭರಿತವಾಗಿರುವುವು.

ಮಣಿಗಾರನೊಬ್ಬನು ಬಂದು ಉಯ್ಯಾಲೆಗಳ ಸಮೀಪ ನಿಂತನು. ಅವನನ್ನು ಕಂಡೊಡನೆ ಜೋಕಾಲಿಯಾಡುವುದು ನಿಂತುಹೋಯಿತು. ಚಿಕ್ಕವರು ದೊಡ್ಡವರು ಎಲ್ಲರೂ ಬಂದು ಅವನನ್ನು ಸುತ್ತುಗಟ್ಟಿದರು. ಮಣಿಗಾರನು ತನ್ನ ಪೆಟ್ಟಿಗೆಯನ್ನು ತೆರೆದು ಹೊಳಹೊಳೆಯುವ ಒಡವೆಗಳನ್ನು ಹೊರತೆಗೆದು ತೋರಿಸತೊಡಗಿದನು. ಮುತ್ತಿನ ಸರಗಳು, ಲೇಸ್, ಜರಿ, ಬಣ್ಣ ಬಣ್ಣದ ಚಪ್ಪಲಿಗಳು, ಅಂದಚಂದದ ಗೊಂಬೆಗಳು ಮತ್ತು ಅವುಗಳಿಗೆ ಒಪ್ಪುವ ಆಭರಣಗಳು, ಮಕ್ಕಳ ಆಟಿಕೆಗಳು— ಎಲ್ಲಾ ಇದ್ದುವು. ಅವರೆಲ್ಲ ತಂತಮಗೆ ಬೇಕಾದುವನ್ನು ಕೊಂಡರು. ದೊಡ್ಡ ದೊಡ್ಡ ಕಣ್ಣುಗಳುಳ್ಳ ಒಬ್ಬ ಹುಡುಗಿಯು ಆ ಆಭರಣಗಳಲ್ಲಿ ಅತ್ಯಂತ ಸುಂದರವಾದುದನ್ನು ಮೆಚ್ಚಿದಳು. ಅದು ಒಂದು ಚಂದ್ರಹಾರ. ತಾಯಿಯೊಡನೆ ಹೇಳಿದಳು:— ಅಮ್ಮಾ, ನನಗೆ ಇದು ಬೇಕು. ತಾಯಿಯು ಮಣಿಗಾರನನ್ನು ಕೇಳಿದಳು:— ಇದರ ಬೆಲೆಯೆಷ್ಟು ?

ಮಣಿಗಾರನು ಹಾರವನ್ನು ಕರವಸ್ತ್ರದಿಂದ ಒರಸುತ್ತ ಹೇಳಿದನು:—ಬೆಲೆಯೇನೋ ಒಂದು ರೂಪಾಯಿ ನಾಲ್ಕಾಣೆ; ಇನ್ನು ಒಡತಿ ಎಷ್ಟು ಅಪ್ಪಣೆ ಕೊಡುಸುತ್ತೀರೋ ಅಷ್ಟು.

ತಾಯಿಯು ಹೇಳಿದಳು—ಬಹಳ ಹೆಚ್ಚಾಯಿತು. ನಾಲ್ಕು ದಿನಗಳಲ್ಲಿ ಇದರ ಬಣ್ಣವು ಮಾಸಿ ಹೋಗುವುದು.

ಮಣಿಗಾರನು ಮಾರ್ಮಿಕಭಾವದಿಂದ ತಲೆಯಲ್ಲಾಡಿಸುತ್ತ ಹೇಳಿದನು—ಅಮ್ಮಾ, ಇನ್ನು ನಾಲ್ಕು ದಿನಗಳಲ್ಲಿ ನಮ್ಮ ಸಣ್ಣ ಯಜಮಾನಿಗೆ ಈ ಹಾರವೇಕೆ, ನಿಜವಾದ ಚಂದ್ರಹಾರವೇ ದೊರೆಯುವುದು. ಸಹೃದಯತೆಯಿಂದ ತುಂಬಿದ ಈ ಮಾತುಗಳು ತಾಯಿಯ ಹೃದಯದ ಮೇಲೆ ತುಂಬಾ ಪರಿಣಾಮವನ್ನು ಮಾಡಿದುವು. ಹಾರವನ್ನು ಕೊಂಡಾಯಿತು.

ಹುಡುಗಿಯ ಆನಂದಕ್ಕೆ ಪಾರವೇ ಇಲ್ಲ. ವಜ್ರದ ಹಾರವು ಸಿಕ್ಕಿದ್ದರೂ ಆಕೆಗೆ ಇಷ್ಟು ಸಂತಸವಾಗುತ್ತಿದ್ದಿಲ್ಲ. ಅವಳು ಅದನ್ನು ತೊಟ್ಟುಕೊಂಡು ಹಳ್ಳಿಯಲ್ಲೆಲ್ಲ ಕುಣಿದಾಡಿದಳು. ಅವಳ ಹತ್ತಿರವಿದ್ದ ಬಾಲಸಂಪದದಲ್ಲಿ ಎಲ್ಲಕ್ಕೂ ಹೆಚ್ಚಿನದು, ಎಲ್ಲಕ್ಕಿಂತ ಪ್ರಿಯವಾದುದು, ಇದೇ ಸ್ಫಟಿಕ ಶಿಲೆಯ ಚಂದ್ರಹಾರವು.

ಹುಡುಗಿಯ ಹೆಸರು ಜ್ವಾಲಪ್ಪ-ತಾಯಿಯ ಹೆಸರು ಮಾನಕಿ.

## ೨

ಮಹಾಶಯ ದೀನದಯಾಳರು ಪ್ರಯಾಗದ ಒಂದು ಚಿಕ್ಕ ಹಳ್ಳಿಯಲ್ಲಿ ವಾಸಮಾಡುತ್ತಿದ್ದರು. ಅವರು ಬೇಸಾಯಗಾರರಲ್ಲವಾದರೂ ಬೇಸಾಯ ಮಾಡುತ್ತಿದ್ದರು; ಜಮೀನುದಾರರಲ್ಲವಾದರೂ ಜಮೀನುದಾರಿ ಮಾಡುತ್ತಿದ್ದರು; ಪೋಲೀಸರಲ್ಲವಾದರೂ ಪೋಲೀಸುಗಿರಿ ಮಾಡುತ್ತಿದ್ದರು. ಅಂದರೆ ಅವರು ಜಮೀನುದಾರರ ಮೊಕ್ತಾರರು. ಹಳ್ಳಿಯಲ್ಲೆಲ್ಲ ಅವರದೇ ಅಧಿಕಾರ, ಅವರದೇ ಜಬರ್. ಅವರಲ್ಲಿ ನಾಲ್ಕು ಆಳುಗಳು, ಒಂದು ಕುದುರೆ, ದನ ಎಮ್ಮೆಗಳೆಷ್ಟೋ—ಇದ್ದವು. ಸಿಕ್ಕುವ ಐದು ರೂಪಾಯಿ ಸಂಬಳವು ಅವರ ಎಲೆಯಡಿಕೆಗೂ ಸಾಲದು. ಅವರ ಆದಾಯದ ದಾರಿ ಇನ್ನಾವುದಿತ್ತೋ ಬಲ್ಲವರಾರು? ಜಾಲಪಳು ವರ ಮಗಳು. ಮೊದಲು ಅವಳಿಗೆ ಮೂವರು ಸೋದರರಿದ್ದರು. ಆದರೆ

ಈಗ ಆಕೆ ಒಬ್ಬಳೆ. ಅವಳೊಡನೆ ಯಾರಾದರೂ ನಿನ್ನ ಸೋದರರೇನಾದರೆಂದು ಕೇಳಿದರೆ ಅವಳು ತುಂಬುಸರಲತೆಯಿಂದ ಉತ್ತರಿಸುವಳು—ಎಲ್ಲೋ ದೂರಕ್ಕೆ ಆಡಲು ಹೋಗಿದ್ದಾರೆ! ಮೊಕ್ತ್ಯಾರಸಾಹೇಬರು ಯಾರೋ ಒಬ್ಬ ಬಡವನಿಗೆ ಕೊಡಿಸಿದ ಪೆಟ್ಟಿನಿಂದ ಅವನು ಸತ್ತೇಹೋದನಂತೆ. ಮತ್ತೆ ಮೂರೇ ಮೂರು ವರ್ಷಗಳಲ್ಲಿ ಇದ್ದ ಮೂವರೂ ಮಕ್ಕಳು ಅತ್ತಕಡೆ ತೆರಳಿದರು. ಹೀಗೆ ಜನರಲ್ಲಿ ವಾಡಿಕೆ ಬಿದ್ದಿತ್ತು. ಅಂದಿನಿಂದ ಈ ಬಡಪ್ರಾಣಿಯು ಬಹಳ ಎಚ್ಚರದಿಂದ ಕಾಲಿಡುತ್ತಿತ್ತು. ಬಹಳ ಸಾವಧಾನವಾಗಿ ಮುಂದುವರಿಯುತ್ತಿದ್ದರು. ಬಿಸಿ ಹಾಲು ಕುಡಿದು ನಾಲಿಗೆ ಸುಟ್ಟುಕೊಂಡಿದ್ದರು; ಈಗ ಮಜ್ಜಿಗೆಯನ್ನಾದರೂ ಊದಿಕೊಳ್ಳದೆ ಕುಡಿಯುತ್ತಿದಿಲ್ಲ.

ತಾಯಿ ತಂದೆಗಳ ಜೀವನದಲ್ಲಿ ಬೇರೆ ಆಸರೆ ಏನಿತ್ತು!

ಪ್ರಯಾಗಕ್ಕೆ ಹೋದಾಗಲೆಲ್ಲ ದೀನದಯಾಳರು ಜಾಲಪಳಿಗಾಗಿ ಏನಾದರೊಂದು ಭೂಷಣವನ್ನು ತಂದೇತರುತ್ತಿದ್ದರು. ಬೇರೆ ಯಾವ ವಸ್ತುವನ್ನು ತಂದುಕೊಟ್ಟರೂ ಜಾಲಪಳು ಇದರಷ್ಟು ಸಂತಸಪಟ್ಟಾಳೆಂದು ಅವರ ವ್ಯವಹಾರಿಕ ಬುದ್ಧಿಗೆ ತೋಚುತ್ತಲೇ ಇರಲಿಲ್ಲ. ಗೊಂಬೆಗಳನ್ನೂ ಇತರ ಆಟದ ಸಾಮಗ್ರಿಗಳನ್ನೂ ಅವರು ವ್ಯರ್ಥವೆಂದು ಬಗೆಯುತ್ತಿದ್ದರು; ಆದುದರಿಂದ ಜಾಲಪಳು ಆಭರಣಗಳನ್ನು ಹಿಡಕೊಂಡೇ ಆಡುವಳು—ಅವೇ ಅವಳ ಆಟಿಕೆಗಳು. ಮಣಿಗಾರನಿಂದ ಕೊಂಡ ಆ ಹಾರವು ಈಗವಳ ಅಚ್ಚು ಮೆಚ್ಚಿನ ಆಟಿಕೆ. ಹಳ್ಳಿಯ ಹಬ್ಬ ಉತ್ಸವಗಳಿಗೆ ಹೋಗುವಾಗ ಅವಳು ಅದನ್ನೇ ತೊಡುತ್ತಿದ್ದಳು. ಬೇರಾವ ಒಡವೆಯೂ ಆಕೆಯ ಕಣ್ಣುಗಳಿಗೆ ಒಗ್ಗುತ್ತಿದ್ದಿಲ್ಲ.

ದೀನದಯಾಳರು ಒಮ್ಮೆ ಪ್ರಯಾಗದಿಂದ ಬರುವಾಗ ಮಾನಕಿಗೆ ಒಂದು ಚಂದ್ರಹಾರವನ್ನು ತಂದರು. ಮಾನಕಿಗೆ ಈ ಆಸೆ ಬಹಳ ದಿನಗಳಿಂದ ಇತ್ತು. ಹಾರವು ದೊರೆತಾಗ ಆಕೆಗೆ ಹಿಡಿಸಲಾರದಷ್ಟು ಆನಂದವಾಯಿತು.

ಜಾಲಪಳಿಗೆ ಈಗ ತನ್ನ ಹಾರದ ಮೇಲೆ ಬೇಸರ. ತಂದೆಯೊಡನೆ ತನಗೂ ಅಂತಹದೇ ಮಾಡಿಸಿಕೊಡಿರೆಂದು ಕೇಳಿದಳು. ಆಗ ತಾಯಿಯು ಮುಗಳ್ನಗುತ್ತಾ ಎಂದಳು—ನಿನಗೆ ನಿನ್ನ ಅತ್ತೆಯ ಮನೆಯವರು ತಂದು ಕೊಡುವರು, ಮಗೂ.

ದೀನದಯಾಳರಿಗೆ ಆರುನೂರು ರೂಪಾಯಿ ಬೆಲೆ ಬಾಳುವ ಇಂತಹ ಇನ್ನೊಂದು ಹಾರವನ್ನು ತಂದೇನೆಂಬ ಭರವಸೆ ಇರಲಿಲ್ಲ. ಇದನ್ನು ತರಬೇಕಾದರೂ ಅವರು ಎಷ್ಟು ವರ್ಷ ಪರಿಶ್ರಮಪಟ್ಟಿದ್ದರು!

ಜಾಲಪಳಿಗೆ ತಾಯಿಯ ಮಾತುಗಳನ್ನು ಕೇಳಿ ಸಾಚುಗೆಯಾಯಿತು. ಅಲ್ಲಿಂದೆದ್ದು ಓಡಿದಳು. ಆದರೆ ಈಗ ಅವಳಿಗೆ ಅತ್ತೆಮನೆಯ ಹೆದರಿಕೆ ಹೋಯಿತು. ತಂದೆಯಿಂದ ಮಾಡಿಸಲಿಕ್ಕಾಗದ ಹಾರವನ್ನು ಅವರು ಮಾಡಿಸುವರೆಂದಾದ ಬಳಿಕ, ಆವರು ತನ್ನನ್ನೆಷ್ಟು ಪ್ರೀತಿಸಲಿಕ್ಕಿಲ್ಲ!

ಹೀಗೆ ನಗುನಗುತ್ತ ಏಳು ವರ್ಷಗಳು ಸಂದುವು. ಅವಳ ಚಿರಸಂಚಿತ ಅಭಿಲಾಷೆಯು ಪೂರ್ತಿಗೊಳ್ಳುವ ಆ ದಿನವೂ ಬಂದು ಬಿಟ್ಟಿತು.

೨

ದೀನದಯಾಳರ ಪರಿಚಯದವರಲ್ಲಿ ದಯಾನಾಥರೆಂಬ ಒಬ್ಬರು ಸಜ್ಜನರಿದ್ದರು. ಕಚೇರಿಯಲ್ಲಿ ಐವತ್ತು ರೂಪಾಯಿಗಳ ಸಂಬಳ ದೊರೆಯುತ್ತಿತ್ತು. ಮನಸ್ಸು ಮಾಡಿದ್ದರೆ ಸಾವಿರಾರು ರೂಪಾಯಿಗಳನ್ನು ಸಂಪಾದಿಸಬಹುದಿತ್ತು; ಆದರೆ ಒಂದು ಕಾಸಾದರೂ ಸರಿಯೇ, ಆ ದುರ್ಮಾರ್ಗದಿಂದ ಸ್ವೀಕರಿಸಲಿಕ್ಕಿಲ್ಲ. ಬಹಳ ಉಚ್ಚ ಆದರ್ಶವುಳ್ಳವರೆಂದೇನೂ ಅಲ್ಲ; ಆದರೆ ಲಂಚವನ್ನು ಕೊಳ್ಳುವುದು ಅವರ ಮನಸ್ಸಿಗೆ ಕೊಂಚವೂ ಬಾರದು. ತನ್ನ ಕಣ್ಣ ಮುಂದೆಯೇ ಲಂಚದ ದುಷ್ಪರಿಣಾಮವನ್ನು ಕಂಡವರಾದ್ದರಿಂದ ಹೀಗೆಯೋ ಏನೋ ಅನುಚಿತವಾಗಿ ಬಂದುದು ಅನುಚಿತದಲ್ಲಿಯೇ ಹೋಗುವುದೆಂಬುದು ಅವರ ದೃಢವಾದ ನಂಬುಗೆ. ಈ ಮಾತನ್ನು ಅವರು ಎಂದೂ ಮರೆಯುತ್ತಿದ್ದಿಲ್ಲ.

ಆದರೆ ಈ ಕಾಲದಲ್ಲಿ ಐವತ್ತು ರೂಪಾಯಿ ಎಲ್ಲಿಯ ವರೆಗೆ ಬಂದೀತು! ಐವರ ಪೋಷಣೆಯು ಸಾಗುವುದೆಂದರೆಯೆ ಬಹಳ ಕಷ್ಟ. ಹಿರೇಹುಡುಗನು ಎರಡು ತಿಂಗಳತನಕ ಕಾಲೇಜಿನಲ್ಲಿದ್ದು ಬಳಿಕ ಬಿಟ್ಟು ಬಿಟ್ಟನು. ತಂದೆ ಹೇಳಿದರು—ನಿನ್ನ ಡಿಗ್ರಿಗಾಗಿ ಮನೆಯಲ್ಲಿದ್ದವರೆಲ್ಲಾ ಉಪವಾಸ ಬೀಳುತ್ತಾರೆ. ಓದಬೇಕೆಂದಿದ್ದರೆ ನಿನ್ನ ಪುರುಷಾರ್ಥದಿಂದ ಓದಿಕೊ. ಹೀಗೆ ಮಾಡಿದವರು ಎಷ್ಟೋ ಜನರಿದ್ದಾರೆ. ನೀನೂ ಮಾಡಬಲ್ಲೆ. ಆದರೆ ರಮಾನಾಥನಲ್ಲಿ ಅಷ್ಟು ಶ್ರದ್ಧಾಸಕ್ತಿಗಳಿದ್ದಿರಲಿಲ್ಲ. ಈಚೆಗೆ ಎರಡು ವರ್ಷಗಳಿಂದ ಅವನು

ಯಾವುದಕ್ಕೂ ಬೇಡಾದವನಾಗಿದ್ದನು. ಚದುರಂಗ, ಶಿರುಗಾಟ, ತಾಯಿ ಮತ್ತು ಚಿಕ್ಕ ಚಿಕ್ಕ ತಮ್ಮಂದಿರನ್ನು ಕಾಡಿಸುವುದು; ಇದರಲ್ಲಿ ಕಾಲಕಳೆಯುತ್ತಿದ್ದನು. ಹತ್ತು ಮಂದಿ ಗೆಳೆಯರು ಹತ್ತು 'ಸೂಟ' ನ್ನು ಹೊಲಿಸಿದರೆ ಸಾಕು, ಇವನಿಗೆ ಹತ್ತು ಸೂಟುಗಳು ಆದಂತೆಯೆ. ಒಂದೊಂದು ದಿನ ಒಬ್ಬೊಬ್ಬರ ಉಪಯೋಗವನ್ನು ಮಾಡಿಕೊಂಡರೆ ಸರಿಯಲ್ಲವೆ ? ಸಹಕಾರ ಪದ್ಧತಿಯ ನವೀನ ಕ್ರಮ ಪ್ರಯೋಗವಿದು. ದೀನದಯಾಳರು ಈ ಯುವಕನನ್ನೆ ಜಾಲಪಳಿಗಾಗಿ ಆರಿಸಿದ್ದರು. ದಯಾನಾಥರು ಮದುವೆಗೆ ಸಮ್ಮತಿಸುತ್ತಿದ್ದಿಲ್ಲ; ಆದರೆ ರಾಮೇಶ್ವರಿಯು ಕೇಳಬೇಕೆ ? ಸೊಸೆಯನ್ನು ಆದಷ್ಟು ಶೀಘ್ರದಲ್ಲಿ ಕಾಣಬೇಕೆಂಬ ಹಂಬಲು ಆಕೆಯದು. ಅದೂ ಸಹಜವೆ. ಏಕಂದರೆ ಅವಳ ಕಣ್ಣುಮುಂದೆಯೇ ಮದುವಣಗಿತ್ತಿಯರಾಗಿ ಬಂದವರು ಈಗ ಮೊಮ್ಮಕ್ಕಳನ್ನು ಉಣಿಸುತ್ತಿದ್ದಾರೆ. ಹೀಗಾಗಿ ದೀನದಯಾಳರ ಸಂದೇಶವು ಬಂದಾಗ ಅವಳು ಕೂಡಲೆ ಒಪ್ಪಿಕೊಂಡಳು. ಬಂದವರನ್ನು ಬಿಟ್ಟರೆ ಮತ್ತೆ ಯಾವಾಗಲೋ ಏನೋ. ಇಲ್ಲಿ ಹಣವಿದ್ದಿದ್ದರೆ ಆದಾದರೂ ಒಂದು ಲೆಕ್ಕ. ಹುಡುಗಗನ್ನು ಯಾರು ನೋಡುತ್ತಾರೆ ? ಆದ್ದರಿಂದ ಅವಳು ಈ ಸಂದರ್ಭವನ್ನು ಗಟ್ಟಿಹಿಡಿದು ತನ್ನ ಶಕ್ತಿಸರ್ವಸ್ವದಿಂದ ಹೋರಾಡಿ ಕೊನೆಗೆ ವಿಜಯಶಾಲಿಯಾದಳು.

ದಯಾನಾಥರು ಹೇಳಿದರು—ಏನು ಹೇಳುತ್ತೀಯೆ ? ನೀನಾಯಿತು, ನಿನ್ನ ಕೆಲಸವಾಯಿತು, ಮಾಡಿಕೊ. ನನ್ನಲ್ಲಂತೂ ಶಕ್ತಿಯಿಲ್ಲ. ಯಾವನು ತನ್ನ ಹೊಟ್ಟೆಯ ಚಿಂತೆಯನ್ನು ಮಾಡುವುದಿಲ್ಲವೋ, ಅಂಥವನಿಗೆ ಮದುವೆ ಮಾಡುವುದು ಅಧರ್ಮವೆಂದೇ ನನಗೆ ತೋರುತ್ತಿದೆ. ಹಣದ ಚಿಂತೆಯೊಂದು ಬೇರೆ ಇದ್ದೇ ಇದೆಯಲ್ಲ. ಒಂದು ಸಾವಿರ, ಡೌಲು ಆಡಂಬರಗಳಿಗೇ ಬೇಕು. ಮತ್ತೆ ಆಭರಣಕ್ಕೆ ಒಂದು ಸಾವಿರವಾದರೂ ಬೇಕಾದೀತು. (ಕಿವಿಗಳನ್ನು ಕೈಗಳಿಂದ ಮುಚ್ಚಿಕೊಂಡು) ಇಲ್ಲ, ಇಲ್ಲ, ನನ್ನಿಂದ ಈ ಹೊರೆಯನ್ನು ಹೊರುವುದಾಗದು.

ರಾಮೇಶ್ವರಿಯ ಬಾಯಿಯನ್ನು ಮುಚ್ಚಲು ಈ ಕಾರಣಗಳು ಸಮರ್ಥವಾಗಲಿಲ್ಲ. ಅವಳೆಂದಳು—'ಅಲ್ಲಿಂದ ಏನಾದರೂ ಸಿಗದಿರುವುದೆ ?

'ನಾನು ಅವರನ್ನು ಬೇಡಲು ಹೋಗಲಾರೆ.'

'ನೀವು ಏಕೆ ಬೇಡಬೇಕು? ಅವರು ತಾವಾಗಿ ಕೊಡುವರು. ಮಗಳ ಮದುವೆಯಲ್ಲಿ ಯಾರೂ ಹಣದ ಮುಖ ನೋಡುವದಿಲ್ಲ. ಹಾಂ, ಸಾಮರ್ಥ್ಯ ವೇನೋ ಇರಬೇಕೆನ್ನಿ. ದೀನದಯಾಳರು ಕಡಮೆ ಕುಳುವಾರಲ್ಲ. ಒಬ್ಬಳೇ ಹುಡುಗಿಯಂತೆ. ಹಿಂದಿಲ್ಲ, ಮುಂದಿಲ್ಲ. ಉಳಿಸಿಡುವುದಾದರೂ ಇನ್ನಾರಿಗೆ ಹೇಳಿ?

ದಯಾನಾಥರು ಈಗ ನಿರುಪಾಯರಾದರು. ಹೀಗೆಂದರು—ಅವರು ಬೇಕಾದರೆ ಒಂದು ಲಕ್ಷವೇ ಕೊಡಲಿ, ಅಥವಾ ಒಂದು ಕಾಸೂ ಕೊಡದಿರಲಿ. ನಾನು ಕೊಡು ಎನ್ನವುದೂ ಇಲ್ಲ. ಬೇಡವೆನ್ನುವುದೂ ಇಲ್ಲ. ಸಾಲ ಮಾತ್ರ ಮಾಡಲೊಲ್ಲೆನು. ಹಾಗೆ ಒಂದು ಪಕ್ಷಕ್ಕೆ ಸಾಲ ಮಾಡಿದರೆ ಯಾರ ಮನೆಗೆ ಕನ್ನ ಹೊಡೆದು, ಅದನ್ನು ತೀರಿಸಲಿ?

ಈ ಬಾಧೆಯನ್ನೂ ಗಾಳಿಗೆ ಹಿಡಿಯುತ್ತಾ, ರಾಮೇಶ್ವರಿ ಹೇಳಿದಳು—ತಿಲಕದ ಕಾಲದಲ್ಲಿ ಒಂದು ಸಾವಿರಕ್ಕೆ ಕಡಮೆ ಕೊಡಲಾರರೆಂದು ನನಗೆ ನಂಬುಗೆ ಇದೆ. ನಿಮ್ಮ ಆಡಂಬರದ ಖರ್ಚಿಗೆ ಇಷ್ಟೇ ಸಾಕು. ಆಭರಣಗಳಿಗೆ ಯಾರಾದರೂ ಸರಾಫನನ್ನು ಹಿಡಿಯುವ. ತಿಲಕದ ಸಮಯ ಒಂದು ಸಾವಿರ ಕೊಟ್ಟವರು ಬಾಗಿಲಲ್ಲಿ ಒಂದು ಸಾವಿರವಾದರೂ ಕೊಡದಿರುವರೆ? ಅವನ್ನು ಸರಾಫನಿಗೆ ಕೊಟ್ಟರಾಯಿತು. ನೂರಿನ್ನೂರು ಬಾಕಿಯಾದರೆ ಮೆಲ್ಲ ಮೆಲ್ಲಗೆ ತೀರಿಸಬಹುದು. ನಮ್ಮ ಹುಡುಗನಿಗೂ ಅಷ್ಟು ಹೊತ್ತಿಗೆ ಏನಾದರೊಂದು ಕೆಲಸ ದೊರೆಯದಿರುವುದೆ?

ದಯಾನಾಥರು ಉಪೇಕ್ಷೆಯ ಭಾವದಿಂದ ಹೇಳಿದರು—ಸರಿ, ಅವನಿಗೆ ಕೆಲಸಸಿಕ್ಕಿದಂತೆಯೆ. ಚದುರಂಗ ಮತ್ತು ಆಲೆದಾಟಗಳಲ್ಲಿ ಸಮಯ ಸಿಗದವನಿಗೆ ಎಲ್ಲ ಬಾಗಿಲುಗಳೂ ಮುಚ್ಚಿಕೊಂಡೇ ಇರುವುವು.

ರಾಮೇಶ್ವರಿ ಎಂದಳು—ಹುಡುಗಿ ಬಂದ ಬಳಿಕಲಾದರೂ ಅವನ ಕಣ್ಣು ತೆರೆಯಬಹುದು. ನೋಡುವ. ನಿಮ್ಮ ವಿಷಯವೇ ಯೋಚಿಸಿಕೊಳ್ಳಿ. ಕುತ್ತಿಗೆಗೆ ನೊಗ ಬೀಳುವತನಕ ಇವೆಲ್ಲಾ ಆಟಗಳು. ಒಮ್ಮೆ ನೊಗವು ಬಿತ್ತೋ, ತಲೆಪಿತ್ತವೆಲ್ಲ ಇಳಿದು ಹೋಗುವುದು. ನಿಷ್ಕರ್ಮಿಗಳನ್ನು ದಾರಿಗೆ ತರುವುದಕ್ಕೆ ಇದಕ್ಕಿಂತ ಉತ್ತಮ ಮಾರ್ಗವಿಲ್ಲ.

ದಯಾನಾಥರು ಸೋತು ಹೋಗಿ ವೃತ್ತಪತ್ರದ ಮೊರೆ ಹೊಕ್ಕರು. ತನ್ನ ಸೋಲನ್ನು ಮರೆಯಿಸಲು ಅವರೊಡನಿದ್ದ ಸಾಧನವೆಂದರೆ ಇದೊಂದೆ.

೪

ಸರಳರಾದವರೊಡನೆ ಸರಳತೆಯಿಂದಲೂ, ವಕ್ರಿಗಳೊಡನೆ ವಕ್ರತೆಯಿಂದಲೂ ವರ್ತಿಸುವ ಜನರಲ್ಲಿ ದೀನದಯಾಳರೂ ಒಬ್ಬರು ದಯಾನಾಥರ ಆಸೆಯ ಬಾಯಿ ದೊಡ್ಡದಾಗಿರುತ್ತಿದ್ದರೆ, ಸಾವಿರ-ಸಾವಿರಗಳ ಮಾತನ್ನೇ ಆವರಾಡುತ್ತಿದ್ದರೆ, ದೀನದಯಾಳರು ಅವರಿಗೆ ಸಾಯುವತನಕ ಮರೆಯಲಾಗದಂತಹ ಪಾಠವನ್ನು ಕಲಿಸದಿರುತ್ತಿದ್ದಿಲ್ಲ. ದಯಾನಾಥರ ಸಜ್ಜನತೆಗೆ ಮರುಳಾಗಿ ತಿಲಕದ ಸಮಯವೇ ಒಂದು ಸಾವಿರ ರೂಪಾಯಿ ಕೊಟ್ಟುಬಿಟ್ಟರು.

ಮನೆಗೆ ಬಂದಾಗ ಮಾನಕಿಯೆಂದಳು— ತಿಲಕಕ್ಕೆ ಸಾವಿರವನ್ನಿತ್ತಿರಲ್ಲ-ಬಾಗಿಲಲ್ಲಿ ಅಷ್ಟನ್ನೇ ಕೊಡಬೇಡವೆ? ಅದು ಬರುವದೆಲ್ಲಿಂದ?

ದೀನದಯಾಳರು ಮುನಿಸಿನಿಂದ ಹೇಳಿದರು—ದೇವರಿದ್ದಾನೆ. ಅವರು ಉದಾರತೆಯಿಂದ ಹುಡುಗನನ್ನು ನಮಗೆ ಕೊಡುತ್ತಿದ್ದಾರೆ. ನಾವು ಅವರಷ್ಟೇ ಸಭ್ಯರೆಂದೂ, ಸೌಶೀಲ್ಯದ ಬೆಲೆಯನ್ನರಿತವರೆಂದೂ, ಅವರಿಗೆ ತೋರಿಸಿಕೊಡುವೆನು. ಎಲ್ಲಾದರೂ ಹೀನೈಸಿದ್ದರೆ ಅವರ ಸಮಾಚಾರ ತೆಗೆದುಕೊಳ್ಳುತ್ತಿದ್ದೆ.

ದೀನದಯಾಳರು ಒಂದು ಸಾವಿರ ರೂಪಾಯಿಗಳನ್ನು ಕೊಟ್ಟರೂ, ದಯಾನಾಥನ ಹೊರೆಯೇನೂ ಇಳಿಯಲಿಲ್ಲ. ಏಕೆ? ಹೆಚ್ಚಿತೆಂದು ಅನ್ನಬೇಕು. ಸಾಲವೆಂದರೆ ಹತ್ತು ಹರದಾರಿ ಹಿಂದಕ್ಕೋಡುತ್ತಿದ್ದವರು ಈಗ ಮದುವೆಯನ್ನು ವಿಜೃಂಭಣೆಯಿಂದ ನೆರವೇರಿಸಬೇಕೆಂದೇ ನಿರ್ಧರಿಸಿದರು. ಮೂರು ಸಾವಿರದ ವರೆಗಿನ ಚಿನ್ನದ ಒಡವೆಗಳನ್ನು ಮಾಡಿಸಿದರು. ಸರಾಫನಿಗೆ ಒಂದು ಸಾವಿರ ರೂಪಾಯಿಗಳನ್ನು ಮುಂದಿನ ವಾರದಲ್ಲಿ ಸಲ್ಲಿಸುವುದಾಗಿ ಮಾತುಕೊಟ್ಟರು. ಸರಾಫನು ಅಡ್ಡಿಮಾಡಲೂ ಇಲ್ಲ. ಇಷ್ಟೆಲ್ಲ. ಆದರೂ ಚಂದ್ರಹಾರದ ಕೊರತೆಯೊಂದು ಉಳಿದೇ ಉಳಿಯಿತು. ಕೈಹಾಕಿದ ಮೇಲೆ ಅದನ್ನೊಂದು ಬಿಡುವುದೇಕೆ? ‘ಹತ್ತರ ಕೂಡ ಹನ್ನೊಂದ’ರ ನೀತಿಯನನುಸರಿಸುವುದೆಂದು ದಯಾನಾಥರ ಮನಸ್ಸೆಂದಿತು. ಆದರೆ ರಾಮೇಶ್ವರಿಯು ಒಪ್ಪಲಿಲ್ಲ.

ದಯಾನಾಥರು ಕೋಪದಿಂದ ಕಾದು ಹೇಳಿದರು—ನಿನಗೇನು, ಮನೆಯಲ್ಲಿ ಹಾಯಾಗಿ ಮಲಗಿಕೊಂಡರಾಯಿತು. ಅವರೆಲ್ಲ ಹೀಯಾಳಿಸುವಾಗ ಸಾಯಬೇಕು ನಾನು!

ರಾಮೇಶ್ವರಿ—ಇದಕ್ಕೆಲ್ಲ ಕೊಡುವುದೆಲ್ಲಿಂದ ಎಂಬುದನ್ನು ಯೋಚಿಸಿದ್ದೀರಾ ?

ದಯಾನಾಥ—ಕಡಮೆಯೆಂದರೆ ಒಂದು ಸಾವಿರ ಅಲ್ಲಿ ಸಿಕ್ಕೇ ಸಿಗುವುದು.

ರಾಮೇಶ್ವರಿ— ಅಬ್ಬ, ಇಷ್ಟೊಂದು ನಿರ್ದಯತೆಯೆ !

ದಯಾನಾಥ—ಹಾಗಲ್ಲ, ಏನಾದರೂ ಸ್ವಲ್ಪ ಸಿಗುವುದು ಖಂಡಿತ.

ರಾಮೇಶ್ವರಿ—ಅಲ್ಲಿ ಸಿಕ್ಕಿದರೆ, ಅದಕ್ಕೆ ದಾರಿಯೂ ಅಲ್ಲಿಯೇ ಇದೆ. ಹೆಸರು ಬರುವುದು ಭಂಗಾರದ ಆಭರಣಗಳಿಂದಲ್ಲ—ದಾನದಕ್ಷಿಣೆಗಳಿಂದ.

ಹೀಗೆ ಚಂದ್ರಹಾರದ ಪ್ರಸ್ತಾಪವು ಬಿದ್ದುಹೋಯಿತು. ದಯಾನಾಥರು ಬಾಹ್ಯಾಡಂಬರವನ್ನು ಅನಾವಶ್ಯಕವೆಂದು ತಿಳಿಯುತ್ತಿದ್ದರು. ರಮಾನಾಥನು ಅದನ್ನು ಪರಮಾವಶ್ಯಕವೆಂದು ಭಾವಿಸುತ್ತಿದ್ದನು. ಅವನ ಮತ್ತು ಅವನ ಗೆಳೆಯರ ನಿರ್ಧಾರದ ಮೇರೆಗೆ ಪಲ್ಲಕ್ಕಿಯ ಉಚ್ಚಾಟನೆಯಾಯಿತು—ಮೋಟರು ಬಂದಿತು. ಹೀಗೆ ನಡೆದ ಬದಲಾವಣೆಗಳು ಇನ್ನೆಷ್ಟೋ ! ಇವನ್ನೆಲ್ಲಾ ಕಂಡು ದಯಾನಾಥರಿಗೆ ಗಾಬರಿಯಾಗಿತ್ತು. ಆದರೆ ಮಾಡುವುದೇನು ? ನೀರಿಗೆ ಇಳಿದಾಗಿತ್ತು.

೫

ರಸಿಕ ಸಮಾಜವು ಮೆಚ್ಚಿದರೆ ನಾಟಕವು 'ಪಾಸಾ' ಗುವುದು; ದಿಬ್ಬಣವು ದಾರಿಯಲ್ಲಿ ಹೋಗುತ್ತಿರುವಾಗ ಅದನ್ನು ಜನರು ಮೆಚ್ಚಿದರೆ ಆಗ ದಿಬ್ಬಣದ ನಾಟಕವು 'ಪಾಸಾ' ದ ಹಾಗೆ ಲೆಕ್ಕ. ನಾಟಕದ ಪರೀಕ್ಷೆಗೆ ನಾಲ್ಕೈದು ತಾಸುಗಳು ಬೇಕಾದರೆ, ಇಲ್ಲಿ ಅಷ್ಟೇ ಮಿನಿಟುಗಳು ಸಾಕು. ಎಲ್ಲ ಶೃಂಗಾರ, ಎಲ್ಲ ಪರಿಶ್ರಮಗಳ ನಿರ್ಣಯವು ಐದು ಮಿನಿಟುಗಳಲ್ಲಿ ತೀರುವುದು. ಎಲ್ಲರ ಬಾಯಿಯಿಂದ 'ಭೆಶ್, ಭೆಶ್' ಎಂಬ ಶಬ್ದಗಳು ಹೊರಟವೋ, ಪ್ರದರ್ಶನವು ಪಾಸ್; ಇಲ್ಲದೇ 'ಫೇಲ್' ! ಹಣ, ಪರಿಶ್ರಮ, ಚಿಂತೆ, ಎಲ್ಲ ನೀರಿನಲ್ಲಿ ಮಾಡಿದ ಹೋಮ ! ದಯಾನಾಥರ ದಿಬ್ಬಣವು 'ಪಾಸಾ' ಯಿತು. ಪೇಟೆಯಲ್ಲಾದರೆ ಮೂರನೆಯ ದರ್ಜೆಯಲ್ಲಿ ಬರುತ್ತಿದ್ದ ಅವರು, ಇಲ್ಲಿ ಪ್ರಥಮಶ್ರೇಣಿಯನ್ನು ಪಡೆದರು, ಕೆಲವರು ವಾದ್ಯಗಳ

ನೆಂದು ಹೇಳಿ ಕಳಿಸಿದರು. ಆ ಮೂರನೆಯ ದಿನವೂ ಬಂದು ಬಿಟ್ಟಿತು. ಈಗ ಮರ್ಯಾದೆಯನ್ನುಳಿಸಿಕೊಳ್ಳುವ ದಾರಿ ಯಾವುದೆಂದು ಯೋಚಿಸತೊಡಗಿದರು. ಯಾವ ಉಪಾಯವೂ ತೋಚುತ್ತಿದ್ದಿಲ್ಲ.

ರಾಮೇಶ್ವರಿಯು ಬಂದು ಹೇಳಿದಳು—ಅಡುಗೆ ಮಾಡಿ ಬಹಳ ಹೊತ್ತಾಯಿತು. ಊಟ ಮಾಡಿ ಮತ್ತೆ ಆಲೋಚಿಸುವಿರಂತೆ.

ದಯಾನಾಥರು ತಮ್ಮ ತಲೆಯ ಮೇಲೆ ನೂರು ಮಣದ ಹೊರೆ ಹೊತ್ತಿರುವರೋ ಎಂಬ ಹಾಗೆ, ತಲೆಯನ್ನು ಮೇಲಕ್ಕೆತ್ತಿ ನುಡಿದರು—ನೀನು ಹೋಗಿ ಊಟ ಮಾಡು. ನನಗೆ ಹಸಿವಿಲ್ಲ.

ರಾಮೇಶ್ವರಿ—ಹಸಿವೆ ಇಲ್ಲವೆ? ಯಾಕಿಲ್ಲ? ನಿನ್ನೆ ರಾತ್ರಿಯೂ ಊಟ ಮಾಡಿರಲಿಲ್ಲ. ಈ ರೀತಿ ನೀವು ಊಟ-ತಿಂಡಿ ಬಿಟ್ಟರೆ, ಅಲ್ಲಿ ಸಾಲವೇನೂ ತೀರದಷ್ಟೆ?

ದಯಾನಾಥ—ಅದೇನೇ ಆಗಲಿ. ನೋಡು, ಅವನಿಗೆ ಇವತ್ತು ಯಾವ ಉತ್ತರ ಕೊಡುವುದೆಂಬ ಯೋಚನೆಯಲ್ಲಿದ್ದೇನೆ. ಇದೊಂದು ಮದುವೆ ಮಾಡಿ ಬಹಳ ಪೇಚಿನಲ್ಲಿ ಸಿಕ್ಕಂತಾಯಿತು. ಹುಡುಗಿ ಆಭರಣವನ್ನು ಹಿಂದೆ ಕೊಟ್ಟಾಳೆ?

ರಾಮೇಶ್ವರಿ—ಆಕೆಯ ಸ್ಥಿತಿ ಏನೆಂದು ಅರಿತಿದ್ದೂ ಹೀಗೆ ಆಶೆಪಡುವಿರೇನು? ಚಂದ್ರಹಾರವನ್ನು ಮಾಡಿಸದೆ ತಾನಾವ ಆಭರಣಗಳನ್ನು ತೊಡುವುದಿಲ್ಲವೆಂದು ಅವಳ ಪ್ರತಿಜ್ಞೆ. ಎಲ್ಲ ಭೂಷಣಗಳನ್ನೂ ಪೆಟ್ಟಿಗೆಯಲ್ಲಿ ಭದ್ರವಾಗಿ ಮುಚ್ಚಿಟ್ಟಿರುವಳು. ಅದೇ ಒಂದು ಮಣಿ ಸರಕಿನ ಹಾರವಿದೆ ಕುತ್ತಿಗೆಯಲ್ಲಿ. ನಾನು ಎಂತೆಂತಹ ವಧುಗಳನ್ನು ಕಂಡಿರುವೆನು. ಆದರೆ ಇಂಥವಳನ್ನು ಮಾತ್ರ ಇದುವರೆಗೆ ಕಂಡಿಲ್ಲ. ಅದೂ ಅಲ್ಲದೆ ನಿನ್ನೆ ಬಂದ ಸೊಸೆಯ ಆಭರಣಗಳನ್ನು ಕಿತ್ತುಕೊಳ್ಳುವುದು ನನ್ನ ಮನಸ್ಸಿಗೆ ಬರುವುದಿಲ್ಲ.

ದಯಾನಾಥರು ಸಿಟ್ಟಿನಿಂದ ಹೇಳಿದರು—ಹಸಿಗಾಯದ ಮೇಲೆ ಉಪ್ಪು ನೀರೆರಚುತ್ತಿರುವೆಯಲ್ಲ! ಅದು ಆಗದಾದರೆ ಒಂದು ಸಾವಿರ ರೂಪಾಯಿಗಳನ್ನು ತಂದಿಡು. ನನಗೇನು ಇದು ಸಂತೋಷದ ವಿಷಯವಾಗಿದೆ ಎಂದು ಮಾಡಿದಿಯಾ? ಆದರೆ ಬೇರೆ ಉಪಾಯವೇನಿದೆ? ಹೇಳು. ಪಾರಾಗುವ ಬಗೆ ಹೇಗೆ?

ರಾಮೇಶ್ವರಿ—ಮತ್ತೆ ಮಗನ ಮದುವೆಯಷ್ಟೆ ನೀವು ಮಾಡಿದ್ದು ? ಮದುವೆಗೆ ಎಲ್ಲರೂ ಸಾಲ ಮಾಡುತ್ತಾರೆ. ನೀವು ಹೊಸತೇನನ್ನೂ ಮಾಡಿದಂತಾಗಲಿಲ್ಲ. ನಿಮ್ಮ ಮಟ್ಟದವರೇ ಆದ ಸತ್ಯದೇವರು ಉಪ್ಪರಿಗೆಯ ಮನೆಯನ್ನು ಕಟ್ಟಿಸಿದರು, ಆಸ್ತಿಮಾಡಿದರು, ಮಗಳ ಮದುವೆಗೆ ಕಡಮೆಯೆಂದರೆ ಐದು ಸಾವಿರ ರೂಪಾಯಿಗಳನ್ನು ಖರ್ಚು ಮಾಡಿದರು ! ಇದರ ಮುಂದೆ ನಿಮ್ಮದೇನು ಮಹಾ !

ದಯಾನಾಥ—ಹೌದು, ಹೌದು, ಹಾಗೆಲ್ಲ ಮಾಡಿಯೇ ಇಬ್ಬರ ಹುಡುಗರು ತೀರಿಹೋದುದು.

ರಾಮೇಶ್ವರಿ—ಸಾಯುವುದು ಉಳಿಯುವುದು ಸಂಸಾರದಲ್ಲಿ ಇದ್ದದ್ದೆ. ಲಂಚ ತೆಗೆದುಕೊಂಡವರೂ ಸಾಯುತ್ತಾರೆ, ತೆಗೆದುಕೊಳ್ಳದವರೂ ಸಾಯುತ್ತಾರೆ. ನೀವು ಇವತ್ತು ಮನಸ್ಸು ಮಾಡಿದಿರಾದರೆ ಆರುತಿಂಗಳಲ್ಲಿ ಸಾಲ ತೀರುತ್ತದೆ.

ದಯಾನಾಥರು ಹುಬ್ಬುಗಂಟಿಕ್ಕಿ ಹೇಳಿದರು—ನನ್ನ ಜೀವಮಾನದಲ್ಲಿ ಮಾಡದ ಕೆಲಸವನ್ನು ಈಗ ಈ ಸಾಯುವ ಕಾಲಕ್ಕೆ ಮಾಡಲಾರೆ. ಸೊಸೆಗೆ ಸ್ಪಷ್ಟವಾಗಿ ಎಲ್ಲವನ್ನೂ ತಿಳಿಸಿಬಿಡು. ಎಷ್ಟು ದಿನ ಮುಚ್ಚಿಡಬಹುದು ಹೇಳು. ಅಥವಾ ಮುಚ್ಚಿಡುವುದಾದರೂ ಏತಕ್ಕೆ ? ಇಂದಲ್ಲ ನಾಳೆಯಾದರೂ ಆಕೆಗೆ ಗುಟ್ಟೆಲ್ಲ ತಿಳಿಯದಿರುವುದೇ ? ಮೂರು ನಾಲ್ಕು ಒಡವೆಗಳನ್ನು ಕೊಟ್ಟರೆ ಕೆಲಸವಾಗುವುದು. ಒಂದು ಸಲ ಹೇಳಿ ನೋಡಬಾರದೆ ?

ರಾಮೇಶ್ವರಿಯು ಅಸಂತುಷ್ಟಳಾಗಿ ಎಂದಳು—ನೀವೇ ಹೇಳಿ ನನ್ನಿಂದಾಗದು.

ಅಷ್ಟರಲ್ಲಿ ಟೆನ್ನಿಸ್ ರ್‍ಯಾಕೆಟ್ಟನ್ನು ಹಿಡಿದುಕೊಂಡು ರಮಾನಾಥನು ಒಳಗೆ ಬಂದನು. ಶುಭ್ರವಾದ ಉಡುಪನ್ನು ತೊಟ್ಟದ್ದು ಶ್ರೀಮಂತರ ಹುಡುಗನಂತೆ ಕಾಣುತ್ತಿದ್ದನು. ತಾಯಿತಂದೆಗಳ ಕಣ್ಣುತಪ್ಪಿಸಿ ಮಹಡಿಯ ಮೇಲೇರಬೇಕೆಂದಿದ್ದನು. ಆದರೆ ರಾಮೇಶ್ವರಿಯು ಅವನನ್ನು ತಡೆದು ಹಿಡಿದಳು—ಮುಳ್ಳು ಬೀಜಗಳನ್ನು ಬಿತ್ತಿದವನು ಇವನೆ. ಇವನನ್ನೇ ಕೇಳುವಾ. ( ರಮಾನಾಥನೊಡನೆ ) ನಾಚು—ಮೋಜುಗಳಿಗಾಗಿ ಸಾವಿರ ರೂಪಾಯಿಗೂ ಮಿಕ್ಕಿ ಖರ್ಚು ಮಾಡಿಸಿದಿ. ಈಗ ಈ ಸರಾಫನಿಗೆ ಏನು ಹೇಳಬೇಕೆಂಬುದನ್ನು ತಿಳಿಸು. ಕೆಲವು ಆಭರಣಗಳನ್ನು ಹಿಂದೆ ಕೊಡುತ್ತೇವೆಂದ ಮೇಲೆ

ಬಹಳ ಕಷ್ಟದಿಂದ ಒಪ್ಪಿದ್ದಾನೆ. ಆದರೆ ಹುಡುಗಿಯನ್ನು ಯಾರು ಕೇಳುವುದು ? ಇದು ನೀನು ಮಾಡಬೇಕಾದ ಕೆಲಸವಷ್ಟೆ ?

ರಮಾನಾಥನು—ಈ ಆಕ್ಷೇಪವನ್ನು ತನ್ನ ಮೈಮೇಲಿಂದ ಜಾಡಿಸುತ್ತ ಹೇಳಿದನು—ನಾನೇನು ಮಾಡಿದ್ದೇನೆ ? ಎಲ್ಲ ತಂದೆಯವರು, ನನ್ನ ಹತ್ತಿರ ಹೇಳಿದುದನ್ನು ನಾನು ಮಾಡಿದೆ ಅಷ್ಟೆ.

ದಯಾನಾಥನು—ನಾನೇಕೆ ನಿನ್ನ ಮೇಲೆ ತಪ್ಪು ಹೊರಿಸಲಿ ? ನಾನೇ ಮಾಡಿದವನು; ಸರಿ. ಆದರೆ ತಲೆಯ ಮೇಲಿನ ಈ ವಿಪತ್ತು ಈಗ ತೊಲಗಬೇಕಾಗಿದೆಯಲ್ಲ ? ಸರಾಫನಿಗೆ ಕೆಲವು ಆಭರಣಗಳನ್ನು ಹಿಂದೆ ಕೊಡುವುದೆಂದು ನನ್ನ ಯೋಚನೆ. ನಿನ್ನ ಸಲಹೆ ಏನು ? ಹೇಳು.

ರಮಾನಾಥನು ನಾಚುಗೆಪಡುತ್ತ ಹೇಳಿದನು—ಈ ವಿಷಯದಲ್ಲಿ ನಾನೇನು ಸಲಹೆಕೊಡಬಲ್ಲೆನು ? ಆದರೂ ಆಕೆ ಈ ಪ್ರಸ್ತಾಪಕ್ಕೆ ಸಂತೋಷದಿಂದ ಒಪ್ಪಿಯಾಳೆಂದು ನಾನು ಹೇಳಲಾರೆ.

ರಾಮೇಶ್ವರಿಯು ಇವನು ತನ್ನ ಪಕ್ಷವನ್ನೆ ಸಮರ್ಥಿಸುತ್ತಿರುವುದನ್ನು ಕಂಡು ಹೇಳಿದಳು—ನಾನೂ ಇವರ ಹತ್ತಿರ ಈಗ ಹೇಳುತ್ತಿರುವುದು ಇದನ್ನೆ.

ರಮಾ—ಅಷ್ಟೆಯೆ ? ಕೂಗಾಟಕ್ಕೆ ಆರಂಭವಾದರೆ ಮನೆಯ ಗುಟ್ಟೆಲ್ಲ ಹೊರಬೀಳುವುದು.

ದಯಾನಾಥ—ತನ್ನ ಯಥಾರ್ಥ ಸ್ಥಿತಿಯು ಆಕೆಗೆ ಎಷ್ಟು ಬೇಗನೆ ತಿಳಿಯುವುದೋ ಅಷ್ಟು ಒಳ್ಳೆಯದೆಂದು ನನ್ನ ಯೋಚನೆ.

ರಮಾನಾಥನು ಯುವಕರ ಸ್ವಭಾವಕ್ಕನುಸಾರವಾಗಿ ಜಾಲಪಳೊಡನೆ ತುಂಬಾ ಬಡಾಯಿ ಕೊಚ್ಚಿಕೊಂಡಿದ್ದನು. ಆಸ್ತಿಯಿಂದ ಸಾವಿರಾರ ರೂಪಾಯಿಗಳ ವರಮಾನವಿದೆ; ಬ್ಯಾಂಕಿನಲ್ಲಿಟ್ಟ ಹಣದಿಂದ ಬಡ್ಡಿ ಬರತ್ತಿದೆ—ಹೀಗೆಲ್ಲ ಹೇಳಿದ್ದನು. ಈಗ ತಾನು ಆಭರಣಗಳ ಮಾತೆತ್ತಿದರೆ ಅವಳ ಆತನನ್ನು ಸುಳ್ಳುಗಾರರ ಶಿಖಾಮಣಿಯೆಂದು ಎಣಿಸಲಿಕ್ಕಿಲ್ಲವೆ ?

ಹೀಗೆಂದನು—ಇಷ್ಟು ಬೇಗನೆ ತಿಳಿದರೆ, ಆಕೆ ನಮ್ಮೆಲ್ಲರನ್ನೂ ನೀಚರೆಂದು ಎಣಿಸಿಯಾಳು. ಮನೆಗೂ ಹಾಗೆಯೇ ಬರೆದಾಳು. ಆಗ ಎಷ್ಟು ಅಪಮರ್ಯಾದೆ ?

ದಯಾನಾಥ—ಅದಲ್ಲವಾದರೆ ಬೇರಾವ ನೆವದಿಂದಲಾದರೂ ಆಭರಣ ಗಳನ್ನು ಕೇಳಬೇಕು. ಕೇಳದೆ ಗತ್ಯಂತರವಿಲ್ಲ. ನಾಳೆ ಹಣವನ್ನು ಕೊಡಬೇಕು, ಇಲ್ಲವೆ ಆಭರಣವನ್ನಿಡಬೇಕು. ಬೇರೆ ಮಾರ್ಗವೆ ಇಲ್ಲ.

ರಮಾನಾಥನ ಮೌನ. ರಾಮೇಶ್ವರಿ ಎಂದಳು—ನೆವ ಏನು ಹೇಳು ವುದು ? ಯಾರೋ ಎರವಾಗಿ ಕೇಳಿದ್ದಾರೆಂದು ಹೇಳಿದರೂ ಆಕೆ ಕೊಡಲಿ ಕ್ಕಿಲ್ಲ. ಹಾಗೆ ಕೊಟ್ಟರೂ ನಾಲ್ಕಾರು ದಿನಗಳಲ್ಲಿ ಹಿಂದೆ ಕೊಡುವುದು ಹೇಗೆ?

ದಯಾನಾಥರಿಗೆ ಒಂದು ಉಪಾಯವು ಹೊಳೆಯಿತು. ಹೇಳಿದರು— ಆ ಒಡವೆಗಳ ಬದಲು ಗಿಲಿಟಿನ ಒಡವೆಗಳನ್ನು ಕೊಟ್ಟರೇನಾಗುವುದು? ಆದರೆ ಕೆಲನಿಮಿಷಗಳಲ್ಲಿ ಅವರಿಗೇ ತಮ್ಮ ಮಾತಿನ ಅರ್ಥ ಹೀನತೆಯು ವ್ಯಕ್ತವಾಯಿತು. ತನ್ನ ಅಭಿಪ್ರಾಯವನ್ನೇ ವಿರೋಧಿಸುತ್ತಾ ಎಂದರು— ಹೌದು. ಗಿಲಿಟು ಹೋದಮೇಲೆ ಮತ್ತೆ ಲಜ್ಜೆಪಡಬೇಕಾಗುವುದು. ಏನೋ ನನ್ನ ಬುದ್ಧಿಗೆ ಮಂಕು ಹಿಡಿದಂತಾಗಿದೆ. ಈ ಎಲ್ಲಾ ಸ್ಥಿತಿಯನ್ನು ಆಕೆಗೆ ತಿಳಿಯಪಡಿಸಿದರೆನೇ ಒಳ್ಳೆಯದೆಂದು ನನಗೆ ತೋರುವುದು. ಸ್ವಲ್ಪ ಸಮಯ ದುಃಖಪಡುವಳೇನೋ ನಿಜ. ಆದರೆ ಇದರಿಂದ ಮುಂದಿನ ದಾರಿಯಾದರೂ ಸುಗಮವಾಗಬಹುದಲ್ಲವೆ ?

ರಮಾನಾಥನಿಗೆ ಈ ಉಪಾಯವು ರುಚಿಸುತ್ತಿದ್ದಿಲ್ಲ; ಹೀಗೆ ಮಾಡಿ ದರೆ ಅವನು ಜಾಲಪಳೆದುರು ಮೊಗವೆತ್ತುವಂತಿತ್ತೆ ? ಆದುದರಿಂದ ವಿಕ್ತ ನಾಗಿ ಹೇಳಿದನು—ಇನ್ನು ನಾಲ್ಕು ತಿಂಗಳು ಸರಾಫನನ್ನು ನಿಲ್ಲಿಸಲಿಕ್ಕಾಗ ದೇನು ? ನೀವು ಮನಸ್ಸು ಮಾಡಿದರೆ ಸಾವಿರ ರೂಪಾಯಿ ಯಾವ ಲೆಕ್ಕ ? ಸುಲಭದಲ್ಲಿ ತೀರಿಸಬಹುದು.

ದಯಾನಾಥರೆಂದರು—ಅದು ಹೇಗೆ ?

ರಮಾನಾಥ—ನಿಮ್ಮ ಭ್ರಾತೃವರ್ಗದವರೆಲ್ಲರೂ ಮಾಡಿದ ಹಾಗೆ.

ದಯಾನಾಥ—ಅದು ನನ್ನಿಂದಾಗದು. ಮೂವರೂ ತುಸು ಹೊತ್ತು ಮೌನವನ್ನು ತಾಳಿದರು. ದಯಾನಾಥರು ತನ್ನ ಕೊನೆಯ ನಿರ್ಣಯವನ್ನು ಕೇಳಿಸಿಯಾಗಿತ್ತು. ರಮಾನಾಥನು ಮಾತ್ರ ತಾನು ಜಾಲಪಳೊಡನೆ ಏಕೆ ಬಡಾಯಿ ಕೊಚ್ಚಿದೆನೆಂದು ಪಶ್ಚಾತ್ತಾಪಪಡುತ್ತಿದ್ದನು. ಈಗ ಅವನ ಮಾನ ವನ್ನುಳಿಸಿಕೊಳ್ಳುವ ಭಾರವೆಲ್ಲಾ ಅವನ ಮೇಲೆಯೇ ಇತ್ತು. ಜಾಲಪಳ ಅನುಪಮ ಸೌಂದರ್ಯವು ಅವನನ್ನು ಮೊದಲದಿನವೇ ಮೋಹಿಸಿತ್ತು.

ಸ್ವರವನ್ನು ಕೇಳಿ ಮುಗ್ಧರಾಗುತ್ತಿದ್ದರು ಕೆಲವರು ನೋಟರನ್ನು ಕಣ್ಣು ಬಿಟ್ಟು ನೋಡುತ್ತಿದ್ದರು. ಇನ್ನು ಕೆಲವರು ಬೆಳ್ಳಿಯ ಒಟ್ಟಲುಗಳ ಪ್ರಶಂಸೆಗೆ ತೊಡಗಿದ್ದರು. ಮತ್ತೆ ಕೆಲವರು ಬಿರುಸು ಬಾಣಗಳನ್ನು ಕಂಡು ಮೂಗಿನ ಮೇಲೆ ಕೈಯಿಡುತ್ತಿದ್ದರು—

ಜಾಲಪಳಿಗೆ ಇವೆಲ್ಲ ವಸ್ತುಗಳಲ್ಲಿ ಆಕರ್ಷಣೆಯಿದ್ದಿಲ್ಲ. ಹಾಂ, ವರನನ್ನೊಮ್ಮೆ ಗುಟ್ಟಿನಲ್ಲಿ ಅಡಗಿ ನೋಡಬೇಕೆಂದಿದ್ದಳು. ಆದರೆ ಆ ಗಲಾಟೆಯಲ್ಲಿ ಎಡೆ ಸಿಗಬೇಕೆ? ಇದಿರ್ಗೊಳ್ಳುವ ಸಮಯ ಅವರ ಜೊತೆಗಾತಿಯರು ಆಕೆಯನ್ನು ಬಿಸಿಲು ಮಾಳಿಗೆಯ ಮೇಲೆ ಒಯ್ದರು. ಅವಳು ರಮಾನಾಥನನ್ನು ನೋಡಿದಳು. ಅವಳ ಎಲ್ಲ ವಿರಾಗ, ಎಲ್ಲ ಉದಾಸೀನತೆ, ಎಲ್ಲ ಮನೋವ್ಯಥೆಗಳಿಗೆ ಬೂದಿಯನ್ನು ಮಂತ್ರಿಸಿದ್ದಂತಾಯಿತು. ಮೊಗದಲ್ಲಿ ಹರುಷದ ಚೆಂಬಣ್ಣವು ಹಬ್ಬಿಕೊಂಡಿತು. ಅನುರಾಗವು ಸ್ಫೂರ್ತಿಯ ಭಂಡಾರವಲ್ಲವೆ?

'ಚಡಾವಿ' ನ ಸಮಯದ ಸಡಗರವನ್ನು ಹೇಳಿತೀರದು. ಮಾನಕಿಗೆ ನೀರಡಿಕೆಯಿಂದ ಪ್ರಾಣ ಹೋಗುತ್ತಿತ್ತು; ಆದರೆ 'ಚಡಾವಿ' ನ ವಾದ್ಯವು ಕೇಳಿಸಿದೊಡನೆ ಥಟ್ಟನೆ ಮರಳಿತು. ದೀನದಯಾಳರು ಹಸಿವೆ ತೃಷೆಗಳಿಂದ ನಿರ್ಜೀವರಾಗಿದ್ದರು. ಈಗ ಒಮ್ಮೆಲೆ ಚೇತರಿಸಿಕೊಂಡು ಅತ್ತಕಡೆ ಧಾವಿಸಿದರು. ಮಾನಕಿಯು ಒಂದೊಂದು ಒಡವೆಯನ್ನೂ ತೆಗೆತೆಗೆದು ಸುತ್ತಲಿನ ಜನರಿಗೆ ತೋರಿಸಹತ್ತಿದಳು. ಅಲ್ಲಿ ನೆರೆದವರೆಲ್ಲ ಈ ಕಲೆಯಲ್ಲಿ ನುರಿತವರೇ ಆಗಿದ್ದರು. ಗಂಡಸರು ಆಭರಣ ಮಾಡಿಸಿದ್ದರು, ಹೆಂಗಸರು ಧರಿಸಿದ್ದರು. ಆದ್ದರಿಂದ ಎಲ್ಲರೂ ವಿಮರ್ಶೆ ಮಾಡಲಾರಂಭಿಸಿದರು. ಒಂದಾದ ಮೇಲೊಂದರ ಹೊಗಳಿಕೆಯೇ ಕೇಳಬರುತ್ತಿತ್ತು. ಆದರೆ ಥಕ್ಕನೆ ಯಾರೋ ಹೇಳಿದರು—ಚಂದ್ರಹಾರವೆಲ್ಲಿದೆ?

ಮಾನಕಿಯು ಅಳುಮೋರೆ ಮಾಡಿಕೊಂಡು ಎಂದಳು—ಇಲ್ಲ, ಚಂದ್ರಹಾರ ಕಾಣುವದಿಲ್ಲ.

ಇನ್ನೊಬ್ಬಳೆಂದಳು—ಎಲಾ. ಚಂದ್ರಹಾರವಿಲ್ಲವೆ?

ದೀನದಯಾಳರೆಂದರು—ಬೇರೆಲ್ಲ ಇವೆ. ಅದೊಂದು ಮಾತ್ರ ಇಲ್ಲ. ಅವಳೆಂದಳು—ಚಂದ್ರಹಾರವಿದ್ದಿದ್ದರೆ ಆಗ ಕತೆಯೇ ಬೇರೆ.

ಮಾನಕಿಯು ಒಡವೆಗಳನ್ನು ತನ್ನ ಮುಂದಿನಿಂದ ತಳ್ಳಿ ಹೇಳಿದಳು—ನಿರ್ಭಾಗ್ಯೆಯ ಅದೃಷ್ಟದಲ್ಲಿ ಚಂದ್ರಹಾರವನ್ನು ತೊಡುವ ಪುಣ್ಯವಿದ್ದರಲ್ಲವೆ?

ಈ ಜನಜಂಗುಳಿಯ ಬೆಂಗಡೆಯಲ್ಲಿ ಕತ್ತಲಲ್ಲಿ— ಆಶೆ ಆಕಾಂಕ್ಷೆ ಗಳ ಸಜೀವ ಮೂರ್ತಿಯಾದ ಜಾಲಪಳು ನಿಂತಿದ್ದಳು. ಅವಳಿಗೆ ಎಲ್ಲಾ ಒಡವೆಗಳ ಹೆಸರೂ ಕೇಳಿಸುತ್ತಿತ್ತು. ಆದರೆ ಎಷ್ಟು ಹೊತ್ತಾದರೂ ಚಂದ್ರ ಹಾರದ ಹೆಸರು ಕೇಳಿಸದು. ಅವಳ ಎದೆಯು ಡವ ಡವ ಎನ್ನುತ್ತಿತ್ತು. ಚಂದ್ರಹಾರವಿಲ್ಲವೆಂದು ತಿಳಿದು ಬಂದಾಗ ಆಕೆಯ ಎದೆಗೆ ಯಾರೋ ಬಲ ವಾಗಿ ಒದೆದಂತಾಯಿತು. ಒಡಲಲ್ಲಿ ರಕ್ತದ ಬಿಂದು ಮಾತ್ರವೂ ಇಲ್ಲವೆಂದು ಅವಳಿಗೆ ಭಾಸವಾಯಿತು. ಕಣ್ಣು ಕತ್ತಲು ಬರುವಂತೆ ತೋರಿತು. ಏಳು ವರ್ಷದ ಹಿಂದೆ ಮೊಳೆತು, ಈಗ ಪಲ್ಲವಿಸಿ ನಳನಳಿಸುತ್ತಿದ್ದ ಆಕೆಯ ಹೆಬ್ಬಯ ಕೆಯ ಮೇಲೆ ಒಂದಿನಿಸೂ ಕರುಣೆಯಿಲ್ಲದೆ ಸಿಡಿಲೆರಗಿತು. ಆ ಹಚ್ಚ ಹಸುರಿನ ಕೋಮಲ ವೃಕ್ಷವು ಸುಟ್ಟು ಕರಿಕಾಯಿತು—ಕೇವಲ ಬೂದಿಯುಳಿಯಿತು. ಇಂಥ ನಿರಾಶೆಯ ಆವೇಶದಲ್ಲಿ ಅವಳ ಕ್ರೋಧವು ಎಲ್ಲೆ ಮೀರಿತು. ಆ ಕೊಠಡಿ ಯಲ್ಲಿ ಒಂದು ಶಿವಮೂರ್ತಿಯಿದ್ದಿತು. ಅದನ್ನು ತೆಗೆದು ನೆಲಕ್ಕೆ ಅಪ್ಪಳಿಸಿ ದಳು. ಅವಳ ಮಹದಾಶೆಗಳು ಎಂತೋ ಅಂತು ಅದು ಕೂಡಾ ಶತಖಂಡ ವಾಗಿ ಒಡೆದು ಹೋಯಿತು. ತಾನಿನ್ನು ಯಾವ ಆಭೂಷಣವನ್ನೂ ತೊಡು ವುದಿಲ್ಲವೆಂದು ಅವಳು ನಿಶ್ಚಯ ಮಾಡಿದಳು. ತೊಟ್ಟು ಆಗಬೇಕಾದ್ದೇನು? ರೂಪವಿಹೀನರು ಬೇಕಾದರೆ ತಮ್ಮ ದೇಹವನ್ನು ಆಭರಣಗಳಿಂದ ಸಿಂಗರಿಸಿ ಕೊಳ್ಳಲಿ, ನನಗೆ ದೇವರು ಸೌಂದರ್ಯವನ್ನು ದಯಪಾಲಿಸಿದ್ದಾನೆ. ಅವೆಲ್ಲ ಬೇಕಿಲ್ಲ. ಅಗ್ಗದ ಒಡವೆಗಳನ್ನೆಷ್ಟು ತಂದರು; ನಿಜವಾಗಿ ಹಣವು ಖರ್ಚಾಗ ಬಹುದಿದ್ದ ಒಡವೆಯ ಹೆಸರನ್ನೇ ಎತ್ತಲಿಲ್ಲ!

ಅಷ್ಟರಲ್ಲಿ ಆಕೆಯ ಸಖಿಯರು ಅಲ್ಲಿಗೆ ಬಂದರು. ರಾಧೆಯು ಮುಗುಳ್ನ ಗುತ್ತ ಹೇಳಿದಳು—ಜಾಲಪಾ, ಎಂತಹ ಪುಣ್ಯ ಮಾಡಿರುವಿಯೆ! ಎಂತೆಂತಹ ಒಡವೆಗಳು. ನಿನ್ನ ಎಲ್ಲ ಬಯಕೆಗಳೂ ಕೈಗೂಡಿದುವು.

ಜಾಲಪಳು ತನ್ನ ದೊಡ್ಡ ದೊಡ್ಡ ಕಣ್ಣುಗಳನ್ನೆತ್ತಿ ಬಾಳುವೆಯಲ್ಲಿ ತನಗಿನ್ನು ಯಾವ ಆಶೆಯೂ ಉಳಿದಿಲ್ಲವೆಂಬಂತೆ ದೀನನೇತ್ರಗಳಿಂದ ನೋಡಿ ಎಂದಳು—ಅಹುದು ತಂಗೀ, ಎಲ್ಲವೂ ಕೈಗೂಡಿತು!

ಆ ಮೂವರು ಸಖಿಯರಲ್ಲಿ ಯಾರಿಗೂ ಈ ಶಬ್ದಗಳಲ್ಲಿ ಅಡಕವಾಗಿದ್ದ ಮರ್ಮಾಂತಕ ವೇದನೆಯ ಪರಿಚಯವಾಗಲಿಲ್ಲ. ಮೂವರೂ ಕುತೂಹಲ ದಿಂದ ಅವಳನ್ನೇ ನೋಡಹತ್ತಿದರು.

ರಾಧೆ ಹೇಳಿದಳು—ಎಲ್ಲವೂ ಇದೆ, ಚಂದ್ರಹಾರ ಮಾತ್ರ ಇಲ್ಲ.

ಶಾಹಜಾದಿ—ಚಂದ್ರಹಾರವೊಂದಿಲ್ಲದಿದ್ದರೇನಂತೆ, ಅದರ ಬದಲು ಚಕ್ರಸರವಿದೆಯಷ್ಟೆ.

ಜಾಲಪಳು ವಕ್ರೋಕ್ತಿಭಾವದಿಂದ ಹೇಳಿದಳು—ಹೌದು. ದೇಹಕ್ಕೆ ಕಣ್ಣಿಲ್ಲದೆ ಹೋದರೆ ಆಗುವುದೇನು? ಬೇರೆಲ್ಲ ಅಂಗಗಳಿದ್ದರೆ ಸಾಲದೆ? ಕಣ್ಣಿದ್ದರೇನು, ಇಲ್ಲದಿದ್ದರೇನು?

ಸಖಿಯರಲ್ಲಿ ಇಬ್ಬರು ನಕ್ಕರು. ಶಾಹಜಾದಿಯು ನಗುವನ್ನು ತಡೆದು ಕೊಂಡು ತೋರಿಕೆಯ ಸಹಾನುಭೂತಿಯನ್ನು ತೋರಿಸುತ್ತ ಇವರು ಎಲ್ಲಿಯ ಕಾಡುಜನರೋ ಏನೋ ಇಂತಹ ಅನರ್ಥವನ್ನೂ ಮಾಡುವುದೆ?

ಸಜಲನೇತ್ರಳಾಗಿ ಜಾಲಪಳೆಂದಳು—ಏನು ಮಾಡಲಿ ತಂಗೀ? ಆಗು ವುದೆಲ್ಲ ಆಗಿಯೇ ಹೋಯಿತು.

ರಾಧೆ—ಹಾಗಾದರೆ ಇನ್ನು ನಿನಗೆ ಚಂದ್ರಹಾರವು ದೊರೆಯದೆಂದೇ ಮಾಡಿದಿಯಾ?

ಶಾಹಜಾದಿ—ಇನ್ನು ಮುಂದಿನ ಮಾತಲ್ಲವೆ? ಈಗಂತೂ ಇಲ್ಲ.

ಶಾಹಜಾದಿಯು ಬೇಕೆಂದೇ ಜಾಲಪಳನ್ನು ಉಬ್ಬಿಸುವುದರ ಸಲುವಾಗಿ ಎಂದಳು—ಜಾಲಪಾ, ಹಟಮಾಡಿದರೆ ಎಲ್ಲವನ್ನೂ ಸಾಧಿಸಬಹುದು ನೋಡು, ಅತ್ತೆಮಾವಂದಿರಿಗೆ ಮೇಲಿಂದ ಮೇಲೆ ಇದರ ನೆನಪು ಹುಟ್ಟಿಸುತ್ತಿರಬೇಕು. ಹುಂ, ಅತ್ತಿಗೆಯೊಡನೆ ನಾಲ್ಕೆಂಟು ದಿನ ಮಾತುಕತೆ ನಿಲ್ಲಿಸಿದರೆ ಕೆಲಸ ಆದರೂ ಆಗಬಹುದು. ಒಟ್ಟಾರೆ ಮೇಲೆ ಮನೆಯವರಿಗೆ ಸುಖ ಸಿಗದಂತೆ ಮಾಡಬೇಕು. ಚಂದ್ರಹಾರವು ಬಂದಲ್ಲದೆ ಕ್ಷೇಮವಿಲ್ಲೆಂದು ಅವರ ಬುದ್ಧಿಗೆ ಚೆನ್ನಾಗಿ ತೋರಬರಬೇಕು. ಸ್ವಲ್ಪ ಸಡಿಲು ಬಿಟ್ಟರೂ ಕೆಲಸ ಕೆಟ್ಟು ಹೋದಂತೆಯೆ.

ರಾಧೆಗೆ ಇವಳ ಮಾತುಗಳನ್ನು ಕೇಳಿ ನಗು ಉಕ್ಕಿ ಬಂತು. ಅದರೂ ಅದನ್ನು ಪ್ರಯತ್ನಪೂರ್ವಕವಾಗಿ ಒತ್ತಿಹಿಡಿದು ಹೇಳಿದಳು—ಇವಳಿಂದಾಗ ದಿದ್ದರೆ, ಪಾಪ, ನೀನಾದರೂ ಹೋಗಿ ಮಾಡಿಸಿಕೊಡು. ಏನು, ಏಳುವ ಯೋಚನೆ ಇಲ್ಲವೆಂದು ಕಾಣುತ್ತದೆ. ಇಡಿ ರಾತ್ರಿ ಉಪದೇಶ ಮಾಡಬೇಕೆಂದಿ ರುವಿಯಾ?

ಶಾಹಜಾದಿ—ಇಗೋ, ಹೊರಟೆ. ಆದರೆ ಇಷ್ಟು ಅವಸರವೇನೆ? ಒಹ್ಹೊ, ಈಗ ನೆನಪಾಯಿತು ನೋಡು. ಜಲ್ಲೀ, ನಿನ್ನ ತಾಯಿಯ ಹತ್ತಿರ ಇದೆಯಲ್ಲ ಒಂದು ಚಂದ್ರಹಾರ, ಎಷ್ಟು ಚೆಂದವೇ ಅದು. ಅದನ್ನು ನಿನಗೆ ಕೊಡಲಿಕ್ಕಿಲ್ಲವೆ?

ಜಾಲಪಳು ನಿಟ್ಟುಸಿರುಬಿಟ್ಟು ಎಂದಳು—ಅದೇನೇ ಇರಲಿ ತಂಗಿ, ಆಕೆ ಕೊಟ್ಟಾಳೆಂಬ ಭರವಸೆ ನನಗಿಲ್ಲ.

ಶಾಹಜಾದಿ—ಒಮ್ಮೆ ಕೇಳಿ ನೋಡು. ಈಗ ಅವಳು ಸಿಂಗರಿಸಿಕೊಂಡು ನಲಿಯಬೇಕಾದ ದಿನಗಳೇನೂ ಅಲ್ಲ. ನಾನು ಹೋಗಿ ಕೇಳಲೆ?

ಜಾಲಪಳು ಆಕೆಯನ್ನು ತಡೆದು ಹೇಳಿದಳು—ತಂಗೀ, ನಾನು ಬೇಕಾದರೆ ನಿನ್ನ ಕಾಲಿಗೆ ನಮಸ್ಕರಿಸುವೆ. ಆದರೆ ಆಕೆಯನ್ನು ಕೇಳಲೊಲ್ಲೆ. ಅವಳ ಮಾತೃಸ್ನೇಹವೆಷ್ಟಿದೆಯೆಂಬುದನ್ನು ಪರೀಕ್ಷೆ ಮಾಡಬೇಕೆಂದಿರುವೆನು.

ಆಗಲೆ ಮಾನಕಿಯು ಬಂದು ಆ ಮೂವರನ್ನೂ ಹೊರಗೆ ಕರೆದುಕೊಂಡು ಹೋದಳು. ತನ್ನ ತಾಯಿಯ ಕುತ್ತಿಗೆಯಲ್ಲಿ ಜಗಜಗನೆಂದು ಮಿಂಚುತ್ತಿದ್ದ ಚಂದ್ರಹಾರದ ಶೋಭೆಯನ್ನು ಕಂಡು ಜಾಲಪಳು ಅಂದುಕೊಂಡಳು—ಅಬ್ಬ, ಇನ್ನೂ ಇವಳ ಆಭೂಷಣ ಪ್ರೇಮವು ತೀರಲಿಲ್ಲ!

೬

ದಯಾನಾಥ ಮಹಾಶಯರು ಎಷ್ಟು ಉತ್ಸಾಹದಿಂದ ಮದುವೆಗೆ ಹೋಗಿದ್ದರೋ, ಅಷ್ಟೇ ಹತೋತ್ಸಾಹರಾಗಿ ಹಿಂತಿರುಗಿದರು. ಬಾಹ್ಯಾಡಂಬರಕ್ಕಾಗಿ ತಾನು ಸುಮ್ಮನೆ ಹಣವೆಚ್ಚ ಮಾಡಿದೆನೆಂದು ಪಶ್ಚಾತ್ತಾಪಪಡುತ್ತಿದ್ದರು. ಸರಾಫನಿಗೆ ಹಣವನ್ನು ಕೊಡಬೇಕಾದ ದಿನವೂ ಹತ್ತಿರ ಬಂತು. ಮದುವೆ ಮುಗಿದು ಏಳು ದಿನಗಳಲ್ಲಿ ಅವನ ಹಣವನ್ನು ಸಲ್ಲಿಸುವದೆಂದು ಮಾತಾಗಿತ್ತಷ್ಟೆ. ಆ ಏಳನೆಯ ದಿನವೂ ಬಂತು. ಆರು ತಿಂಗಳುಗಳೊಳಗೆ ಕಂತಿನ ಪ್ರಕಾರ ಸಾವಿರ ರೂಪಾಯಿಗಳನ್ನು ಸಲ್ಲಿಸುವೆನೆಂದು ಮಾತು ಕೊಟ್ಟು ಹೇಗೋ ಅವನನ್ನು ಕಳುಹಿದರು. ಮೂರು ತಿಂಗಳುಗಳಲ್ಲಿ ಸರಾಫನು ಬಂದು ಪುನಃ ಹಣಕ್ಕಾಗಿ ತಗಾದೆ ಮಾಡತೊಡಗಿದನು. ಕೊನೆಗೆ ಬಾಕಿ ಹಣದ ಬದಲು ಒಡವೆಗಳನ್ನೇ ಇನ್ನು ಮೂರು ದಿನಗಳಲ್ಲಿ ಒಪ್ಪಿಸುವೆ

ತನ್ನ ಸೌಭಾಗ್ಯವನ್ನು ಅವನು ಹೊಗಳಿಕೊಳ್ಳುವಂತಾಗಿತ್ತು. ಜಾಲಪಳು ತನ್ನ ತವರ್ಮನೆಯಲ್ಲಿ ಎಂದೂ ಕಸಬರಿಗೆ ಹಿಡಿದವಳಲ್ಲ, ಮುಸುರೆ ತಿಕ್ಕಿದವಳಲ್ಲ, ಹಾಲು-ತುಪ್ಪವಿಲ್ಲದೆ ಉಂಡವಳಲ್ಲ. ಈಗ ತನ್ನ ಮನೆಯ ಎಲ್ಲ ಅಭಾವಗಳನ್ನೂ ಸವಿಮಾತುಗಳಿಂದಲೇ ಪೂರ್ತಿಗೊಳಿಸುವ ಪ್ರಯತ್ನ ರಮಾನಾಥನದು. ಮನೆಯ ಕುರಿತು ತುಂಬಾ ಸುಳ್ಳು ಹೇಳಿಟ್ಟು, ಈಗ ತಾನು ಒಡ್ಡಿದ ಬಲೆಯಲ್ಲಿ ತಾನೇ ವಿಲಿ ವಿಲಿ ಒದ್ದಾಡುವಂತಾಗಿತ್ತು. ಪಾರಾಗುವುದೆಂತೊ ?

ಎಷ್ಟೇಷ್ಟೋ ಉಪಾಯಗಳನ್ನು ಯೋಚಿಸಿದನು. ಆದರೆ ಏನೊಂದು ಅಡ್ಡ-ತಡೆಯಿಲ್ಲದ ಯಾವ ಉಪಾಯವೂ ಅವನ ಬುದ್ಧಿಗೆ ತೋಚಲಿಲ್ಲ. ಥಕ್ಕನೆ ಒಂದು ಕಪಟೋಪಾಯವು ಅತನ ಮನಸ್ಸಿಗೆ ಹೊಳೆಯಿತು; ಎದೆಯುಬ್ಬಿತು. ಆದರೆ ಈ ಉಪಾಯವನ್ನು ಬಾಯಿಯಿಂದ ಹೇಳುವಂತಿರಲಿಲ್ಲ. ಎಂತಹ ನೀಚತೆ! ಎಂತಹ ಮೋಸ, ಎಷ್ಟು ನಿರ್ದಯತೆ! ಪ್ರೇಯಸಿಯ ಸಂಗಡ ಇಂತಹ ಧೂರ್ತತೆಯೇ! ಛೀ! ಅವನ ಮನಸ್ಸೇ ಅವನನ್ನು ಧಿಕ್ಕರಿಸುತ್ತಿತ್ತು. ಈಗ ಅವನಿಗೆ ಯಾರಾದರೂ ಒಂದು ಸಾವಿರ ರೂಪಾಯಿಗಳನ್ನು ಕೊಡುತ್ತಿದ್ದರೆ, ಅವನು ತನ್ನ ಜೀವಮಾನವೆಲ್ಲ ಅವರ ಗುಲಾಮನಾಗಿರುವುದಕ್ಕೆ ಸಿದ್ಧನಾಗುತ್ತಿದ್ದನು.

ದಯಾನಾಥರು ಕೊನೆಗೆ ಹೇಳಿದರು—ಎರಡು-ಮೂರು ಆಭರಣಗಳನ್ನಾದರೂ ಕೇಳು, ನೀನು ಮನಸ್ಸು ಮಾಡಿದರೆ ಕೇಳಿ ಪಡೆಯಬಲ್ಲೆ. ನಮಗೆ ಬಹಳ ಕಷ್ಟದ ಸಂಗತಿಯದು.

‘ ನನಗೆ ನಾಚಿಕೆಯಾಗುವುದು ’

‘ ನೀನು ವಿಚಿತ್ರ ಮನುಷ್ಯನು! ಸ್ವತಃ ಕೇಳಲಾರೆ, ನಮ್ಮನ್ನು ಬಿಡಲಾರೆ. ಅಂತೂ ಇಂತೂ ದೋಣಿ ಸಾಗುವುದು ಹೇಗೆ ಹೇಳು. ನನ್ನ ಕೊನೆಯ ದಿನಗಳನ್ನು ನಾನು ಸೆರೆಮನೆಯೊಳಗೆ ಕಳೆಯಲೊಲ್ಲೆನು. ಇದರಲ್ಲಿ ನಾಚಿಕೆಯೆಲ್ಲಿಂದ ಬಂತು? ಯಾರ ಜೀವನದಲ್ಲಿ ಇಂಥ ಕುಸಮಯಗಳು ಬರುವುದಿಲ್ಲ! ಬೇಕಾದರೆ ನಿನ್ನ ತಾಯಿಯನ್ನೇ ಕೇಳು. ಇಲ್ಲ ಖಂಡಿತವಾಗಿಯೂ ಇದು ನಾಚಿಕೆಪಡುವ ಸಮಯವೇ ಅಲ್ಲ. ನೀನಾಕೆಯನ್ನು ಕೇಳಲೇಬೇಕು.

ರಮಾನಾಥನು ಸಂಕೋಚಪಡುತ್ತ ಹೇಳಿದನು—ಕೇಳುವುದು ಮಾತ್ರ ನನ್ನಿಂದಾಗದು. ಬೇಕಾದರೆ ತೆಗೆದು ತರುವೆನು.

ದಯಾನಾಥರು ಆಶ್ಚರ್ಯದಿಂದ ಕೇಳಿದರು—ಏನು ? ತೆಗೆದು ತರುನೆಯಾ ? ಆಕೆಯ ಕಣ್ಣು ತಪ್ಪಿಸಿ ?

ರಮಾನಾಥನು ತೀವ್ರ ಕಂಠದಿಂದ ಹೇಳಿದನು- ಹುಂ, ಮತ್ತೇನೆಂದು ತಿಳಿದಿರಿ?

ದಯಾನಾಥರು ಹಣೆಯ ಮೇಲೆ ಕೈಯಿಟ್ಟು, ಒಂದು ಕ್ಷಣ ಕಳೆದ ಬಳಿಕ ಆಹತ ಕಂಠದಿಂದ ಎಂದರು—ಇಲ್ಲ, ನಾನು ಹೀಗಾಗಲು ಬಿಡಲಾರೆನು. ನಾನೆಂದೂ ಒಬ್ಬರಿಗೆ ಮೋಸ ಮಾಡಿದವನಲ್ಲ. ಇನ್ನು ಮಾಡುವವನೂ ಅಲ್ಲ. ನೇರವಾಗಿ ಆಗಬಹುದಾದ ಕೆಲಸಕ್ಕೆ ಹೀಗೆ ವಕ್ರಮಾರ್ಗವನ್ನೇಕೆ ಹಿಡಿಯಬೇಕು? ಇದಕ್ಕಿಂತ ಕೇಳಿ ತರುವುದು ಎಷ್ಟೋ ಮೇಲು.

ರಮಾನಾಥ—ಅದರ ಚಿಂತೆ ನಿಮಗೇಕೆ? ಇಂತಹ ಪರಿಸ್ಥಿತಿಯೂ ಒದಗಬಹುದೆಂದು ನನಗೇನು ಗೊತ್ತು? ಇಲ್ಲವಾದರೆ ವಿಪತ್ತನ್ನೇ ಕ್ರಯ ಕೊಟ್ಟು ಕೊಂಡಂತೆ ಅಷ್ಟು ಆಭರಣಗಳನ್ನು ಏಕೆ ಕೊಳ್ಳಬೇಕಿತ್ತು?

ದಯಾನಾಥ—ಇಷ್ಟೆಲ್ಲ ಇದ್ದೂ ಚಂದ್ರಹಾರವಿಲ್ಲದಾಗ ಆದ ಗಲಾಟೆಯೆಷ್ಟು ?

ರಮಾನಾಥ—ಅದರಿಂದ ನಮಗೇನು ಕೇಡು ? ಇಷ್ಟೆಲ್ಲಾ ಮಾಡಿಯೂ ಕೆಟ್ಟ ಹೆಸರು ಬಂತೇಬಂತು. ಈ ವಿಪತ್ತೊಂದು ಬೇರೆ ತಲೆಯ ಮೇಲೆ. ನಾವಿಷ್ಟು ದರಿದ್ರರೆಂಬುದನ್ನು ಆಕೆಗೆ ತಿಳಿಸಲಾರೆನು. ಕಳವಾದ ಮೇಲೆ ತಾಳ್ಮೆಯಿಂದ ತಡೆದುಕೊಳ್ಳದೆ ಬೇರೆ ಉಪಾಯವಿದೆಯೆ ?

ದಯಾನಾಥರು ಸುಮ್ಮನಾದರು. ರಮಾನಾಥನು ಹುಡುಗರು ಆಡುವಲ್ಲಿಗೆ ಹೋಗಿ ಗೋಪೀನಾಥ, ಇಗೋ ಆ ಭೈಯಾನ ಅಂಗಡಿಯನ್ನು ನೋಡಿರುವೆಯಷ್ಟೆ? ಅಲ್ಲಿಂದ ಒಂದಾಣೆಯ ಭಂಗಿಯನ್ನೂ, ಮಿಠಾಯಿಯ ಅಂಗಡಿಯಿಂದ ಅರ್ಧ ಸೇರು ಮಿಠಾಯಿಯನ್ನೂ ತಾ. ಇಕೊ, ರೂಪಾಯಿ.

ಹದಿನೈದು ಮಿನಿಟುಗಳಲ್ಲಿ ರಮಾನಾಥನು ಆ ಎರಡು ವಸ್ತುಗಳನ್ನು ಹಿಡಿದುಕೊಂಡು ಜಾಲಪಳ ಕೊಠಡಿಯತ್ತ ನಡೆದನು.

## ೨

ರಾತ್ರಿ ಹತ್ತು ಹೊಡೆದಾಗಿತ್ತು. ಜಾಲಪಳು ಬಿಸಿಲು ಮಾಳಿಗೆಯ ಮೇಲೆ ಮಲಗಿ ಚಂದ್ರನನ್ನೆ ನೋಡುತ್ತಿದ್ದಳು. ಅವಳಿಗೆ ತಾನು ಚಂದ್ರಮನ ಕಡೆಗೆ ಹಾರಿ ಹೋಗುತ್ತಿರುವಂತೆ ಅನಿಸುತ್ತಿತ್ತು. ಮೂಗಿನೊಳಗೆ ಬಿಸುಪೂ, ಕಣ್ಣಿನಲ್ಲಿ ಉರಿಯೂ, ತಲೆಯಲ್ಲಿ ಭ್ರಮಣೆಯೂ ಇರುವಂತೆ ಆಕೆಗೆ ಭಾಸವಾಗುತ್ತಿತ್ತು. ಮನೆಯ ನೆನಪಾಯಿತು, ಅಳತೊಡಗಿದಳು, ಸಖಿಯರ ನೆನಪಾಯಿತು, ನಗತೊಡಗಿದಳು. ರಮಾನಾಥನು ಕೈಯಲ್ಲೊಂದು ಚಿಕ್ಕ ಗಂಟನ್ನು ಹಿಡಿದುಕೊಂಡು ಬಂದು ಮಂಚದ ಮೇಲೆ ಕೂತುಕೊಂಡನು.

ಜಾಲಪಳು ಎದ್ದು ಪ್ರಶ್ನಿಸಿದಳು—ಗಂಟಿನಲ್ಲಿರುವುದೇನು?

ರಮಾನಾಥ—ನೀನೇ ಊಹಿಸಿ ಹೇಳು ನೋಡುವಾ.

ಜಾಲಪ—ನಗೆಯ ಗುಳಿಗೆಗಳು! (ಹೀಗೆಂದು ನಗಹತ್ತಿದಳು)

ರಮಾ—ಉಂ ಹುಂ.

ಜಾಲಪ—ಸಿದ್ಧೇಯ ಗಂಟಾಗಿರಬಹುದೆ?

ರಮಾ—ಅಲ್ಲ.

ಜಾಲಪ—ಹಾಗಾದರೆ ಪ್ರೇಮದ ಕಟ್ಟು.

ರಮಾನಾಥ—ಸರಿ. ಪ್ರಿಯೇ, ನಾನಿಂದು ನಿನ್ನನ್ನು ಹೂವಿನ ರಾಣಿಯನ್ನಾಗಿ ಮಾಡುವೆನು.

ಜಾಲಪಳ ಮೊಗವರಳಿತು. ರಮಾನಾಥನು ತುಂಬು ನಲ್ಮೆಯಿಂದ ಆಕೆಗೆ ಹೂವಿನ ತೊಡಪುಗಳನ್ನು ತೊಡಿಸಹತ್ತಿದನು. ಹೂವುಗಳ ಶೀತಲ ಕೋಮಲ ಸ್ಪರ್ಶದಿಂದ ಜಾಲಪಳ ಕೋಮಲ ಶರೀರದಲ್ಲಿ ನಡುಕವುಂಟಾಯಿತು. ಆ ಹೂವುಗಳಂತೆ ಆಕೆಯ ಒಂದೊಂದು ರೋಮವೂ ಪ್ರಫುಲ್ಲಿತವಾಯಿತು.

ರಮಾನಾಥನು ಮೆಲ್ಲಗೆ ನಕ್ಕು ಎಂದನು—ನನಗೆ ಬಹುಮಾನ ಕೊಡುವುದಿಲ್ಲವೇನೆ?

ಜಾಲಪಳು ಪ್ರತ್ಯುತ್ತರವನ್ನು ಕೊಡಲಿಲ್ಲ. ಈ ವೇಷದಲ್ಲಿ ಗಂಡನನ್ನು ನೋಡುವುದೂ ಆಕೆಯಿಂದಾಗದು. ಒಳಗೆ ಹೋಗಿ ಕನ್ನಡಿಯಲ್ಲಿ ತನ್ನ ಚೆಲುವನ್ನು ನೋಡಿಕೊಂಡಳು. ನಿಜಕ್ಕೂ ಅವಳು ಕುಸುಮಗಳ ರಾಣಿಯೇ ಆಗಿದ್ದಳು. ಎಲೆಯಡಿಕೆಯ ಪೆಟ್ಟಿಗೆಯನ್ನು ತಂದು ಮುಂದಿಟ್ಟಳು.

ಈಗ ರಮಾನಾಥನಿಗೆ ತನ್ನ ಕಪಟ ವ್ಯವಹಾರವನ್ನು ಯೋಚಿಸಿ ಗ್ಲಾನಿಯುಂಟಾಯಿತು. ಆದುದರಿಂದಲೇ ಕೋಣೆಯಿಂದ ಹೊರಬಂದ ಜಾಲಪಳು ಆತನನ್ನು ಪ್ರೇಮೋಲ್ಲಸಿತ ನೇತ್ರಗಳಿಂದ ನೋಡಿದಾಗ ಅವನು ಮೊಗದಿರುಹಿದನು. ಸರಳ ವಿಶ್ವಾಸದಿಂದ ತುಂಬಿದ ಆಕೆಯ ಕಣ್ಣುಗಳನ್ನು ಅವನು ದಿಟ್ಟಿಸದಾದನು. ಅವನು ಹೀಗೆ ಯೋಚಿಸಿದನು—ನಾನೆಂತಹ ಹೇಡಿಯಿರುವೆನು? ನನ್ನ ಹೆಗ್ಗಳಿಕೆಯನ್ನು ಇವಳೊಡನೆ ಏಕೆ ಹೇಳಿಕೊಳ್ಳಬೇಕಿದ್ದಿತು? ನಿಜವನ್ನೇ ಹೇಳಬಾರದಿತ್ತೆ? ಯೋಚಿಸುತ್ತ ಹೋದಂತೆ ಅವನ ಕಣ್ಣುಗಳಲ್ಲಿ ನೀರು ತುಂಬಿತು. ಪ್ರಣಯದ ಆ ನಿರ್ಮಲ ಪ್ರಕಾಶದಲ್ಲಿ ಅವನ ಮನೋವಿಕಾರವು ಯಾವುದೋ ಒಂದು ಭಯಂಕರ ಜಂತುವಿನ ರೂಪವನ್ನು ತಾಳಿ ಅವನನ್ನು ನೆಟ್ಟ ನೋಟದಿಂದ ಇರಿವಂತಿತ್ತು. ಅವನಿಗೆ ತನ್ನ ಮೇಲೆ ಉಂಟಾದ ತಿರಸ್ಕಾರಕ್ಕೆ ಮಿತಿ ಇಲ್ಲ. ಇದ್ದುದನ್ನಿದ್ದಂತೆ ಎಲ್ಲವನ್ನು ಇವಳೆದುರು ಹೇಳಿಬಿಟ್ಟರೇನಾಗುವುದು—ಎಂದೂ ಒಮ್ಮೆ ತೋರಿತು. ಮರುಕ್ಷಣದಲ್ಲಿ ಅವಳ ದೃಷ್ಟಿಯಲ್ಲಿ ಹೀನನಾಗುವ ಕಲ್ಪನೆಯ ಅಸಹ್ಯತೆಯು ಗೋಚರವಾಗಿ ಆ ಯೋಚನೆ ದೂರ ಸರಿಯಿತು.

ಜಾಲಪಳು ಪ್ರೇಮ ಸರಸ ನೇತ್ರಗಳಿಂದ ನೋಡಿ ಎಂದಳು—ನನ್ನ ತಂದೆಯವರು ನಿಮ್ಮನ್ನು ನೋಡಿ ಬಂದು ಬಹಳ ಹೊಗಳುತ್ತಿರುವುದನ್ನು ಕೇಳಿ, ನಾನು ತರತರದ ಚಿತ್ರಗಳನ್ನು ಕಾಣುತ್ತಿದ್ದೆ.

ರಮಾನಾಥನು ಒಂದು ನಿಟ್ಟುಸಿರು ತೆಗೆದನು ಮಾತ್ರ, ಉತ್ತರವೇಯಿಲ್ಲ.

ಜಾಲಪಳೆಂದಳು—ನನ್ನ ಸಖಿಯರು ನಿಮ್ಮನ್ನು ಕಂಡು ಎಷ್ಟು ಮುಗ್ಧರಾದರು ಗೊತ್ತೆ? ಶಾಹಜಾದಿ ಇದ್ದಾಳಲ್ಲಾ ಅವಳು ಕಿಟಕಿಯಿಂದ ಏಳುತ್ತಲೇ ಇರಲಿಲ್ಲ.

ರಮಾನಾಥನು ಏನೂ ಹೇಳಲಿಲ್ಲ

ಜಾಲಪಳು ಮುಂದುವರಿಸಿದಳು—ಇನ್ನೊಮ್ಮೆ ಅಲ್ಲಿಗೆ ಹೋದಾಗ ನಿಮಗೆ ನನ್ನ ಸಖಿಯರ ಪರಿಚಯ ಮಾಡಿಸಿ ಕೊಡುವೆನು. ಅದಂತಿರಲಿ. ಇವತ್ತು ನೀವು ಪೇಟೆಯ ಕಡೆಗೆ ಹೋಗಲಿಲ್ಲವೆ?

ರಮಾ—ಇಲ್ಲ, ಸಮಯವೇ ಸಿಗಲಿಲ್ಲ.

ಜಾಲಪ– ಬಿಡಿ ಹಾಗಾದರೆ ನಾನು ನಿಮ್ಮೊಡನೆ ಮಾತಾಡುವುದೇ ಇಲ್ಲ. ದಿನಾಲೂ ಹೀಗೆಯೇ ಏನಾದರೊಂದು ನೆವ ಹೇಳುತ್ತಿದ್ದೀರಿ. ಇರಲಿ. ನಾಳೆ ತಂದುಕೊಡುವಿರಲ್ಲವೆ ?

ರಮಾನಾಥನ ಎದೆಗೆ ಚೇಳು ಕಡಿದಂತಾಯಿತು. ಆಃ ! ಈಕೆ ಚಂದ್ರಹಾರಕ್ಕಾಗಿ ಎಷ್ಟು ವಿಕಲಳಾಗಿರುವಳು ? ಯಾವ ಸರಳ ಬಾಲಿಕೆಯ ಸಲುವಾಗಿ ತಾನು ಪ್ರಾಣವನ್ನೆ ಬಲಿಗೊಡಬೇಕಿತ್ತೋ, ಅಂಥವಳ ಸರ್ವಸ್ವವನ್ನೂ ಅಪಹರಿಸುವ ಕೆಲಸಕ್ಕೆ ಕೈಹಾಕಿರುವೆನಲ್ಲವೆ ! ಮಹಡಿಯಿಂದ ಕೆಳಗೆ ಧುಮ್ಮಿಕ್ಕಿ ಪ್ರಾಣಕಳೆದುಕೊಳ್ಳುವಷ್ಟು ಮಟ್ಟಿಗೆ ಅವನ ಮನಸ್ಸು ವ್ಯಗ್ರವಾಯಿತು.

ನಡುರಾತ್ರಿಯು ಕಳೆದಿತ್ತು. ಚಂದ್ರಮನು ಕಳ್ಳನಂತೆ ಮರಗಳ ಮರೆಯಲ್ಲಡಗಿದ್ದನು. ಜಾಲಪಳು ಪತಿಯ ಕುತ್ತಿಗೆಯಲ್ಲಿ ಕೈಯನ್ನು ಹಾಕಿಕೊಂಡು ಸುಖನಿದ್ರಾಮಗ್ನಳಾಗಿದ್ದಳು. ರಮಾನಾಥನು ಮನಸ್ಸಿನಲ್ಲಿ ವಿಕಟ ಸಂಕಲ್ಪವನ್ನು ಮಾಡಿ ಮೆಲ್ಲಗೆ ಎದ್ದನು; ಆದರೆ ನಿದ್ರೆಯ ಮಡಿಲಲ್ಲಿ ಪವಡಿಸಿದ್ದ ಪುಷ್ಪಪ್ರದೀಪವು ಅವನನ್ನು ಅಸ್ಥಿರನನ್ನಾಗಿ ಮಾಡಿತು. ಅವನು ಒಂದು ಕ್ಷಣ ಜಾಲಪಳ ನಿದ್ರಾವಿಹಸಿತ ವದನವನ್ನು ನೋಡುತ್ತಾ ನಿಂತುಬಿಟ್ಟನು. ಆಚೆ ಕೋಣೆಯನ್ನು ಹೋಗುವ ಸಾಹಸವಾಗಲಿಲ್ಲ. ಮತ್ತೆ ಮಲಗಿಕೊಂಡನು.

ಜಾಲಪಳು ಬೆಚ್ಚಿ ಬಿದ್ದು ಕೇಳಿದಳು—ಎಲ್ಲಿಗೆ ಹೊರಟಿರಿ ? ಬೆಳಗಾಯಿತೆ ?

ರಮಾನಾಥ—ಇಲ್ಲ, ಇಲ್ಲ ಬಹಳ ರಾತ್ರಿ ಇದೆ.

ಜಾಲಪ—ಹಾಗಾದರೆ ನೀವೇಕೆ ಹೀಗೆ ಕುಳಿತಿರುವಿರಿ ?

ರಮಾನಾಥ—ನೀರು ಕುಡಿಯಲು ಎದ್ದಿದ್ದೆ.

ಜಾಲಪಳು ಪ್ರೇಮಾತುರಳಾಗಿ ಆತನ ಕರಗಳಲ್ಲಿ ತನ್ನ ಬಾಹುಯುಗಲವನ್ನು ಸುತ್ತಿ ಆತನನ್ನು ಮಲಗಿಸುತ್ತ ಹೇಳಿದಳು—ನೀವು ಈ ರೀತಿ ನನ್ನ ಮೇಲೆ ಮಾಟವೆಸಗುವುದಾದರೆ, ನಾನು ನಿಮ್ಮನ್ನು ಬಿಟ್ಟು ಓಡಿ ಹೋಗುವುದು ಖಂಡಿತ ಅಮ್ಮಯ್ಯ, ಅದು ಹೇಗೆ ನನ್ನನ್ನೆ ದಿಟ್ಟಿಸುತ್ತಿರುವಿರಿ ? ನನ್ನ ಮನಸ್ಸು ಚಂಚಲವಾಗುವಂತೆ ಮಂತ್ರ ಓದುತ್ತಿರುವಿರಾ ? ಗಂಡಸರ

ಕಣ್ಣುಗಳಲ್ಲಿ ಮಾಯಕವಿರುವುದೆಂದು ವಾಸಂತಿ ಅಂದು ಹೇಳಿದ್ದಳು. ಈಗ ಅದು ನಿಜವೆಂದು ತಿಳಿಯಿತು

ರಮಾನಾಥನು ಒಡಕುಸ್ವರದಲ್ಲಿ ಹೇಳಿದನು—ಮಾಟವೆ? ಇಲ್ಲ, ಹಾಗೇನೂ ಮಾಡುತ್ತಿಲ್ಲ ಬಿಡು. ಕಣ್ಣುಗಳ ತೃಷೆಯನ್ನು ಇಂಗಿಸಿಕೊಳ್ಳುತ್ತಿದ್ದೆ. ಇಷ್ಟೆ.

ಇಬ್ಬರೂ ಮಲಗಿದರು—ಒಬ್ಬಳು ಉಲ್ಲಾಸದಲ್ಲಿ ಮುಳುಗಿ, ಇನ್ನೊಬ್ಬನು, ಚಿಂತೆಯಲ್ಲಿ ಮುಳುಗಿ.

ಮೂರು ತಾಸುಗಳು ಮತ್ತೆ ಕಳೆದವು. ದ್ವಾದಶಿಯ ಚಂದ್ರನು ತನ್ನ ವಿಶ್ವದೀಪಕವನ್ನು ನಂದಿಸಿದನು. ರಮಾನಾಥನು ಅದು ತನಕವೂ ಎಚ್ಚರದಿಂದಿದ್ದನು. ನಾಲ್ಕು ಗಂಟೆ ಹೊಡೆವ ಸದ್ದು ಕೇಳಿದಾಗ ಮಾತ್ರ, ಇನ್ನು ತಡೆದರೆ ಕೆಲಸವಾಗದೆಂದೆಣಿಸಿ, ಕೋಣೆಯನ್ನು ಹೊಕ್ಕನು. ಆಭರಣಗಳ ಸಂದುಕವು ಕಪಾಟಿನೊಳಗಿದ್ದಿತು. ಅದನ್ನೆತ್ತಿಕೊಂಡು ಕೆಳಗೆ ನಡೆದನು. ಆ ಗಾಬರಿಯಲ್ಲಿ ಅವನಿಗೆ ತನಗೆ ಬೇಕಾದ ಕೆಲವು ಆಭರಣಗಳನ್ನು ತೆಗೆಯಬೇಕೆಂಬ ಅರಿವೂ ಇರಲಿಲ್ಲ, ಅವಕಾಶವೂ ದೊರೆಯಲಿಲ್ಲ.

ದಯಾನಾಥರು ಕೆಳಗೆ ಅಂಗಳದಲ್ಲಿ ಮಲಗಿದ್ದರು. ರಮಾನಾಥನು ಅವರನ್ನು ಮೆಲ್ಲಗೆ ಎಬ್ಬಿಸಿದನು. ಅವರು ಗಬಕ್ಕನೆ ಎದ್ದು ಕೇಳಿದರು—ಯಾರದು?

ರಮಾನಾಥನು ತುಟಿಯ ಮೇಲೆ ಕೈಯಿಟ್ಟು ಮೆಲುದನಿಯಲ್ಲಿ ಹೇಳಿದನು—ನಾನು; ಆಭರಣಗಳ ಸಂದುಕವನ್ನು ತಂದಿರುವೆನು. ಎಲ್ಲಾದರೂ ಇರಿಸಿರಿ.

ಇದುವರೆಗೆ ದಯಾನಾಥರ ಕಣ್ಣುಗಳು ಮಾತ್ರ ತೆರೆದಿದ್ದುವು; ಈ ಮಾತುಗಳನ್ನು ಕೇಳಿ ಅವರ ಚೇತನವೂ ಜಾಗ್ರತವಾಗಿತ್ತು. ಮಗನು ಹೇಳಿದ ಹಾಗೆ ಮಾಡಿಯೂ ತೋರಿಸಿಯಾನೆಂದು ಅವರೆಣಿಸರಲಿಲ್ಲ. ಇಂತಹ ಕುತ್ಸಿತ ಕಾರ್ಯದಲ್ಲಿ ಮಗನೊಡನೆ ಸಹಕರಿಸುವುದು ಅವರ ಅಂತರಾತ್ಮಕ್ಕೆ ಸಹನೆಯಾಗಲಿಲ್ಲ.

ಕೇಳಿದರು—ಇದನ್ನೇತಕ್ಕೆಂದು ತಂದೆ?

ರಮಾನಾಥನು ಧೃಷ್ಟತೆಯಿಂದ ಹೇಳಿದನು—ನಿಮ್ಮ ಆಜ್ಞೆಯ ಪ್ರಕಾರ.

ದಯಾ—ಸುಳ್ಳು ಹೇಳುತ್ತಿರುವೆ.

ರಮಾ—ಹಾಗಾದರೆ ಅಲ್ಲೆ ಇಟ್ಟುಬರಲೆ ?

ರಮಾನಾಥನ ಈ ಪ್ರಶ್ನೆಯು ದಯಾನಾಥರನ್ನು ಸಂಕಟಕ್ಕೀಡು ಮಾಡಿತು. ನಾಚುಗೆಪಡುತ್ತಾ ಎಂದರು—ಇನ್ನೇನು ಇಡುವುದು ? ಎಲ್ಲಾದರೂ ನೋಡಿದಳೆಂದರೆ ಅನರ್ಥವೇ ಸೈ. ದೆವ್ವ ಬಡಿದವನಂತೆ ನಿಂತಿರುವುದೇಕೆ ? ಒಳಗೆ ದೊಡ್ಡ ಪೆಟ್ಟಿಗೆಯಲ್ಲಿಟ್ಟುಬಾ. ಅವಳಿಗೆ ಎಚ್ಚರವಾದರೆ, ಎಲ್ಲ ಮುಗಿಯಿತು !

ರಮಾನಾಥನು ಆಭರಣಗಳ ಸಂದುಕವನ್ನು ಒಳಗಿದ್ದ ಪೆಟ್ಟಿಗೆಯಲ್ಲಿರಿಸಿ, ಬೇಗ ಬೇಗನೆ ಮೇಲಕ್ಕೆ ಹೋದನು ಹೋಗಿ ನೋಡುವಾಗ ಜಾಲಪಳು ಮುಂಜಾನೆಯ ಸುಖನಿದ್ರೆಯಲ್ಲಿ ಮಗ್ನಳಾಗಿದ್ದಳು.

ರಮಾನಾಥನು ಮಂಚದ ಮೇಲೆ ಮೆಲ್ಲಗೆ ಕೂತಿದ್ದಾನಷ್ಟೆ, ಅಷ್ಟರಲ್ಲಿ ಅವಳು ಜಿಗದುಬಿದ್ದು ಆತನನ್ನು ಅಪ್ಪಿಕೊಂಡಳು. ರಮಾನಾಥನು ಕೇಳಿದನು—ಏನಾಯಿತು ? ಬೆಚ್ಚಿಬಿದ್ದಿಯೇಕೆ ?

ಜಾಲಪಳು ಅತ್ತಿತ್ತ ಪ್ರಸನ್ನ ನೇತ್ರಗಳಿಂದ ನೋಡಿ ಹೇಳಿದಳು—ಹುಂ, ಏನೂ ಇಲ್ಲ. ಒಂದು ಕನಸು ಬಿತ್ತು. ನೀವೇಕೆ ಇನ್ನೂ ಕುಳಿತಿದ್ದೀರಿ ? ರಾತ್ರಿ ಯೆಷ್ಟಿದೆ ?

ರಮಾನಾಥನು ಮಲಗಿಕೊಳ್ಳುತ್ತ ಹೇಳಿದನು—ಬೆಳಗಾಗುವದರಲ್ಲಿದೆ. ಸ್ವಪ್ನವೇನು ?

ಜಾಲಪ—ನನ್ನ ಆಭರಣಗಳ ಪೆಟ್ಟಿಗೆಯನ್ನು ಯಾರೋ ಒಬ್ಬ ಕಳ್ಳನು ಹೊತ್ತುಕೊಂಡು ಹೋದಂತೆ ತೋರಿತು.

ರಮಾನಾಥನ ಹೃದಯವು ಇದನ್ನು ಕೇಳಿ ' ಧಕ್ ಧಕ್ ' ಎನ್ನಹತ್ತಿತು. ರಕ್ತವು ಹೆಪ್ಪುಗಟ್ಟಿತು. ಈಕೆ ತನನ್ನು ಕಂಡಿರುವಳೇನೋ ಎಂಬ ಸಂದೇಹವೂ ಉಂಟಾಯಿತು. ಆವನು ಗಟ್ಟಿಯಾಗಿ ಬೊಬ್ಬಿಟ್ಟನು—ಕಳ್ಳ ! ಕಳ್ಳಾ !

ಕೆಳಗೆ ಅಂಗಳದಿಂದ ದಯಾನಾಥರ ಬೊಬ್ಬೆಯೂ ಕೇಳಿಸಿತು—ಕಳ್ಳಾ ! ಹೋ, ಕಳ್ಳಾ !

ಜಾಲಪಳು ಗಾಬರಿಗೊಂಡು ಎದ್ದಳು. ಕೋಣೆಯೊಳಗೆ ಓಡಿದಳು. ಕಪಾಟನ್ನು ತೆರೆದಳು, ಸಂದುಕವಿಲ್ಲ. ಮೂರ್ಛಿತಳಾಗಿ ಬಿದ್ದಳು.

೮

ಬೆಳಗಾಗುತ್ತಲೇ ದಯಾನಾಥರು ಆಭರಣಸಮೇತರಾಗಿ ಸರಾಫನ ಹತ್ತರ ಹೋದರು. ಎರಡುಸಾವಿರದೈನೂರು ರೂಪಾಯಿಗಳಿಗೆ ಕೊಂಡು ದನ್ನು ಸಾವಿರದಯ್ನೂರಕ್ಕೆ ಕೊಟ್ಟು ಮರಳಿದರು. ಈ ವಿಷಯವಾಗಿ ಮಗನಿಗೂ ತಂದೆಗೂ ಹಲವು ದಿನಗಳವರೆಗೆ ವಿವಾದವು ನಡೆಯುತ್ತಲೇ ಇತ್ತು. ಜಾಲಪಳಿಗೆ ಈ ವಿಷಯ ಗೊತ್ತಾಗದಂತೆ ಎಲ್ಲ ಜಾಗ್ರತೆಯನ್ನೂ ವಹಿಸಿದ್ದರು. ಅವಳಾದರೂ—ಇವರೆಣಿಸಿದಂತೆ—ಹೋದ ಒಡವೆಗಳು ಇನ್ನು ಬಾರವೆಂದು ಬಗೆದು ವ್ಯರ್ಥದ ಕೂಗಾಟವನ್ನೆಬ್ಬಿಸಲಿಲ್ಲ.

ಜಾಲಪಳಿಗೆ ಆಭರಣಗಳ ಮೇಲಿದ್ದಷ್ಟು ಒಲುಮೆ ಪ್ರಪಂಚದ ಬೇರಾವ ವಸ್ತುವಿನ ಮೇಲೂ ಇದ್ದಿಲ್ಲ. ಅವಳ ವಿಷಯದಲ್ಲಿ ಇದು ಆಶ್ಚರ್ಯದ ಸಂಗತಿಯಲ್ಲ ಅವಳು ಮೂರು ವರ್ಷದ ಬಾಲಿಕೆಯಾಗಿದ್ದಾಗ ಅವಳಿಗೆ ಅವಳ ಅಜ್ಜಿ ಉಣಿಸುತ್ತಿದ್ದಳು. ಆಗ ನಡೆಯುತ್ತಿದ್ದ ಚರ್ಚೆಯೆಂದರೆ ಈ ಆಭರಣಗಳದೇ. ಒಂದು ಸಲ ಅವಳು—ನಿನ್ನ ಗಂಡನು ನಿನಗೆ ಚೆಲುವಾದ ಆಭರಣಗಳನ್ನು ತರುವನು ಮಗೂ. ಅದನ್ನು ಹಾಕಿಕೊಂಡು ನೀನು ಎಷ್ಟು ಮೆರೆಯುವಿಯೋ, ನನ್ನ ಚಿನ್ನಾ—ಅಂದಿದ್ದಳು.

ಜಾಲಪಳು ಕೇಳುತ್ತಿದ್ದಳು—ಚಿನ್ನದ್ದೋ? ಬೆಳ್ಳಿದ್ದೋ? ಯಾವುದರದಜ್ಜೀ!

ಅಜ್ಜಿ ಎನ್ನುತ್ತಿದ್ದಳು—ಚಿನ್ನದ್ದು, ಮಗೂ, ಚಿನ್ನದ್ದು. ಬೆಳ್ಳಿಯವೇ ತಕ್ಕೆ? ಬೆಳ್ಳಿಯ ಒಡವೆಗಳನ್ನು ತಂದರೆ ಅವನ್ನು ಅವನ ಮುಖದ ಮೇಲೆ ಎಸೆದುಬಿಡಬೇಕು.

ಮಾನಕಿ ಹೇಳುತ್ತಿದ್ದಳು—ಅವನು ತರುವುದು ಬೆಳ್ಳಿಯ ಆಭರಣಗಳೆ, ಅವನಿಗೆ ಚಿನ್ನದವು ಸಿಗಲಿಕ್ಕೆ ಇಲ್ಲ.

ಜಾಲಪಳು ಇದನ್ನು ಕೇಳಿ ಅಳಹತ್ತುವಳು. ಅವರೆಲ್ಲ ನಗುತ್ತಿದ್ದರು.

ಅವಳು ತುಸು ದೊಡ್ಡವಳಾಗಿ ಗೊಂಬೆಯಾಟವನ್ನಾಡುವಾಗ ಅಲ್ಲಿಯೂ ಹೆಂಡತಿಗೆ ಗಂಡನು ತರತರದ ಸ್ವರ್ಣಾಭರಣಗಳನ್ನು ಮಾಡಿಸದಿರುತ್ತಿದ್ದಿಲ್ಲ. ಅದೇ ಸಮಯದಲ್ಲಿ ಅವಳು ಮಣಿಗಾರನಿಂದ ಚಂದ್ರಹಾರವನ್ನು ಕೊಂಡುದು.

ಇನ್ನೂ ಸ್ವಲ್ಪ ದೊಡ್ಡವಳಾದಾಗ ಅವಳ ಪ್ರೌಢಸ್ತ್ರೀ ಸಮಾಜದ ಮಾತುಗಳನ್ನು ಕೇಳುತ್ತಿದ್ದಳು ಮಹಿಳಾ ಪ್ರಪಂಚದಲ್ಲಿ ಆಭರಣಗಳಷ್ಟು ರೋಚಕ ವಿಷಯವು ಬೇರೇನಿದೆ? ಆಗಾಗ ಅಲ್ಲಿ ಆಭರಣಗಳ ಕುರಿತಾಗಿ ಟೀಕೆ-ಟಿಪ್ಪಣಿಗಳು, ಆಲೋಚನೆ ಪ್ರತ್ಯಾಲೋಚನೆಗಳು ಜರುಗುತ್ತಲೇ ಇದ್ದವು

ಇಂತಹ ಆಭೂಷಣಮಂಡಿತ ಜಗತ್ತಿನಲ್ಲಿ ಬೆಳೆದ ಜಾಲಪಳಿಗೆ ಆಭೂಷಣ ಪ್ರೇಮವು ಮೊರೆಕೊಂಡುದು ಅತ್ಯಂತ ಸ್ವಾಭಾವಿಕವೆಂದೆನ್ನಬೇಕು. ಆಭರಣಗಳ ಕಳವಾಗಿ ಒಂದು ತಿಂಗಳು ಕಳೆದರೂ ಆಕೆಯ ಸ್ಥಿತಿ ಇದ್ದಂತೆಯೆ ಇತ್ತು. ತಿನಿಸು-ಉಣಿಸುಗಳ ಪರವೆ ಇಲ್ಲ. ಯಾರೊಡನೆಯೂ ಮಾತುಕತೆ ಬೆಳೆಸಲೊಲ್ಲಳು. ಮನೆಯವರು, ನೆರೆಯವರು,—ಯಾರು ಎಷ್ಟೆಂದರೂ ಜಾಲಪಳು ತನ್ನ ರೋಗಶಯ್ಯೆಯನ್ನು ಬಿಡಲಾರಳು. ಅವಳಿಗೀಗ ಮನೆಯಲ್ಲಿ ಯಾರ ಮೇಲೂ ನಂಬುಗೆ ಇಲ್ಲ; ಗಂಡನಾದ ರಮಾನಾಥನನ್ನೂ ಆಕೆ ನಂಬುವುದಿಲ್ಲ. ಅವರೆಲ್ಲ ತನ್ನ ಪ್ರಾಣವನ್ನು ಕೊಳ್ಳುವ ನಿರೀಕ್ಷೆಯಲ್ಲಿರುವರೆಂದೇ ಆಕೆಯ ಎಣಿಕೆ. ನಾವು ಯಾರನ್ನು ಅತಿ ಹೆಚ್ಚಾಗಿ ಪ್ರೀತಿಸುತ್ತೇವೆಯೋ ಅವರ ಮೇಲೆಯೆ ಅಧಿಕವಾಗಿ ಸಿಟ್ಟುಗೊಳ್ಳುತ್ತೇವಷ್ಟೆ. ಜಾಲಪಳಿಗೆ ಅತ್ಯಧಿಕ ಪ್ರೇಮವಿದ್ದುದು ರಮಾನಾಥನ ಮೇಲೆ; ಈಗ ಅವನನ್ನು ಕಂಡೊಡನೆ ಉರಿದು ಬೀಳುತ್ತಿದ್ದಳು. ಅವನು ತನ್ನ ಕಡೆಗೆ ತೋರಿಸುವ ಒಲವೆಲ್ಲ ಹುರುಳಿಲ್ಲದ ಬರಿಯ ಪ್ರದರ್ಶನವೆಂದೂ, ತನ್ನ ಮೇಲೆ ನಿಜವಾದ ಪ್ರೇಮವಿದ್ದಿದ್ದರೆ ಈ ರೀತಿ ನಿಶ್ಚಿಂತನಾಗಿರುತ್ತಿದ್ದಿಲ್ಲವೆಂದೂ, ಅವನು ಮನಸ್ಸು ಮಾಡಿದ್ದರೆ ಆ ಒಡವೆಗಳನ್ನೆಂದೋ ಮರಳಿ ಮಾಡಿಸಬಹುದಿತ್ತೆಂದೂ, ಆಕೆ ಪದೇ ಪದೇ ಯೋಚಿಸುತ್ತಿದ್ದಳು.

ಹೀಗಾಗಿ ರಮಾನಾಥನು ಮಾತಾಡಿದಾಗ ಸರಿಯಾದ ಉತ್ತರವೂ ಸಿಗುತ್ತಿದ್ದಿಲ್ಲ. ಅವನು ಬಲು ಕಷ್ಟದಿಂದ ಅವಳ ಈ ವರ್ತನೆಯನ್ನು ಸಹಿಸಿಕೊಳ್ಳುತ್ತಿದ್ದನು. ತನ್ನ ಆ ಬಡಾಯಿಯ ಫಲವು ಹೀಗಾದೀತೆಂದು ಆತನೆಣಿಸಿದ್ದರೆ, ಬಾಯಿಗೆ ಬೀಗಮುದ್ರೆ ಹಾಕಿರುತ್ತಿದ್ದನು. ತಂದೆಯ ಮೇಲೆ ಅವನಿಗೆ ಕ್ರೋಧ ಬಹಳ. ಅವನ ಪ್ರೇಮಮಯ ನಿಷ್ಕಪಟ ಹೃದಯದಲ್ಲಿ ಬೆಂಕಿಯೇಳುತ್ತಿತ್ತು. ಜಾಲಪಳ ಬಾಡಿದ ಮುಖಮುದ್ರೆಯನ್ನು ಕಂಡು ಅವನ ಸುಯ್ಯುತ್ತಿದ್ದನು. ತನ್ನ ಸುಖಕರವಾದ ಪ್ರೇಮಸ್ವಪ್ನವು ಈ ತೆರನಾಗಿ

ಇಷ್ಟು ಬೇಗನೇ ಒಡೆದು ಹೋಗಬಹುದೆಂದು ಆತನು ಎಣಿಸಿರಲಿಲ್ಲ. ಇನ್ನೆಂದಾದರೂ ಆ ದಿನಗಳು ಮರಳಿ ಬಂದಾವೆ? ಅಃ! ಮೂರು ಸಾವಿರದ ಬೆಲೆಯ ಆಭರಣಗಳನ್ನು ಮಾಡಿಸುವುದಾದರೂ ಎಂತು? ಒಂದು ಲಾಟರಿ ಎದ್ದಿದ್ದರೆ ಅದಾದರೂ ಆಗುತ್ತಿತ್ತು. ಆಗ ಜಾಲಪಳನ್ನು ಆಭರಣಗಳಿಂದ ಹೇರಿಬಿಡಬಹುದಿತ್ತು. ಈಗವನಿಗೆ ಕೃತ್ರಿಮ ನೋಟುಗಳನ್ನು ಮಾಡುವ ಕಲೆಗೊತ್ತಿದ್ದರೆ, ಹಾಗೂ ಮಾಡಿ ಒಂದು ಕೈ ನೋಡಿಯೇ ಬಿಡುತ್ತಿದ್ದನು.

ಅವನು ಒಂದು ದಿನ ಸಂಜೆಯ ವರೆಗೆ ಕೆಲಸವನ್ನು ಹುಡುಕುತ್ತಾ ಅಲೆದಾಡಿದನು. ಅವನ ಚದುರಂಗದ ಗೆಳೆಯರೆಷ್ಟೋ ಮಂದಿ ಇದ್ದರು. ಅವರಲ್ಲಿ ಯಾರೊಡನೆಯೂ ಅವನು ತನ್ನ ನಿಜಸ್ಥಿತಿಯನ್ನು ತಿಳಿಸಿರಲಿಲ್ಲ. ಅವರಿಗೆ ಇವನ ಬಡಾಯಿಯ ಮಾತುಗಳಷ್ಟೆ ಗೊತ್ತು. ಇವನು ಬಾಯಿಬಿಡದೆ ಅವರು ಕೆಲಸ ಕೊಡಿಸಲಿಕ್ಕೆ ಹೇಗೆ ಸಾಧ್ಯ? ಅವರು ತಾವಾಗಿ ಇವನಿಗೊಂದು ಕೆಲಸ ದೊರೆಕಿಸಿ ಕೊಟ್ಟಿದ್ದರಾಗಬಹುದಿತ್ತೆಂದು ಇವನ ಮನಸ್ಸು. ಅಷ್ಟು ಮಂದಿಗೆಳೆಯರಿದ್ದರೂ ರಮಾನಾಥನು ನಿರುದ್ಯೋಗಿಯಾಗಿರಲಿಕ್ಕೆ ಪ್ರಬಲ ಕಾರಣವೆಂದರೆ ಇದೇ. ಅವರಿಗೆ ಇವನು ನೌಕರಿಯ ಆವಶ್ಯಕತೆಯಲ್ಲಿರುವನೆಂಬುದು ಹೇಗೆ ತಿಳಿಯಬೇಕು? ಯಾರೊಡನೆಯೂ ಅವನು ತನ್ನ ಮನೋವ್ಯಥೆಯನ್ನು ಅರುಹದಾದನು ಆ ತೀವ್ರವೇದನೆಯನ್ನು ಉಸಿರು ತಡೆದು ಹಿಡಿದುಕೊಂಡಂತೆ ತನ್ನೆದೆಯೊಳಗೇ ಅಡಗಿಸಿ, ಜೋಲು ಮೋರೆಯನ್ನು ಹಾಕಿಕೊಂಡು ರಮಾನಾಥನು ಮನೆಗೆ ಹಿಂತಿರುಗಿದನು.

ರಾಮೇಶ್ವರಿಯು ನೀರನ್ನು ತಂದಿಟ್ಟವಳೇ ಕೇಳಿದಳು—ಇವತ್ತು ದಿನ ವಿಡೀ ಎಲ್ಲಿದ್ದಿ? ಕೈಕಾಲುಗಳನ್ನು ತೊಳೆದುಕೊ.

ರಮಾನಾಥನು ತಂಬಿಗೆಯನ್ನೆತ್ತಿಕೊಂಡಿದ್ದನಷ್ಟೆ, ಜಾಲಪಳು, ಬಂದು ಉಗ್ರಭಾವದಿಂದ ಒದರಿದಳು—ನನ್ನನ್ನು ನನ್ನ ಮನೆಗೆ ಕಳಿಸಿ ಕೊಡಿರಿ. ಈಗಲೆ!

ರಮಾನಾಥನು ತಂಬಿಗೆಯನ್ನು ಕೆಳಗಿರಿಸಿ ಅವಳ ಮಾತುಗಳ ಅರ್ಥವಾಗದವನಂತೆ ಅವಳ ಕಡೆ ನೋಡಿದನು.

ರಾಮೇಶ್ವರಿ ಎಂದಳು—ಏನು ಹೇಳುತ್ತೀಯಮ್ಮಾ? ಸೊಸೆಯರೆಲ್ಲಿ ಯಾದರೂ ಈ ರೀತಿ ಬೀಳ್ಕೊಳ್ಳುತ್ತಾರೆಯೆ?

ಜಾಲಪ—ನಾನು ಆ ನಿಮ್ಮ ಸೊಸೆಯರಂತಲ್ಲವೆಂಬುದನ್ನು ಈಗಲಾದರೂ ಅರಿತುಕೊಳ್ಳಿರಿ. ನನಗೆ ಬೇಕಾದಾಗ ಹೋಗುವೆನು, ಮನಬಂದಾಗ ಬರುವೆನು. ನನಗೆ ಯಾರ ಭಯವೂ ಇಲ್ಲ. ಇಲ್ಲಿ ನನ್ನನ್ನು ಕೇಳುವವರು ಯಾರೂ ಇಲ್ಲವೆಂದಾದ ಬಳಿಕ, ನಾನೇಕೆ ಅವರನ್ನು ನನ್ನವರೆಂದು ಹಚ್ಚಿಕೊಳ್ಳಲಿ? ದಿನವಿಡೀ ಅನಾಥಳಂತೆ ಬಿದ್ದುಕೊಂಡಿರುತ್ತೇನೆ. ಇಣಿಕಿ ನೋಡುವವರೂ ಇಲ್ಲ. ಇನ್ನು ಈ ಮನೆಯಲ್ಲಿ ಒಂದು ಕ್ಷಣವೂ ಇರಲಾರೆನು. ನನ್ನನ್ನು ಕಳುಹಿಸಲು ಯಾರೂ ಬರದಿದ್ದರೆ ಒಬ್ಬಳೇ ಹೋಗುವೆನು. ದಾರಿಯಲ್ಲಿ ನನ್ನನ್ನು ಎತ್ತಿಕೊಂಡು ಹೋಗಲು ಹುಲಿಯೇನೂ ಕೂತಿಲ್ಲ. ಹಾಗೆ ಎತ್ತಿಕೊಂಡು ಹೋದರೂ, ಒಳ್ಳೆಯದೆ ಆಯಿತು. ಇಲ್ಲಿ ನನಗೆ ದೊರೆಯುತ್ತಿರುವ ಅಂತಹ ಸುಖವಾದರೂ ಏನಿದೆ?

ರಮಾನಾಥನು ಸಾವಧಾನನಾಗಿ ಹೇಳಿದನು—ಸಮಾಚಾರವೇನೆಂದು ತಿಳಿಸಬಾರದೆ?

ಜಾಲಪ—ಸಮಾಚಾರವೇನೂ ನಡೆಯಲಿಲ್ಲ. ನನ್ನಿಚ್ಛೆ. ಇಲ್ಲಿ ಇರಲಿಕ್ಕೆ ಮನಸ್ಸಿಲ್ಲ. ಅಷ್ಟೆ.

ರಮಾನಾಥ –ಹೀಗೆ ಹೋದೆಯಾದರೆ ಮನೆಯವರು ಏನೆಣಿಸಿಯಾರೆಂಬುವದನ್ನಾದರೂ ಯೋಚಿಸಿದೆಯಾ?

ಜಾಲಪ—ಎಲ್ಲವನ್ನೂ ಯೋಚಿಸಿಬಿಟ್ಟಿದ್ದೇನೆ ಇದಕ್ಕಿಂತ ಹೆಚ್ಚು ಯೋಚಿಸುವ ಅಗತ್ಯವೂ ಇಲ್ಲವೆಂದೆನ್ನಿ. ನಾನು ಹೋಗಿ ವಸ್ತ್ರಗಳನ್ನು ಮೂಟೆ ಕಟ್ಟುವೆನು ಇಂದಿನ ಗಾಡಿಯಲ್ಲೆ ಹೋಗುವೆ

ಹೀಗೆ ಹೇಳಿ ಜಾಲಪಳು ಮೇಲೆ ಹೋದಳು. ಇವಳನ್ನು ಹೇಗೆ ಶಾಂತಗೊಳಿಸುವುದೆಂದು ಯೋಚಿಸುತ್ತಾ ರಮಾನಾಥನು ಆಕೆಯನ್ನು ಅನುಸರಿಸಿದನು.

ಜಾಲಪಳು ತನ್ನ ಕೋಣೆಗೆ ಹೋಗಿ ಹಾಸುಗೆಯನ್ನು ಸುತ್ತುತಿದ್ದಾಗ ರಮಾನಾಥನು ಹೋಗಿ ಅವಳ ಕೈಯನ್ನು ಹಿಡಿದು ಹೇಳಿದನು—ಈಗಲೇ ಹೋಗುವ ಹೆಸರೆತ್ತಿದೆಯಾದರೆ ನನ್ನಾಣೆಯಿದೆ!

ಜಾಲಪಳು ಹುಬ್ಬುಹಾರಿಸುತ್ತ ಹೇಳಿದಳು—ನಿಮ್ಮ ಆಣೆಗೆ ನಾವು ಬೆಲೆ ಕೊಡುವವರೇ ಅಲ್ಲ!

ತನ್ನ ಕೈಯನ್ನು ಅವನಿಂದ ಬಿಡಿಸಿಕೊಂಡು ಹಾಸಿಗೆಯನ್ನು ಕಟ್ಟೆಯೇ ಕಟ್ಟಿದಳು. ಆಮೇಲೆ ಪೆಟ್ಟಿಗೆಯನ್ನು ತೆರೆದು ಅದನ್ನು ಖಾಲಿಮಾಡಹತ್ತಿದಳು. ಆದರೆ ಈಗ ಆ ಮೊದಲಿನ ತತ್ಪರತೆಯುಳಿದಿರಲಿಲ್ಲ. ಪೆಟ್ಟಿಗೆಯನ್ನು ಒಮ್ಮೆ ತೆರೆಯುವಳು, ಒಮ್ಮೆ ಮುಚ್ಚುವಳು.

ಕೊನೆಗೆ ಆ ಹಾಸುಗೆಯಕಟ್ಟಿನ ಮೇಲೆಯೇ ಕೂತು ಹೀಗೆಂದಳು— ನೀವು ಆಣೆ ಇಟ್ಟಿದ್ದೇಕೆ ?

ರಮಾನಾಥನ ಹೃದಯದಲ್ಲಿ ಆಶೆಯ ಕಂಪನವು ಉತ್ಪನ್ನವಾಯಿತು. ಹೇಳಿದನು—ಇದರ ಹೊರತು ನನ್ನ ಬಳಿ ನಿನ್ನನ್ನು ನಿಲ್ಲಿಸುವ ಬೇರಾವ ಸಾಧನವಿದೆ?

ಜಾಲಪ—ನಾನು ಇಲ್ಲೇ ನರಳಿ ನರಳಿ ಸಾಯಬೇಕೆಂದು ನಿಮ್ಮಿಚ್ಛೆಯಲ್ಲವೆ ? ಆಗಲಿ.

ರಮಾ—ಅಂತಹ ಅಪಶಬ್ದಗಳನ್ನೇಕೆ ಆಡುತ್ತಿರುವೆ ? ನಿನ್ನ ಜತೆಗೆ ನಾನು ಬರಲು ಸಿದ್ಧನಾಗಿರುವೆನು. ನೀನು ಹೇಗೂ ಕೇಳುವದಿಲ್ಲವೆಂದಾದ ಮೇಲೆ ಮಾಡುವುದೇನು ? ಆಯಿತು. ನೀನಲ್ಲಿರು. ಆದರೆ ತಂದೆಯನ್ನೂ ತಾಯಿಯನ್ನೂ ಕೇಳಿ ಹೋಗು.

ಆರುವಂತಿದ್ದ ಬೆಂಕಿಗೆ ಎಣ್ಣೆ ಹೊಯ್ದಂತಾಯಿತು. ಜಾಲಪಳು ಸಟಕ್ಕನೆ ಎದ್ದು ಕೇಳಿದಳು—ಅವರನ್ನು ಕೇಳಲು ಅವರು ನನಗೇನಾಗಬೇಕು ?

ರಮಾ—ಏನೂ ಆಗಬೇಡವೆ ?

ಜಾಲಪ—ಬೇಡ, ಏನಾಗುವದೂ ಬೇಡ ! ನನಗೆ ಬೇಕಾದವರಾಗಿದ್ದರೆ ನನ್ನ ಕಣ್ಣೀರನ್ನೊರಸಲು ಮುಂದೆ ಬರುತ್ತಿದ್ದಿಲ್ಲವೆ ? ಹಗಲಿರುಳು ಇಲ್ಲಿ ಬಿದ್ದುಕೊಂಡಿದ್ದರೂ, ನನ್ನನ್ನು ಯಾರಾದರೂ ವಿಚಾರಿಸುವವರಿದ್ದಾರೆಯೆ ? ನೆರೆಕರೆಯ ಹೆಂಗುಸರೊಡನೆ ಹೇಗೆ ಮಾತಾಡ ಹೋಗಲಿ ? ನನ್ನೀ ರೂಪವನ್ನು ಅವರಿಗೆ ಹೇಗೆ ತೋರಿಸಲಿ ? ದೇವರೆ, ಹೀಗೆಯೇ ನನಗಿನ್ನೆಷ್ಟು ದಿನಗಳನ್ನು ನೂಕಬೇಕಾಗಿದೆಯೋ ? ಇವರಿಂದ ನನಗೆ ಇನ್ನಾವ ಆಸೆಯೂ ಇಲ್ಲ. ಇವರಿಗೆ ನೀವು ಒಬ್ಬರೇ ಅಲ್ಲ, ಇನ್ನೂ ಇಬ್ಬರು ಗಂಡು ಮಕ್ಕಳಿದ್ದಾರೆ. ನಿಮಗೆಯೆ ಎಲ್ಲವನ್ನೂ ಕೊಟ್ಟರೆ, ಪಾಪ, ಅವರ ಪಾಡೇನಾಗಬೇಕು ?

ರಮಾನಾಥನಿಗೆ, ಇನ್ನೊಮ್ಮೆ ಬಡಾಯಿಕೊಚ್ಚಲು ಅವಕಾಶ ದೊರೆ ತಂತಾಯಿತು. ಹೇಳಿದನು - ಪ್ರಿಯೇ, ನಿನ್ನ ವಿಚಾರದಲ್ಲಿ ಎಳ್ಳನಿತೂ ದೋಷ ವಿಲ್ಲ. ಇಲ್ಲವಾದರೆ ನಮ್ಮ ತಂದೆಗೆ ಮೂರುಸಾವಿರವೆಂದರೆ ಒಂದು ದೊಡ್ಡ ಲೆಕ್ಕವಲ್ಲ. ಸಾವಿರಾರು ರೂಪಾಯಿಗಳು ಬ್ಯಾಂಕಿನಲ್ಲಿವೆ. ಸುಮ್ಮನೆ ಮನ ಸ್ಸಿಗೆ ಸ್ವಲ್ಪ ವಿನೋದ ತಂದುಕೊಳ್ಳುವುದರಸಲುವಾಗಿ ಆಫೀಸಿಗೆ ಹೋಗಿಬರು ತ್ತಿದ್ದಾರೆ. ಅಷ್ಟೆ.

ಜಾಲಪ—ನೀವೇನೇ ಹೇಳಿ. ಜಿಪುಣರಲ್ಲಿ ಮೊದಲಿಗರು.

ರಮಾ—ಹಾಗಲ್ಲವಾದರೆ ಇಷ್ಟು ಸಂಪತ್ತಿಯೆಲ್ಲಿಂದ ಬರಬೇಕು ?

ಜಾಲಪ—ಇರಲಿ, ಬಿಡಲಿ. ನನಗಾರ ತಳ್ಳಿಯೂ ಬೇಡ. ಊಟಕ್ಕೆ ನಮ್ಮ ತಾಯಿಮನೆಯಲ್ಲಿ ಏನೂ ಕೊರತೆ ಬರಲಿಕ್ಕಿಲ್ಲ. ಸಖಿಯರೊಡನೆ ಸುಖವಾಗಿದ್ದು ಬಿಡುವೆನು.

ರಮಾ—ಆದರೆ, ಜಾಲಪಾ, ಇಲ್ಲಿ ನನ್ನ ಗತಿ ಏನಾಗಬಹುದೆಂಬು ದನ್ನು ಎಣಿಸಿರುವಿಯಾ ? ಕರಗಿ ಸೊರಗಿ ಸತ್ತೇ ಹೋದೇನು ಆ ಕಳವಾದಂ ದಿನಿಂದ ನನ್ನ ಮನೋವೇದನೆಯು ನನಗೇ ಗೊತ್ತು. ಅವರೊಡನೆ ಮಾಡಿ ಸಿಕೊಡಿರೆಂದು ನೂರುಬಾರಿ ಹೇಳಿದ್ದಾಯಿತು; ಆದರೆ ಅವರು ಬೇಕೆಂದೆ ಕಿವುಡರಾಗಿರುವರು. ಹೀಗೇಕೆ ನನ್ನನ್ನು ಉಪೇಕ್ಷಿಸುತ್ತಿದ್ದಾರೋ ತಿಳಿಯದು.

ಜಾಲಪ—ನಿಮಗೆ ಎಲ್ಲಿಯಾದರೂ ಕೆಲಸ ಸಿಕ್ಕದಮೇಲೆ ನನ್ನನ್ನು ಕರೆಯಿಸಿಕೊಳ್ಳಿ.

ರಮಾ—ಈಗ ಅದೇ ಯೋಚನೆಯಲ್ಲಿದ್ದೇನೆ ನೋಡು. ಬಹು ಬೇಗನೆ ಸಿಗುವುದರಲ್ಲಿಯೂ ಇದೆ. ನನಗೆ ಬೇಕಾದವರು ಸಾವಿರಾರು ಮಂದಿ ಇರು ವುದರಿಂದ, ತಡವಾಗದು. ಆದರೆ ಸ್ವಲ್ಪ ಒಳ್ಳೆಯ ಸ್ಥಳವಾಗಲೆಂದು ಹುಡು ಕಾಡುತ್ತಿದ್ದೇನೆ, ಅಷ್ಟೆ.

ಜಾಲಪ—ಹೂಂ, ನನಗೆ ಇವರ ( ವರ್ತನೆಯು ) ಅರಿವಾಯಿತು. ಇನ್ನೇನು, ನಾನೂ ಇಲ್ಲಿ ಅಧಿಕಾರವುಳ್ಳವಳಾಗಿ ಬದುಕುವೆನು. ನೀವು ಯಾರೊಡನೆಯೂ ನೌಕರಿಯವಿಷಯ ಪ್ರಸ್ತಾಪಿಸುವುದಿಲ್ಲವೆ ?

ರಮಾ—ನನಗೆ ನಾಚುಗೆಯಾಗುವುದು.

ಜಾಲಪ—ಇದರಲ್ಲಿ ಹಾಳು ನಾಚುಗೆಯೆಲ್ಲಿಂದ ಬಂತು ? ಹಾಗೆ ಬಾಯಿಂದ ಹೇಳಲಿಕ್ಕಾಗದಿದ್ದರೆ ಪತ್ರಬರೆದು ತಿಳಿಸಿರಿ.

ರಮಾನಾಥನು ಆನಂದದಿಂದ ನೆಗೆದು ಬಿದ್ದನು. ಎಷ್ಟು ಸರಳ ಉಪಾಯ? ಅವನಿಗೆ ಇದು ಇಷ್ಟು ಸಮಯವೂ ಹೊಳೆದೇ ಇರಲಿಲ್ಲ. ಹೇಳಿದನು—ಹಾಂ. ನಾಳೆಯೇ ನೀನೆಂದಂತೆ ಮಾಡುವೆನು.

ಜಾಲಾಪ—ಸರಿ, ನನ್ನನ್ನು ಕಳಿಸಿ ಬಂದು ಮತ್ತೆ ಬರೆಯಿರಿ.

ರಮಾ—ಏನು, ನಿಜವಾಗಿಯೂ ನೀನು ಹೋಗುವಿಯಾ? ಹಾಗಾದರೆ ನನಗೆ ನೌಕರಿ ಸಿಕ್ಕಿದಂತೆಯೆ, ನಾನು ಪತ್ರ ಬರೆದಂತೆಯೇ! ಈ ವಿಯೋಗ ದುಃಖದಲ್ಲಿ ಕಣ್ಣೀರಿಡುವುದೇ ಅಲ್ಲ, ನೌಕರಿಗಾಗಿ ಅಲೆದಾಡುವುದೆ? ಬೇಡ, ಈಗ ಹೋಗುವ ವಿಚಾರವನ್ನು ಬಿಟ್ಟು ಬಿಡು. ನೀನಿಲ್ಲದೆ ಯಾವುದಕ್ಕಾಗಿ ಇಲ್ಲಿ ಬಿದ್ದುಕೊಂಡು ಕೊಳೆಯುತ್ತಿರಲಿ? ಸ್ವಲ್ಪ ಆಚೆಗೆ ಸರಿ ನೋಡುವಾ. ಹಾಸುಗೆಯನ್ನು ಬಿಚ್ಚುತ್ತೇನೆ.

ಜಾಲಪಳು—ಹಾಸುಗೆಯಿಂದ ತುಸು ದೂರಕ್ಕೆ ಸರಿದು ಎಂದಳು—ನಾನು ಬೇಗನೇ ಹಿಂದೆ ಬರುವೆನು. ನಿಮ್ಮ ಬೆನ್ನ ಹಿಂದೆಯೇ ನಾನಿದ್ದೇನೆಂದು ಇಟ್ಟುಕೊಳ್ಳಿ.

ರಮಾನಾಥನು ಹಾಸುಗೆಯನ್ನು ಬಿಡಿಸುತ್ತ ಹೇಳಿದಳು—ಅದಾಗದು ಖಂಡಿತಕ್ಕೂ ಆಗದು. ಅಲ್ಲಿ ನೀನು ನಿನ್ನ ಗೆಳತಿಯರ ನಗಡುವೆ ನಮ್ಮನ್ನು ಮರೆತೆಯಾದರೆ, ಇಲ್ಲಿ ನಮ್ಮ ಪ್ರಾಣಕ್ಕೆ ಬರುವುದು.

ಜಾಲಪಳು ಕೃತಜ್ಞತೆಯನ್ನು ಸೂಚಿಸುತ್ತ ಹೇಳಿದಳು—ನೀವು ಮಾತು ಮಾತಿನಲ್ಲಿ ನಾನು ಕಟ್ಟಿಟ್ಟ ಹಾಸುಗೆಯನ್ನು ಬಿಚ್ಚಿ ಹಾಕಿದಿರಿ. ಇಲ್ಲವಾದರೆ ನಾನಿಷ್ಟು ಹೊತ್ತಿಗೆ ಮನೆಯನ್ನು ಮುಟ್ಟುತ್ತಿದ್ದೆ. ಗಂಡಸರು ಮಾಟಗಾರರೆಂದು ಶಾಹಜಾದಿಯೆಂದುದು ನಿಜ. ಇಂದು ಬ್ರಹ್ಮ ಬಂದರೂ ನನ್ನ ನಿಶ್ಚಯವನ್ನು ಬಿಡುವುದಿಲ್ಲವೆಂದು ಮಾಡಿದ್ದೆ. ಆದರೆ ನೀವು ಎರಡೇ ಎರಡು ಮಿನಿಟುಗಳಲ್ಲಿ ನನ್ನ ಎಲ್ಲಾ ಬಯಕೆಗಳನ್ನು ಮಣ್ಣುಗೂಡಿಸಿದಿರಿ. ನಾಳೆ ಖಂಡಿತವಾಗಿಯೂ ಪತ್ರಬರೆಯಿರಿ, ಏನಾದರೂ ಹಣ ಹುಟ್ಟಿಸದೆ ಇಲ್ಲಿ ನಮ್ಮ ನಿರ್ವಾಹವಾಗುವಂತಿಲ್ಲ.

ರಮಾ—ನಾಳೆ ಏಕೆ? ಈಗಲೇ ಹೋಗಿ ಎರಡು ಮೂರು ಕಡೆಗಳಿಗೆ ಪತ್ರ ಹಾಕಿ ಬರುವೆನು.

ಜಾಲಪ—ಎಲೆ ಹಾಕಿಕೊಂಡು ಹೋಗಿರಲ್ಲ.

ರಮಾನಾಥನು ಎಲೆಯಡಿಕೆ ಹಾಕಿಕೊಂಡು ಗಂಡಸರ ಕೊಠಡಿಗೆ ಬಂದು ಪತ್ರಬರೆಯಲು ಕುಳಿತನು. ಆದರೆ ಏನನ್ನೋ ಯೋಚಿಸಿ ಎದ್ದು ಒಂದು ಕಡೆ ತೆರಳಿದನು. ಪತ್ನಿಯ ಸಪ್ರೇಮ ಆಗ್ರಹವು ಗಂಡನಿಂದ ಏನನ್ನು ಮಾಡಿಸಲಾರದು ?

೬

ರಮಾನಾಥನ ಪರಿಚಿತರಲ್ಲಿ ರಮೇಶಬಾಬುಗಳೊಬ್ಬರು. ನಾಲ್ವತ್ತರ ಮೇಲೆ ಪ್ರಾಯವಾಗಬಹುದಾದರೂ ತುಂಬಾ ರಸಿಕ ಜೀವ. ಚದುರಂಗದ ಆಟದ ಮೇಲಂತೂ ಎಲ್ಲಿಲ್ಲದ ಮಮತೆ. ಅವರ ಪತ್ನಿಯು ಅವರ ಯೌವನ ದಲ್ಲಿಯೆ ತೀರಿಕೊಂಡಿದ್ದಳು. ಬಾಬುಗಳು ಎರಡನೆಯ ಮದುವೆ ಮಾಡಿ ಕೊಂಡಿರಲಿಲ್ಲ. ರಮಾನಾಥನು ಅವರ ಅಚ್ಚುಮೆಚ್ಚಿನ ಗೆಳೆಯರಲ್ಲೊ ಬ್ಬನು. ಇತ್ತ ಕೆಲವು ದಿನಗಳಿಂದ ಅವನಿಗೆ ಅವರ ಮನೆಗ ಹೋಗುವುದಾಗಿ ರಲಿಲ್ಲ. ಇಂದು ಅವರು ಸಿನೇಮಕ್ಕೆ ಹೊರಡುವ ಹೊತ್ತಿಗೆ ಸರಿಯಾಗಿ ಅಲ್ಲಿಗೆ ತಲಪಿದನು.

ಅವನನ್ನು ಕಂಡೊಡನೆ ರಮೇಶ ಬಾಬುಗಳಿಗೆ ಚಲಚ್ಚಿತ್ರವನ್ನು ಕಾಣುವ ಹುಮ್ಮಸ್ಸು ಕೆಳಗಿಳಿಯಿತು; ಚದುರಂಗದ ಹುರುಪೆದ್ದಿತು. ರಮಾ ನಾಥನು ಮಾತ್ರ ನೇರವಾಗಿ ತಾನು ಬಂದ ಉದ್ದೇಶವನ್ನು ಹೇಳಿಯೆ ಬಿಟ್ಟನು—ನಾನು ಈ ಮದುವೆ ಮಾಡಿಕೊಂಡು ಬಹಳ ಆಪತ್ತಿನಲ್ಲಿ ಬಿದ್ದಿ ದ್ದೇನೆ. ತಂದೆಯವರ ಹತ್ತಿರ ಕುಬೇರನ ಖಜಾನೆ ಇದ್ದಿದ್ದರೆ ಅದಾದರೂ ಒಂದು ಲೆಕ್ಕ. ಎಲ್ಲಾದರೂ ನೌಕರಿ-ಚಾಕರಿಯ ಭರವಸೆ ಇದೆಯೇ ? ಹೇಳಿ.

ರಮೇಶ ಬಾಬುಗಳು ಚದುರಂಗದ ಸಾಮಗ್ರಿಗಳನ್ನು ತೆಗೆಯುತ್ತಾ ಎಂದರು-–ಮೊದಲು ಒಂದೆರಡು ಆಟವಾಗಲಿ., ಆ ಬಳಿಕ ಯೋಚಿಸುವ.

ಒಂದನೆಯ ಆಟದ ಬಳಿಕ ರಮೇಶಬಾಬುಗಳೆಂದರು—ಒಂದು ಜಾಗ ವಿದೆ. ಸಂಬಳ ಮಾತ್ರ ಸ್ವಲ್ಪ ಕಡಮೆ, ಅಂದರೆ ಮೂವತ್ತು ರೂಪಾಯಿಗಳು. ಆ ಬಣ್ಣ ಹಚ್ಚಿಕೊಳ್ಳುವ ಗಡ್ಡದ ಮುದುಕರಿಲ್ಲವೆ; ಅವರಿಂದ ಈಗ ಕೆಲಸ ನಡೆಯುವುದಿಲ್ಲ. ಅವರ ಬದಲು ಬೇರೆ ಯಾರನ್ನಾದರೂ ನೇಮಿಸಬೇಕೆಂದಿ ದ್ದೇನೆ. ಅದು ನಿನಗೆ ಹೇಳಿಸಿದ ಹುದ್ದೆಯಲ್ಲವಾದರೂ, ಬೇಕಿದ್ದರೆ ಮಾಡಿ ಕೊಳ್ಳಬಹುದು.

ಹೀಗೆ ಆಟದ ನಡುವೆ, ಆಟ ಮುಗಿದ ಬಳಿಕ, ಚರ್ಚೆ ನಡೆಯುತ್ತಿತ್ತು. ಕೊನೆಗೊಮ್ಮೆ ಆಟವು ಮುಗಿಯಿತು. ರಾತ್ರಿ ಬಹಳವಾದುದರಿಂದ ರಮಾನಾಥನು ಅಂದು ಅಲ್ಲಿಯೇ ಉಳಿದನು.

ಮರುದಿನ ರಮೇಶಬಾಬುಗಳು ಎಂದಿನಂತೆ ಮುಂಜಾನೆ ನಸುಕಿನಲ್ಲೆ ಎದ್ದು ತಮ್ಮ ನೈಮಿತ್ತಿಕ ಕಾರ್ಯಗಳನ್ನೆಲ್ಲ ಪೂರೈಸಿ, ಒಂಭತ್ತುವರೆ ಗಂಟೆಗೆ ರಮಾನಾಥನನ್ನು ಎಬ್ಬಿಸಿದರು. ಆವನು ಆಲಸ್ಯದಿಂದ ಏಳಲೊಪ್ಪಲಿಲ್ಲ. ಅವರು ಊಟ ಮಾಡಿ ಬಂದು ಮುನಿಸಿಪಾಲಿಟಿಗೆ ಅರ್ಜಿ ಕೊಡಬೇಕಾದ ವಿಷಯವನ್ನೆತ್ತಿದ ವೇಳೆ ಎದ್ದನು. ಬೇಗ ಬೇಗನೆ ಮುಖ ತೊಳೆದು, ಅವರೊಡನೆ ಹೊರಟನು.

ದಾರಿಯಲ್ಲಿ ರಮೇಶಬಾಬುಗಳೆಂದರು— ರಾತ್ರಿ ಎಲ್ಲಿದ್ದಿಯೆಂದು ಮನೆಯವರು ಕೇಳಿದರೆ ಏನೆನ್ನುವಿ ?

ರಮಾನಾಥ—ನಿಮ್ಮಲ್ಲಿದ್ದೆನೆನ್ನುವೆನು.

ರಮೇಶ— ಸರಿ. ಒಳ್ಳೆಯದಾಯಿತು. ನಮಗೂ ನಾಲ್ಕು ಬೈಗಳನ್ನು ಕೇಳಿಸು. ಆಮೇಲೆ ನಿನ್ನನ್ನು ಇಲ್ಲಿ ಕಾಲಿಡಲಿಕ್ಕೇ ಬಿಡುವುದಿಲ್ಲ.

ರಮಾನಾಥ—ನನ್ನನ್ನು ಅಂತಹ ಸ್ತ್ರೀಭಕ್ತನೆಂದಣಿಸಬೇಡಿ. ಅದು ಹೋಗಲಿ. ಅರ್ಜಿಯನ್ನು ಹಿಡಿದುಕೊಂಡು ನಾನು ಸಾಹೇಬರನ್ನು ಕಾಣಲು ಹೋಗಬೇಕೆ ?

ರಮೇಶ—ಮತ್ತೆ, ಮನೆಯಲ್ಲಿ ಕೂತೇ ಕೆಲಸ ಸಿಗುತ್ತದೆಂದು ಮಾಡಿದಿಯಾ ? ನಾನೂ ನೌಕರಿಗೆ ಸೇರುವಾಗ ನಿನ್ನಷ್ಟೆ ದೊಡ್ಡವನಿದ್ದೆ. ಮೊದಲ ಸಂದರ್ಶನದ ಸಮಯ ನನ್ನನ್ನು ಎಲ್ಲಿ ಗಲ್ಲಿಗೆ ಏರಿಸಲೊಯ್ಯುತ್ತಿದ್ದಾರೋ ಎಂಬಷ್ಟು ಭಯವಾಗಿತ್ತು.

ರಮಾನಾಥ—ನೀವು ಕೆಲಸಕ್ಕೆ ಸೇರಿ ಇಪ್ಪತ್ತು ವರುಷಗಳಾಗಬಹುದಲ್ಲವೆ ?

ರಮೇಶ—ಇಪ್ಪತ್ತೆ ? ಪೂರಾ ಇಪ್ಪತ್ತೈದು ವರುಷಗಳು ಸಂದವು. ನನ್ನ ಹೆಂಡತಿಯ ದೇಹಾಂತವಾಗಿಯೇ ಇಪ್ಪತ್ತು ವರುಷಗಳಾದವು.

ರಮಾ—ನೀವು ಎರಡನೆಯ ಮದುವೆಯನ್ನೇಕೆ ಮಾಡಿಕೊಳ್ಳಲಿಲ್ಲ ?

ರಮೇಶಬಾಬುಗಳು ನಗುತ್ತಾ ಹೇಳಿದರು— ಸಕ್ಕರೆಯನ್ನು ತಿಂದು ಬಾಯಿ ಚಪ್ಪರಿಸುತ್ತಿದ್ದವನಿಗೆ ಬೆಲ್ಲವು ರುಚಿಸುವುದೆ ? ಅರಮನೆಯ ಸುಖವನ್ನು ಭೋಗಿಸಿದ ಮೇಲೆ ಗುಡಿಸಲ ಸುಖಕ್ಕೆ ಮನಸ್ಸೊಲಿಯುವುದೆ ? ಪ್ರೇಮವು ಆತ್ಮವನ್ನು ತೃಪ್ತಿಗೊಳಿಸುತ್ತದೆ. ನಿನಗೆ ನನ್ನ ವಿಷಯ ಎಲ್ಲಾ ಗೊತ್ತು. ಈಗ ಹೇಗೂ ಮುದುಕನಾಗಿರುವೆನು ಆದರೆ ನಿಜವಾಗಿ ಅನ್ನುತ್ತೇನೆ. ಈ ವಿಧುರ ಜೀವನದಲ್ಲಿ ನಾನು ಯಾವ ಸ್ತ್ರೀಯನ್ನು ಕಣ್ಣೆತ್ತಿ ಕಂಡುದಿಲ್ಲ. ಎಷ್ಟೆಷ್ಟೋ ಸುಂದರಿಯನ್ನು ನೋಡಿದೆನು, ಹಲವರು ಒತ್ತಾಯಪಡಿಸಿದರು ಆದರೆ ಎಂದೂ ವಿವಾಹದ ಇಚ್ಛೆಯುಂಟಾಗಲಿಲ್ಲ. ಆ ಪ್ರೇಮದ ಮಧುರಸ್ಮೃತಿಯಲ್ಲಿ ನನಗೆ ಈಗಲೂ ಪ್ರೇಮದ ಸಜೀವ ಆನಂದವು ತುಂಬಿ ತುಳುಕುತ್ತಿದೆ.

ಹೀಗೆ ಮಾತಾಡಿಕೊಳ್ಳುತ್ತ, ಇಬ್ಬರೂ ಆಫೀಸಿಗೆ ತಲಿಪಿದರು.

## ೧೦

ರಮಾನಾಥನು ಆಫೀಸಿನಿಂದ ಮನೆಯನ್ನು ಮುಟ್ಟಿದಾಗ ನಾಲ್ಕು ಗಂಟೆ. ಮಳೆ ಬರುತ್ತಿದ್ದರೂ ಅವನು ಉದ್ದುದ್ದ ಕಾಲನಿಡುತ್ತ ನಡೆದೇ ಬಿಟ್ಟನು. ಅಂಗಿಯೆಲ್ಲ ಮಳೆ ನೀರಿನಿಂದ ತೊಯ್ದು ಹೋದರೂ ತನಗೆ ಕೆಲಸ ಸಿಕ್ಕಿದ ಶುಭಸಮಾಚಾರವನ್ನು ಅರುಹಬೇಕೆಂಬ ಆತುರತೆಯಲ್ಲಿ ಅದನ್ನವನು ಲೆಕ್ಕಿಸಲಿಲ್ಲ. ಮೂವತ್ತು ರೂಪಾಯಿಯಾದರೇನು ? ಹುದ್ದೆ ಆದಾಯದ್ದು. ತಿಂಗಳೊಂದರ ಎಷ್ಟು ರೂಪಾಯಿಗಳನ್ನುಳಿಸಿದರೆ, ಜಾಲಪಳ ಚಂದ್ರಹಾರವನ್ನು ಮಾಡಿಸಬಹುದೆಂದು ಲೆಕ್ಕ ಹಾಕುತ್ತಿದ್ದನು. ಐವತ್ತು-ಅರುವತ್ತು ಉಳಿದರೂ ಬರಿಯ ಐದು ವರ್ಷಗಳಲ್ಲಿ ಜಾಲಪಳ ಮೈತುಂಬ ಆಭರಣಗಳನ್ನು ಹೇರಬಹುದು. ಯಾವ ಒಡವೆಗೆ ಎಷ್ಟು ಖರ್ಚು ತಗಲಬಹುದೆಂಬದನ್ನೂ ಆಗಲೇ ಎಣಿಸಿಕೊಳ್ಳುತ್ತಿದ್ದನು. ಮನೆಯೊಳಹೊಕ್ಕು ಬಟ್ಟೆ ಬದಲಿಸದೆಯೆ ಜಾಲಪಳ ಕೊಠಡಿಯತ್ತ ನಡೆದನು.

ಅವನನ್ನು ಕಾಣುತ್ತಲೆ ಜಾಲಪಳೆಂದಳು–ಇಂದು ಹೇಗೆ ಒದ್ದೆಯಾದಿರಿ! ರಾತ್ರಿ ಎಲ್ಲಿದ್ದಿರಿ ?

ರಮಾನಾಥನೆಂದನು— ಬೇರೇನು ? ಕೆಲಸ ಹುಡುಕಿಕೊಂಡು ಹೋಗಿದ್ದೆ. ಈಗ ಸೀದಾ ಮುನಿಸಿಪಲ್ ಆಫೀಸಿನಿಂದಲೆ ಬರುತ್ತಿದ್ದೇನೆ ಅಲ್ಲಿಯ ಒಂದು ಸ್ಥಳ ದೊರಕಿದೆ.

ಜಾಲಪಳು ಕುಣಿದು ಜಿಗಿದಳು—ನಿಜವೆ ! ಎಷ್ಟು ರೂಪಾಯಿಗಳು ?

ರಮಾನಾಥನಿಗೆ ನಿಜವಿದ್ದುದನ್ನು ಹೇಳಲು ಸಂಕೋಚವಾಯಿತು. ಮೂವತ್ತೆಂದು ಹೇಳುವುದು ಅಪಮಾನದ ಮಾತು. ಹೆಂಡತಿಯ ಕಣ್ಣುಗಳಲ್ಲಿ ತುಚ್ಛನೆಂದು ಕಾಣಿಸಿಕೊಳ್ಳಬೇಕೆಂದು ಯಾರಿಗೆ ಆಸೆ ಇದ್ದಿತು ? ಹೇಳಿದನು—ಮೊದಲು ನಾಲ್ವತ್ತು ಸಿಗುವುದು; ಆದರೆ ಬೇಗನೇ ಹೆಚ್ಚುವ ಸಂಭವವಿದೆ. ಕೆಲಸ ತುಂಬಾ ಆದಾಯದ್ದು.

ಜಾಲಪಳು ಅವನಿಗೆ ಹೆಚ್ಚು ಸಂಬಳದ ಕೆಲಸ ಸಿಕ್ಕಬಹುದೆಂದು ಭಾವಿಸಿದ್ದಳು. ಈಗ ನಿರಾಶಳಾಗಿ ಎಂದಳು—ನಾಲ್ವತ್ತರಿಂದೇನಾಗುವುದು ಮಣ್ಣು ? ಒಂದು, ಐವತ್ತು-ಅರುವತ್ತು ಇದ್ದಿದ್ದರಾದರೂ ಒಂದು ಲೆಕ್ಕ.

ರಮಾನಾಥ—ನೂರು ರೂಪಾಯಿಯ ಸ್ಥಳವೂ ಸಿಗುತ್ತಿರಲಿಲ್ಲವೆಂದಲ್ಲ. ಆದರೆ ಈ ಕೆಲಸದಲ್ಲಿ ಅಧಿಕಾರ ಹೆಚ್ಚು, ಸುಖವೂ ಇದೆ. ಸಂಬಳವನ್ನು ಬಿಟ್ಟು ಮೇಲೆ ಐವತ್ತು-ಅರವತ್ತು ರೂಪಾಯಿಗಳ ಆದಾಯವೂ ಇದೆ.

ಜಾಲಪ—ಓ ! ಹಾಗಾದರೆ ನೀವು ಲಂಚಕ್ಕೆ ಕೈಯೊಡ್ಡುವಿರಾ ? ಬಡವರ ಕೊರಳನ್ನು ಹಿಚುಕುವಿರಾ ?

ರಮಾನಾಥನು ನಗುತ್ತ ಹೇಳಿದನು—ಇಲ್ಲ ಪ್ರಿಯೇ, ಇಲ್ಲ. ಅಲ್ಲಿ ಬಡವರ ಕೊರಳನ್ನಿರಿಯಬೇಕಾಗಿಲ್ಲ. ದೊರೆವ ಹಣವೆಲ್ಲ ದೊಡ್ಡ ದೊಡ್ಡ ಸಾಹುಕಾರರದು; ಇಷ್ಟೊಂದು ಹಣದಿಂದ ಅವರ ಕೊರಳು ಮುರಿವಂತಿಲ್ಲ. ತಮ್ಮ ಕೆಲಸ ಆದಷ್ಟು ಬೇಗನೇ ಆಗಬೇಕೆಂಬ ಇರಾದೆಯಿಂದ ಅವರು ಕಾಲು ತಿಕ್ಕಲಿಕ್ಕೂ ತಯಾರು, ಕೈ ಬಿಸಿ ಮಾಡುವುದಂತಿರಲಿಲ್ಲವಾದರೆ ! ಬೆಳಗೆ ಬಂದವರನ್ನು ಸಾಯಂಕಾಲದ ತನಕ ಕಾಯುವಂತೆ ಮಾಡುವ ಅಧಿಕಾರ ನನಗಿದೆ.

ಜಾಲಪಳಿಗೆ ಈಗ ಸಂತೋಷವಾಯಿತು. ಹೇಳಿದಳು—ಹಾಂ, ಹಾಂ! ಸರಿ, ಹಾಗಾದರೆ ಬಡವರ ಕೆಲಸವನ್ನು ಹೀಗೆಯೇ ಪುಕ್ಕಟೆ ಮಾಡಿಕೊಡುವಿರಲ್ಲವೆ ?

ರಮಾನಾಥ—ಮತ್ತೆ ಮಾಡುದಿರುತ್ತೇನೆಯೆ ?

ಜಾಲಪ—ತಾಯಿಯವರ ಹತ್ತಿರ ಹೇಳಲಿಲ್ಲವೆ ? ಹೋಗಿ ಹೇಳಿರಿ. ನನಗಂತೂ ಇದರಲ್ಲಿ ಎಲ್ಲಕ್ಕೂ ಹೆಚ್ಚಿನ ಸಂತೋಷವೆಂದರೆ, ಇನ್ನು ನನಗೂ

ಈ ಮನೆಯಲ್ಲಿ ಒಂದು ಅಧಿಕಾರನಿದೆಯಲ್ಲ ಎಂದು ಇನ್ನು ನನಗೂ ಇಲ್ಲಿ ಸ್ಥಾನ-ಮಾನವಿದೆ ಎಂಬುದನ್ನವರಿಗೆ ತೋರಿಸಿಕೊಡುವೆನು.

ರಮಾನಾಥ—ಆಯಿತು. ಹೇಳಿಬರುವೆನು. ಆದರೆ ಅವರೊಡನೆ ಸಂಬಳ ಇಪ್ಪತ್ತೆಂದೇ ಹೇಳುವೆನು.

ಜಾಲಪಳು ಉಲ್ಲಸಿತಳಾಗಿ ಹೇಳಿದಳು—ಸರಿ. ಹಾಗೆಯೇ ಮಾಡಿ. ಹದಿನೈದೆಂದು ಹೇಳಿದರೂ ಸಾಕು. ಆ ಅತಿರಿಕ್ತ ಆದಾಯದ ಪ್ರಸ್ತಾಪವೇ ಬೇಡ. ಆದನ್ನೆಲ್ಲ ಅವರು ಲೆಕ್ಕ ಹಾಕದಿರಲಿಕ್ಕಿಲ್ಲವೆಂದೆಣಿಸುವಾ. ಆದರೂ ನಾವಾಗಿ ಹೇಳುವುದು ಬೇಡ. ಪ್ರಥಮತ ನಾನು ಚಂದ್ರಹಾರವನ್ನು ಮಾಡಿಸುವೆನು.

ಅಷ್ಟರಲ್ಲಿ ಅಂಚೆ ಜವಾನನು ಬಂದು ಪಾರ್ಸಲೊಂದನ್ನು ಕೊಟ್ಟು ಹೋದನು. ಅದು ದೀನದಯಾಳರಿಂದ ಬಂದಿತ್ತು. ದೇವದಾರದ ಪೆಟ್ಟಿಗೆಯನ್ನು ಒಡೆದು ನೋಡಿದಾಗ ಆದರೊಳಗೆ ಮಿನುಗುತ್ತಿತ್ತು-ಚಂದ್ರಹಾರ! ರಮಾನಾಥನು ಆದನ್ನು ತೆಗೆದು ನೋಡಿ, ನಕ್ಕು ಹೇಳಿದನು—ನೋಡೆ ಜಾಲಪಾ, ದೇವರು ನಿನ್ನ ಮೊರೆಯನ್ನು ಕೇಳಿದನೆಂದಾಯಿತು. ಹಾರ ವೇನೋ ಬಹಳ ಚೆನ್ನಾಗಿದೆ.

ಜಾಲಪಳು ಕುಂಠಿತ ಸ್ವರದಲ್ಲೆಂದಳು—ನನ್ನ ತಾಯಿಗೆ, ಇದೇನು ತಲೆಗೆ ಹತ್ತಿತೋ ದೇವರೇ ಬಲ್ಲ, ತನ್ನ ಹಾರವನ್ನೆ ಕಳಿಸಿರುವಳು. ಆದರೆ ನಾನು ಇದನ್ನು ಮುಟ್ಟೋದೆ ಇಲ್ಲ. ಚಪ್ಪಾಲು ಕಟ್ಟೆ ತೆರೆದಿದ್ದರೆ ಈಗಲೇ ಇದನ್ನು ಹಿಂದೆ ಮಾಡಿ ಬನ್ನಿ.

ರಮಾನಾಥನು ವಿಸ್ಮಿತನಾಗಿ ಹೇಳಿದನು—ಎಲಾ, ಇದೆಂಥ ಮಾತನ್ನಾಡುತ್ತಿದ್ದೀಯೇ? ಅವರು ಕೋಪಿಸಿಕೊಳ್ಳುವುದಿಲ್ಲವೆ?

ಜಾಲಪಳು ಮೂಗು ಮುರಿದುಕೊಂಡು ಹೇಳಿದಳು—ನಾನು ಅವರ ಕೃಪೆ ಇಲ್ಲದೆಯೂ ಜೀವಿಸಬಲ್ಲೆನು. ಇಷ್ಟು ದಿವಸ ಕಳೆದ ಮೇಲೆ ನನ್ನ ವಿಷಯದಲ್ಲಿ ಕರುಣೆ. ನಾನು ಮನೆಯಿಂದ ಹೊರಟು ಬರುವಾಗ ಬಂದಿರಲಿಲ್ಲ ದಯೆ, ಈಗ ಅಕಾಲದಲ್ಲಿ ಬಂದಿದೆ. ಅವರ ಒಡವೆ ಅವರಿಗೇ ಇರಲಿ. ನಮಸ್ಕಾರ. ನನಗೆ ಯಾರ ಕರುಣೆಯ ಅಪೇಕ್ಷೆಯೂ ಇಲ್ಲದ ಈಗ ಅವಳಿಗೆ ಉಟ್ಟು ತೊಟ್ಟು ಶೃಂಗಾರ ಮಾಡಿಕೊಳ್ಳುವ ಕಾಲ. ನಾನೇಕೆ ಅವಳ ವಿಭವಕ್ಕೆ ಅಡ್ಡಿಬರಲಿ? ನೀವು ಕ್ಷೇಮವಾಗಿದ್ದರೆ ನನಗೆ ಒಡವೆಗಳಿಗೇನೂ ಕೊರತೆ

ಬರಲಿಕ್ಕಿಲ್ಲ. ಜಾಲಪಳಿಗೆ ಅವರ ಆಭರಣದ ಬಯಕೆಯಿಂದ ಅನ್ನ ಸೇರದೆ ಇಲ್ಲ ಎಂಬುದನ್ನು ತಾಯಿಗೆ ತೋರಿಸಿ ಕೊಡುವೆನು.

ರಮಾನಾಥನು ಸಮಾಧಾನಗೊಳಿಸುತ್ತ ಹೇಳಿದನು—ನನಗೆ ತಿಳಿದ ಮಟ್ಟಿಗೆ ಹೇಳುವುದಾದರೆ ನೀನು ಈ ಹಾರವನ್ನು ಸ್ವೀಕರಿಸದಿದ್ದರೆ, ಅವರಿಗೆ ತುಂಬಾ ದು:ಖವಾಗುವುದು. ಯೋಚಿಸಿ ನೋಡು. ನಿನ್ನನ್ನು ಕಳಿಸಿ ಕೊಡುವಾಗ ಕೊಡದಿದ್ದುದು ಒಳ್ಳೆಯದಾಯಿತಲ್ಲವೆ? ಇಲ್ಲವಾದರೆ ಎಲ್ಲದರೊಟ್ಟಿಗೆ ಇದೂ ಹೋಗುತ್ತಿತ್ತು ನೋಡು.

ಜಾಲಪ—ಇಲ್ಲ, ನಾನಿದನ್ನು ಮುಟ್ಟಲೊಲ್ಲೆನು. ಇದು ನನ್ನ ನಿಶ್ಚಯ.

ರಮಾ—ಯಾಕೆಂದಾಗ ಬೇಕಲ್ಲ ?

ಜಾಲಪ—ನನ್ನಿಷ್ಟ.

ರಮಾ— ಈ ನಿನ್ನ ಇಷ್ಟಕ್ಕೆ ಏನಾದರೂ ಕಾರಣ ಬೇಡವೆ ?

ಜಾಲಪಳು ಕಟ್ಟಿ ಬರುವ ಸ್ವರದಲ್ಲಿಂದಳು—ಕಾರಣವಿದೇ. ತಾಯಿ ಇದನ್ನು ಸಂತೋಷದಿಂದ ಕೊಡುತ್ತಿಲ್ಲ. ಇದನ್ನು ಕಳಿಸಿಕೊಡುವ ಹೊತ್ತು ಎಷ್ಟು ಅತ್ತಳೋ ಏನೊ. ನಾವು ಹಿಂದೆ ಕಳಿಸಿದಾಗ ಆಕೆಗೆ ನಿಜವಾದ ಹಾರ್ದಿಕ ಆನಂದವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಕೊಡುವವನ ಹೃದಯವನ್ನು ನೋಡಬೇಕು. ಪ್ರೇಮದಿಂದ ಒಂದು ಉಂಗುರವನ್ನು ಕೊಟ್ಟರೂ ಅದನ್ನು ಎರಡು ಕೈಗಳಿಂದ ತೆಗೆದುಕೊಂಡೇನು. ಹಾಗಲ್ಲದೆ ಮನಸ್ಸನ್ನು ಕಲ್ಲು ಮಾಡಿ ಲೋಕಮರ್ಯಾದೆಗೋಸ್ಕರವೋ, ಯಾರ ಒತ್ತಾಯದ ಸಲುವಾಗಿಯೋ, ಕೊಟ್ಟರೆ ಅದು ಕೊಟ್ಟಂತಾಗುವುದೆ? ನಾನು ಯಾರ ದಾನವನ್ನೂ ಸ್ವೀಕರಿಸುವವಳಲ್ಲ; ಅದು ಬೇಕಾದರೆ ಸ್ವಯಂ ಮಾತೆಯಿಂ[illegible]ಲೆ ಬಂದಿರಲಿ !

ಜಾಲಪಳಿಗೆ ಮಾತೆಯ ಮೇಲಿದ್ದ ಈ ತೀವ್ರದ್ವೇಷವನ್ನು ನೋಡಿ ರಮಾನಾಥನ ಬಾಯಿ ಮುಚ್ಚಿಹೋಯಿತು. ಮಂಚದಿಂದೇಳುತ್ತಾ ಹೇಳಿದನು—ತಾಯಿಗೂ ತಂದೆಗೂ ತೋರಿಸಿ ತರುವೆನು. ಒಂದು ಮಾತು ಅವರನ್ನೂ ಕೇಳಿ ನೋಡುವಾ.

ಜಾಲಪಳು ಹಾರವನ್ನು ಅವನ ಕೈಯಿಂದ ಒಮ್ಮೆಗೆ ಎಳೆದುಕೊಂಡು ಹೇಳಿದಳು—ಅವರನ್ನು ಕೇಳಲು ಅವರು ನನಗೇನಾಗಬೇಕು? ಒಂದೇ ಮನೆಯಲ್ಲಿದ್ದೇವೆ ಎಂದಿಷ್ಟೆ ನನಗೂ ಅವರಿಗೂ ಇರುವ ಸಂಬಂಧ ನನ್ನನ್ನ

ವರು ಯಾವಾಗ ಪರಿಗಣಿಸುವುದಿಲ್ಲವೊ, ನಾನಾದರೂ ಅವರನ್ನು ಲೆಕ್ಕಿಸುವುದಿಲ್ಲ.

ಹೀಗೆ ಹೇಳುತ್ತಾ ಅವಳು ಹಾರವನ್ನು ಅದೇ ಪೆಟ್ಟಿಗೆಯಲ್ಲಿ ಹಾಕಿ ಬಟ್ಟೆಯನ್ನು ಸುತ್ತಿ ಹೊಲಿಯತೊಡಗಿದಳು. ರಮಾನಾಥನು ಹೆದರುತ್ತ ಹೆದರುತ್ತಾ ಹೇಳಿದನು—ಇಷ್ಟು ಅವಸರವೇನು? ನಾಲ್ಕೈದು ದಿನಗಳಲ್ಲಿ ಕಳಿಸುವ. ಅವರಿಗೂ ಸ್ವಲ್ಪ ಸಮಾಧಾನವಾಗುವುದು.

ಇದನ್ನು ಕೇಳಿ ಜಾಲಪಳು ಕಠೋರ ನೇತ್ರಗಳಿಂದ ಅವನನ್ನು ನೋಡಿ ಹೇಳಿದಳು—ಇದನ್ನು ಹಿಂದೆ ಕೊಡದೆ ನನಗೆ ನಿದ್ದೆ ಬರಲಿಕ್ಕಿಲ್ಲ. ಇದನ್ನಿಟ್ಟು ಕೊಂಡರೆ ನನ್ನೆದೆಯಲ್ಲಿ ಮುಳ್ಳುಗಳೆದ್ದಾವು. ಹುಂ, ಪಾರ್ಸಲು ತಯಾರಾಯಿತು. ತೆಗೆದುಕೊಂಡು ಹೋಗಿ.

ರಮಾನಾಥನು ಸಿದ್ಧವಾದ ಪಾರ್ಸಲನ್ನು ಹಿಡಿದುಕೊಂಡು ಬೇಸರದಿಂದ ಕೆಳಗೆ ಹೋದನು.

## ೧೧

ದಯಾನಾಥ ಮಹಾಶಯರಿಗೆ ಮಗನು ಕೆಲಸಕ್ಕೆ ಸೇರಿರುವನೆಂಬುದನ್ನು ಕೇಳಿ ತುಂಬಾ ಹರ್ಷವಾಯಿತು. ಮದುವೆಯಾದ ಕೂಡಲೇ ಮಗನು ಈ ರೀತಿ ಚೇತರಿಸಿಕೊಂಡಾನೆಂದು ಅವರೆಣಿಸಿರಲಿಲ್ಲ. ಹೇಳಿದರು—ಸ್ಥಳವೇನೋ ಒಳ್ಳೆಯದೆ ಪ್ರಾಮಾಣಿಕತೆಯಿಂದ ಕೆಲಸ ಮಾಡಿದರೆ ಇದಕ್ಕಿಂತ ಮೇಲಿನ ಹುದ್ದೆಯೂ ದೊರಕೀತು. ಬೇರೆಯವರ ಹಣವನ್ನು ಹೀನವೆಂದು ಜೀವಿಸಬೇಕೆಂದಿಷ್ಟೆ ನನ್ನ ಉಪದೇಶ.

ರಮಾನಾಥನಿಗೆ ಮನಸ್ಸಿನಲ್ಲಿ ತಂದೆಗೆ ಹೀಗನ್ನಬೇಕೆಂದು ತೋರಿತು—ನಿಮ್ಮ ಉಪದೇಶವು ನಿಮಗೇ ಇರಲಿ, ಅದು ನಮಗನುಕೂಲವಾಗಿಲ್ಲ. ಆದರೂ ನಾನು ಅಷ್ಟು ನಿರ್ಲಜ್ಜನಲ್ಲ.

ದಯಾನಾಥರು ಮತ್ತೆ ಹೇಳಿದರು—ಆ ಸ್ಥಳ ಮೂವತ್ತು ರೂಪಾಯಿಗಳದಿತ್ತು. ನಿನಗೆ ಇಪ್ಪತ್ತೇ ಸಿಕ್ಕುವುದು ಹೇಗೆ?

ರಮಾನಾಥಃ—ಹೊಸಬನಿಗೆ ಪೂರಾ ಸಂಬಳವನ್ನು ಕೊಡುತ್ತಾರೆಯೇ? ಒಂದಾರು ತಿಂಗಳಲ್ಲಿ ಬಹುಶಃ ಹೆಚ್ಚಬಹುದು. ಕೆಲಸ ತುಂಬಾ ಇದೆ.

ದಯಾನಾಥಃ—ನೀನು ತರುಣನು. ಕೆಲಸಕ್ಕೆ ಹೆದರಬಾರದು.

ರಮಾನಾಥನು ಮರುದಿನ ಹೊಸ ಸೂಟನ್ನು ಮಾಡಿಸಿದನು. ಫೇಶನ್ನಿನ ಎಷ್ಟೋ ವಸ್ತುಗಳನ್ನು ಕೊಂಡನು. ಮಾವನ ಮನೆಯಲ್ಲಿ ಸಿಕ್ಕಿದ ರೂಪಾಯಿಗಳಲ್ಲಿ ಸ್ವಲ್ಪ ಉಳಿದಿತ್ತು. ಕಡಮೆಯಾದುದನ್ನು ಗೆಳೆಯರ ಕೈಯಿಂದ ಕೊಂಡು ಭರ್ತಿ ಮಾಡಿಕೊಂಡನು. ತನ್ನ ಖಾದೀ ಉಡುಪಿನಿಂದ ಆಫೀಸಿನವರ ಕಣ್ಣಾನ್ನೆಲ್ಲಾ ಸೆಳೆಯಲಾಶಿಸುತ್ತಿದ್ದನು. ತನ್ನ ಪ್ರಭಾವವನ್ನದಲ್ಲಿ ಬೀರಬೇಕೆಂದಿದ್ದನು. ಸಂಬಳವೆಷ್ಟೆಂದು ಯಾರೂ ಕೇಳುವುದಿಲ್ಲ. ಲೇವಾದೇವಿಗೆ ಬರುವ ಮಂದಿ ತನ್ನನ್ನು ಕಂಡು ಬೆಚ್ಚಿ ಬೀಳಬೇಕು. ಸರಿಯಾದ ಆಡಂಬರವಿದ್ದರೇನೇ ಒಳ್ಳೆಯ ಆದಾಯವೂ ಲಭಿಸೀತೆಂದು ಆತನ ಎಣಿಕೆ. ಮಾರ್ಗದಲ್ಲಿ ಸಾಮಾನ್ಯ ಪೋಲೀಸನೊಬ್ಬನು ನಿಂತಿದ್ದರೆ ನಾಲ್ಕಾಣೆಯಲ್ಲೇ ಮುಗಿಸಬಹುದು. ಅವನ ಸ್ಥಳದಲ್ಲಿ ಸಾರ್ಜಂಟನೊಬ್ಬನು ಬಂದರೆ ನಾಲ್ಕಾಣೆಯಲ್ಲಿ ಕೆಲಸ ತೀರಿಸೋಣವೆಂದು ಯಾರಿಗೆ ಕಂಡೀತು ? ಚಿಂದೆ ಬಟ್ಟೆಯ ಭಿಕಾರಿಗೆ ಹೊರಡಲು ಸನ್ನೆ ಮಾಡಿದರೆ ಸಾಕು. ಆದರೆ ರೇಶ್ಮೆ ವಸ್ತ್ರಧಾರಿಯಾದ ಸಾಧುವನ್ನು ಹಾಗೆ ಕಳುಹಿಸಲಾಗುವುದೇ ? ವೇಷಕ್ಕೂ ಭಿಕ್ಷೆಗೂ ಸನಾತನ ಕಾಲದಿಂದಲೂ ನಂಟು ಉಂಟೇ ಉಂಟು.

ಮೂರನೆಯ ದಿನ ರಮಾನಾಥನು ಕೋಟು ಪ್ಯಾಂಟುಗಳನ್ನು ಧರಿಸಿ ಹ್ಯಾಟನ್ನಿಟ್ಟುಕೊಂಡು ಹೊರಟಾಗ ಅವನ ಚಂದವನ್ನೇನೆಂದು ಹೇಳುವುದು ! ಪೇದೆಗಳು ಬಗ್ಗಿ ಬಗ್ಗಿ ನಮುಸ್ಕರಿಸಿದರು. ರಮೇಶಬಾಬುಗಳನ್ನು ನೋಡಿ ಅವನು ಚಾರ್ಜು ತೆಗೆದುಕೊಳ್ಳಲು ಹೋದನು. ಜಗಲಿಯಲ್ಲಿ ಒಂದು ಪೆಟ್ಟಿಗೆಯ ಮೇಲೆ ತನ್ನ ಲೆಖ್ಖದ ಪುಸ್ತಕಗಳನ್ನಿಟ್ಟುಕೊಂಡು ಅವರು ಕೂತ ಕೊಳಕು ಚಾಪೆಯ ಮೇಲೆ ಕುಳಿತುಕೊಳ್ಳಲೂ ರಮಾನಾಥನಿಗೆ ಅಸಹ್ಯವಾಯಿತು. ಅವನು ರಮೇಶಬಾಬುಗಳಲ್ಲಿಗೆ ಬಂದು ಕುರ್ಚಿ ಮೇಜುಗಳನ್ನು ಕಳುಹಿಸಿಕೊಡಲು ಹೇಳಿದನು. ರಮೇಶಬಾಬುಗಳು ನಗುತ್ತಾ ಕುರ್ಚಿ ಮೇಜುಗಳನ್ನು ಕಳಿಸಿದರು. ಮುದಿಕರಣಿಕರು ತಮ್ಮ ಚಾರ್ಜನ್ನು ಕೊಟ್ಟುಬಿಟ್ಟರು. ಆ ಚಾರ್ಜು ಕೊಡುವುದರಲ್ಲಿ ಇದ್ದುದಾದರೂ ಏನು ? ಬರೇ ಇಂದಿನ ಲೆಖ್ಖವನ್ನಷ್ಟು ತಿಳಿಸಿದರಾಯಿತು. ಯಾವ ಜೀನಸಿನ ಮೇಲೆ ಯಾವದರದಲ್ಲಿ ಸುಂಕ ವಸೂಲು ಮಾಡಬೇಕೆಂದು ನೋಡಿಕೊಳ್ಳಲು ಒಂದು ಪಟ್ಟಿಯಿದ್ದಿತು. ರಮಾನಾಥನು ಅರ್ಧ ತಾಸಿನಲ್ಲಿ ತನ್ನ ಕೆಲಸದ

ಸಂಪೂರ್ಣ ಅರಿವನೆಲ್ಲ ಮಾಡಿಕೊಂಡನು. ಆ ಮುದಿಯನಿಗೆ ತಾನು ಮೂವತ್ತು ವರುಷಗಳ ವರೆಗೆ ಕೆಲಸ ಮಾಡಿಕೊಂಡಿದ್ದ ಸ್ಥಳವನ್ನು—ಕೀರ್ತಿ ಹಣಗಳೆರಡನ್ನು ಸಂಪಾದಿಸಿ ಕೊಟ್ಟಂತಹ ಜಾಗವನ್ನು ಬಿಟ್ಟು ಹೋಗುವುದಕ್ಕೆ ಕಡು ದು:ಖವಾಯಿತು. ಚಾರ್ಜನ್ನು ವಹಿಸಿಕೊಟ್ಟು ಅವರು ಬೀಳ್ಕೊಳ್ಳುವ ಸಮಯ ರಮಾನಾಥನು ಮೆಟ್ಟಿಲವರೆಗೆ ಅವರ ಸಂಗಡಲೇ ಬಂದನು. ಖಾನ್‌ಸಾಹೇಬರು ಇವನ ನಮ್ರತೆಯನ್ನು ಕಂಡು ಪ್ರಸನ್ನರಾದರು, ಮುಗುಳ್ನಗತ್ತಾ ಹೇಳಿದರು—ಪ್ರತಿಯೊಂದು ವಸ್ತುವಿನ ಮೇಲೆ ಒಂದಾಣೆ ಹೇಗೂ ಸಿಗುತ್ತದೆ. ಜನರು ಸಂತೋಷದಿಂದ ಕೊಡುತ್ತಾರೆ. ನೀವು ಶ್ರೀಮಂತರು. ಹೌದು. ಆದರೆ ರೂಢಿಯನ್ನು ಕೆಡಿಸಬೇಡಿರಿ. ಏಕೆಂದರೆ ರೂಢಿ, ಒಮ್ಮೆ ಬಿದ್ದು ಹೋದರೆ ಮತ್ತೆ ಅದನ್ನು ಜಾರಿಗೆ ತರುವುದು ಕಷ್ಟ ಸಾಧ್ಯ. ಈ ಒಂದಾಣೆಯಲ್ಲಿ ಸರಿ ಅರ್ಧ ಪೇದೆಗಳ ಪಾಲು. ರಮೇಶಬಾಬುಗಳ ಸ್ಥಾನದಲ್ಲಿ ಮೊದಲು ಇದ್ದವರು ಐವತ್ತು ರೂಪಾಯಿ ತಿಂಗಳೊಂದರ ಮಾಡುತ್ತಿದರು. ಇವರು ಮಾತ್ರ ಏನೂ ಕೇಳುವುದಿಲ್ಲ.

ರಮಾನಾಥನು ಅರುಚಿಯನ್ನು ಪ್ರಕಟಿಸುತ್ತಾ ಎಂದನು—ಹೊಲಸು ಕೆಲಸ! ನಾನು ನಿರ್ವಂಚನೆಯಿಂದ ಕೆಲಸ ಮಾಡಬೇಕೆಂದಿರುವೆನು.

ನಗುತ್ತಾ ಮುದಿಸಾಹೇಬರೆಂದರು—ಈಗ ಹೊಲಸೆಂದು ತೋರುತ್ತದೆ. ಮುಂದಕ್ಕೆ ಇದರಲ್ಲಿಯೇ ರುಚಿ ಬರುವುದು.

ಖಾನ್‌ಸಾಹೇಬರನ್ನು ಕಳುಹಿಸಿ ರಮಾನಾಥನು ಒಂದು ಕುರ್ಚಿಯನ್ನು ತರಿಸಿ ಅದರ ಮೇಲೆ ಕುಳಿತನು. ಒಬ್ಬ ಪೇದೆಯನ್ನು ಕರೆದು ಹೇಳಿದನು—ಎಲ್ಲರನ್ನೂ ಜಗುಲಿಯಿಂದ ಕೆಳಕ್ಕಿಳಿವಂತೆ ಹೇಳು. ಒಬ್ಬೊಬ್ಬರಾಗಿ ಕ್ರಮದಂತೆ ನಂಬರು ಪ್ರಕಾರ ಬರಲಿ. ಒಂದು ಕಾಗದದ ಮೇಲೆ ಎಲ್ಲರ ಹೆಸರನ್ನು ಸಾಲಾಗಿ ಬರೆದುಕೊಂಡಿರು.

ಎರಡು ತಾಸುಗಳಿಂದ ಅಲ್ಲಿ ಕಾಯುತ್ತಿದ್ದ ಒಬ್ಬ ವ್ಯಾಪಾರಿ ಎಂದನು—ಹೌದು, ಸ್ವಾಮೀ! ಇದು ಒಳ್ಳೆಯ ಕ್ರಮ.

ರಮಾನಾಥ—ಮೊದಲು ಬಂದವರ ಕೆಲಸ ಮೊದಲು ಆಗಬೇಕು. ಉಳಿದವರು ತಮ್ಮ ನಂಬರು ಬರುವ ವರೆಗೆ ಹೊರಗೆ ನಿಂತಿರಬೇಕು. ಎಲ್ಲರಿಗೂ ಹಿಂದಿನವನು ನುಗ್ಗಿಕೊಂಡು ಮುಂದೆ ಬರುವುದು. ಮೊದಲು ಬಂದವನು, ಮುಖ ಮುಖ ನೋಡುತ್ತಿರುವುದು. ಹೀಗಾಗಕೂಡದು.

ಹಲವು ವ್ಯಾಪಾರಿಗಳು ಒಟ್ಟಿಗೆ ಹೇಳಿದರು—ಹೌದು, ಸ್ವಾಮೀ! ಈ ವ್ಯವಸ್ಥೆಯಾದರೆ ಬಹಳ ಒಳ್ಳೆಯದು. ನುಗ್ಗಾಟದಲ್ಲಿ ಹೊತ್ತು ವ್ಯರ್ಥವಾಗಿ ಕಳೆಯುವುದು.

ತನ್ನ ಅಧಿಕಾರವನ್ನು ಜಮಾಯಿಸಲು ರಮಾನಾಥನಿಗೆ ಇದಕ್ಕಿಂತ ಹೆಚ್ಚಿನ ನಿಯಂತ್ರಣದ ಅವಶ್ಯಕತೆ ಬೀಳಲಿಲ್ಲ. ವಣಿಕಸಮಾಜದಲ್ಲಿ ಅಂದೇ ಅವನ ಹೊಗಳಿಕೆಗೆ ಆರಂಭವಾಯಿತು. ದೊಡ್ಡ ಕಾಲೇಜಿನ ಪ್ರೊಫೆಸರರಿಗೆ ಕೂಡಾ ತಮ್ಮ ಜೀವಮಾನವಿಡೀ ಇಷ್ಟು ಪ್ರಶಂಸೆ ದೊರಕದು.

ನಾಲ್ಕಾರು ದಿನಗಳ ಅನುಭವದಿಂದಲೇ ರಮಾನಾಥನಿಗೆ ಈ ವಹಿವಾಟಿನ ಎಲ್ಲಾ ವರಸೆಗಳೂ ತಿಳಿದು ಹೋದುವು. ಖಾನ್‌ಸಾಹೇಬರಿಗೂ ಕಂಡು ಬರದ ಅನೇಕ ಉಪಾಯಗಳು ಇವನ ಕುಶಲಮತಿಗೆ ಹೊಳೆದುವು. ದಿನಸುಗಳನ್ನು ತೂಕ ಮಾಡುವುದರದಲ್ಲಿ ಹೆಚ್ಚು ಕಡಿಮೆ ಕೂಡಿ ವ್ಯಾಪಾರಿಗಳು ದೋಚುವ ಹಣಕ್ಕೆ ಇತಿಮಿತಿ ಇಲ್ಲವೆಂದಾದ ಬಳಿಕ ತಾನು ಒಂದಾಣೆಯಿಂದಲೇ—ಅದರಲ್ಲಿಯೂ ಅರ್ಧಾಣೆ ಬೇರೆಯವರಿಗೆ ಹೋಗಬೇಕು—ಏಕೆ ತೃಪ್ತಿಪಡಬೇಕು? ರಮೇಶಬಾಬುಗಳಿಗೆ ಈತನ ಕಾರ್ಯಪಟುತೆಯನ್ನು ಕಂಡು ಸಂತಸವಾಯಿತು. ಅವನ ಬೆನ್ನು ತಟ್ಟಿ ಹೇಳಿದರು—ಕಾನೂನಿಗೆ ಒಳಗಾಗಿದ್ದು ಬೇಕಾದುದನ್ನು ಮಾಡು. ನಿನ್ನನ್ನು ಕೇಳುವವರಿಲ್ಲ.

ರಮಾನಾಥನ ಆದಾಯವು ಬೇಗನೆ ಬೆಳೆಯಹತ್ತಿತು. ಅದರೊಡನೆ ಪ್ರಭಾವವೂ ಹೆಚ್ಚಿತು. ಒಣ ಲೇಖಣಿಯನ್ನು ಹಿಡಿದುಕೊಂಡು ಗೀಚುತ್ತಿದ್ದ ಆಫೀಸಿನ ಬಾಬುಗಳಿಗೆ ಸಿಗರೇಟು, ಚಾ, ಎಲೆಯಡಿಕೆಗಳ ಇಚ್ಛೆಯಾದ ಕೂಡಲೇ ರಮಾನಾಥನ ಬಳಿಗೆ ಬರುತ್ತಿದ್ದರು. ಆ ಹರಿಯುವ ನೀರಿನಲ್ಲಿ ಎಲ್ಲರೂ ಕೈ ತೊಳೆದುಕೊಳ್ಳುತ್ತಿದ್ದರು. ಇಡೀ ಆಫೀಸೇ ರಮಾನಾಥನನ್ನು ಹೊಗಳುತ್ತಿತ್ತು. ಪೇದೆಗಳ ಅಧಿಕಾರವೂ ಹೆಚ್ಚಿತು. ಮುಂಚೆ ಗಾಡಿಯವರೂ ಅವರನ್ನು ಬೈಯುತ್ತಿದ್ದರು. ಈಗ ಎಂತೆಂತಹ ದೊಡ್ಡವರನ್ನೆಲ್ಲಾ ಒಂದು ಸಲಕ್ಕೆ ಕುತ್ತಿಗೆಗೆ ಕೈ ಹಾಕಿ ಕೆಳಗೆ ದಬ್ಬುವುದಕ್ಕೆ ಸಾಧ್ಯವಿತ್ತು.

ಆದರೆ ಜಾಲಪಳ ಅಭಿಲಾಷೆಗಳಲ್ಲಿ ಈ ವರೆಗೆ ಒಂದಾದರೂ ಪೂರ್ಣವಾಗಲಿಲ್ಲ. ನಾಗರಪಂಚಮಿಯ ದಿನ ನೆರೆಕೆರೆಯ ಯುವತಿಯರೆಲ್ಲಾ ಆಟವಾಡಲು ಬಂದರು; ಆದರೆ ಜಾಲಪಳು ತನ್ನ ಕೋಣೆಯನ್ನು ಬಿಟ್ಟು ಹೊರ

ಹೊರಡಲಿಲ್ಲ. ಶ್ರೀಕೃಷ್ಣ ಜನ್ಮಾಷ್ಟಮಿಯ ದಿನ ಹತ್ತಿರದ ಸೇಠಜಿಯವರೊಬ್ಬರ ಮನೆಯಿಂದ ಆಮಂತ್ರಣವು ಬಂದಿತ್ತು. ರಾಮೇಶ್ವರಿಯು ಹೋದರೂ ಜಾಲಪಳು ಮನೆಯಲ್ಲೇ ಉಳಿದಳು. ಈ ಮೂರು ತಿಂಗಳುಗಳಲ್ಲಿ ಆಕೆ ಒಮ್ಮೆಯಾದರೂ ರಮಾನಾಥನೊಡನೆ ಆಭೂಷಣಗಳ ಪ್ರಸ್ತಾಪವನ್ನೆತ್ತಲಿಲ್ಲ; ಆದರೆ ಅವನ ಏಕಾಂತ ಪ್ರೇಮವು ಅವಳ ಆಭರಣಕ್ಕಿಂತ ಅಧಿಕ ಉತ್ತೇಜಕವಾಗಿತ್ತು. ಎಲ್ಲಕ್ಕೂ ಹೆಚ್ಚಿನ ಉತ್ತೇಜಕವೆಂದರೆ ರಮಾನಾಥನು ಒಂದು ದಿನ ತಂದುಕೊಟ್ಟ ಹಳೆಯ ಸೂಚೀ ಪತ್ರ. ಅದರಲ್ಲಿ ಆಭರಣಗಳ ಸುಂದರ ಚಿತ್ರಗಳಿದ್ದವು; ಪ್ರತಿಯೊಂದರ ಬೆಲೆಯೆಷ್ಟೆಂದು ಕೆಳಗೆ ಬರೆದಿತ್ತು. ಜಾಲಪಳು ಆ ಸೂಚೀಪತ್ರವನ್ನು ಬಹಳ ಹೊತ್ತಿನ ವರೆಗೆ ಗುಟ್ಟಿನಲ್ಲಿ ನೋಡುತ್ತಿದ್ದಳು.

ರಮಾನಾಥನು ಅರ್ಧರಾತ್ರಿ ಕಳೆದು ಮನೆಗೆ ಮರಳಿ ಬಂದನು. ಜಾಲಪಳನ್ನು ನೋಡಿ ನಕ್ಕು ಹೇಳಿದನು—ಬಹಳ ಒಳ್ಳೆಯ ಸಂಗೀತ ನಡೆಯುತ್ತಿತ್ತು. ನೀನ ಹೋಗಲಿಲ್ಲವೆ? ತಪ್ಪು ಕೆಲಸ ಮಾಡಿದೆ.

ಜಾಲಪಳು ಮೊಗದಿರುಹಿದಳು; ಉತ್ತರ ಕೊಡಲಿಲ್ಲ.

ರಮಾನಾಥನು ಹೇಳಿದನು—ಇಲ್ಲಿ ಒಬ್ಬಳೇ ಇರಲು ನಿನಗೆ ಭಯವಾಗಲಿಲ್ಲವೆ?

ಜಾಲಪಳು ತೀವ್ರ ಸ್ವರದಲ್ಲಿ ಎಂದಳು—ನಾನು ತಪ್ಪು ಮಾಡಿರುವೆನೆಂದು ನೀವು ಹೇಳುತ್ತೀರಿ. ನಾನು ಸರಿಯಾದುದನ್ನೇ ಮಾಡಿದೆನೆಂದು ನಾನು ತಿಳಿಯುತ್ತೇನೆ. ನಾನು ಅಲ್ಲಿಗೆ ಹೋಗಿದ್ದರೆ ಯಾರ ಮುಖಕ್ಕೆ ಮಸಿಯಾಗುತ್ತಿತ್ತು? ಹೇಳಿ.

ರಮಾನಾಥನು ಲಜ್ಜಿತನಾಗಿ ಹೇಳಿದನು—ಅವಮರ್ಯಾದೆ ಏಕಾಗುತ್ತಿತ್ತು? ಆಭರಣಗಳು ಕಳವಾಗಿವೆಯೆಂದು ಎಲ್ಲರಿಗೂ ತಿಳಿದೇ ಇದೆ. ಈ ಕಾಲದಲ್ಲಿ ನಾಲ್ಕು ಸಾವಿರ ರೂಪಾಯಿಗಳ ಆಭರಣ ಮಾಡಿಸುವುದು ಸುಲಭದ ತುತ್ತಲ್ಲವೆಂಬುದನ್ನೂ ಅರಿಯದವರಿಲ್ಲ.

ಕಳವಿನ ಸುದ್ದಿಯನ್ನು ನಾಲಿಗೆಯಿಂದ ಹೇಳುವಾಗ ರಮಾನಾಥನ ಎದೆಯು ಗಡಗುಟ್ಟಿತು. ಜಾಲಪಳು ಗಂಡನ ಕಡೆಗೆ ತೀವ್ರ ದೃಷ್ಟಿಯಿಂದ ನೋಡತೊಡಗಿದಳು. ರಮಾನಾಥನಿಗೆ ಅವಳ ಆ ನೋಟವನ್ನು ಕಂಡು ಎಲ್ಲಿ ಈಕೆಗೆ ಕಳವಿನ ರಹಸ್ಯವು ತಿಳಿದು ಹೋಗಿದೆಯೋ ಎಂಬ ಭಯ

ಉಂಟಾಯಿತು. ಅವಳೇಕೆ ತನ್ನನ್ನು ಆ ದೃಷ್ಟಿಯಿಂದ ನೋಡುತ್ತಿರುವಳು ? ಆ ದೃಷ್ಟಿಯಲ್ಲಿ ಸಿಟ್ಟಿನ ಹೊರತು ಬೇರೆ ಭಾವವಿಲ್ಲವೇನೋ. ಹೌದು. ಆದರೆ ಈ ಮೌನವೇಕೆ? ತನ್ನ ಮನಸ್ಸಿನ ಸಂಶಯವನ್ನು ತೀರಿಸಿಕೊಳ್ಳುವು ದಕ್ಕೂ, ಜಾಲಪಳ ಮನದ ಆಳವನ್ನರಿಯುವುದಕ್ಕೂ ರಮಾನಾಥನು ಒಂದು ತೋರಿಕೆಯ ಮಾತನ್ನೊಗೆದನು—ಪಲ್ಲಕ್ಕಿಯಿಂದ ಇಳಿದ ಕೂಡಲೇ ಈ ವಿಪತ್ತು ನಮ್ಮನ್ನು ಎದುರ್ಗೊಳ್ಳುವುದೆಂದು ಯಾರು ಅರಿತಿದ್ದರು ?

ಜಾಲಪಳು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಹೇಳಿದಳು—ಆದರೆ ನಾನು ಒಡವೆಗಳಿಗಾಗಿ ನಿಮ್ಮನ್ನು ಕಾಡಲಿಲ್ಲವಷ್ಟೆ? ಹಣೆಯಲ್ಲಿ ಬರೆದುದು ಏನಿತ್ತೋ ಅದಾಯಿತು. ಮುಂದೆಯೂ ಹಾಗೆಯೇ ಆಗುವುದು. ಒಡವೆಗಳನ್ನು ತೊಡದ ಹೆಂಗಸರ ದಿನಗಳೂ ಕಳೆಯುತ್ತವಷ್ಟೆ ?

ಈ ವಾಕ್ಯದಿಂದ ರಮಾನಾಥನ ಸಂಶಯವು ಕಳೆಯಿತು. ಆದರೆ ಅದರಲ್ಲಿ ಅಡಗಿದ್ದ ತೀವ್ರ ವೇದನೆಯ ಅರಿವೂ ಆಯಿತು. ಈ ಮೂರು ತಿಂಗಳು ಪ್ರಯತ್ನ ಪಡುತ್ತಿದ್ದರೂ ಅವನಿಂದ ಸಂಗ್ರಹಿಸಲಾದುದು ಒಂದು ನೂರು ರೂಪಾಯಿಗಳು ಮಾತ್ರ. ಸಿಕ್ಕಿದುದರಲ್ಲಿ ಹೆಚ್ಚಿನ ಅಂಶ ಬಾಬುಗಳ ಆದರ ಸತ್ಕಾರಕ್ಕೆ ಹೋಗುತ್ತಿತ್ತು. ಆದರೆ ಅದಿಲ್ಲದೆ ಕೆಲಸ ನಡೆದೀತೆ ? ಅವನು ತಾನಾಗಿ ಯಾವುದಕ್ಕೂ ವ್ಯರ್ಥವಾಗಿ ಖರ್ಚು ಮಾಡುತ್ತಿರಲಿಲ್ಲ. ಆಶ್ವಾಸನೆಯನ್ನು ಕೊಡುತ್ತಾ ಹೇಳಿದನು—ದೇವರ ಚಿತ್ತಕ್ಕೆ ಬಂದರೆ ಒಂದೆ ರಡು ತಿಂಗಳುಗಳಲ್ಲಿ ಏನಾದರೊಂದು ಆಭರಣವು ಬಾರದೆ ಹೋಗದು. ನೋಡುವ.

ಜಾಲಪ—ಆಭರಣವೆಂದರೆ ಬಾಯಿಬಿಡುವ ಹೆಂಗಸರಲ್ಲಿ ನಾನೂ ಒಬ್ಬಳೆಂದು ತಿಳಿಯಬೇಡಿ. ಆದರೆ ಈ ವೇಷದಲ್ಲಿ ಒಬ್ಬರ ಮನೆಗೆ ಹೋಗಿ ಬರುವುದಕ್ಕೆ ನಾಚುಗೆಯಾಗುತ್ತದೆ. ಬೇರೇನು ಹೇಳಲಿ ?

ರಮಾನಾಥನ ಚಿತ್ತವು ಗ್ಲಾನಿಯಿಂದ ವ್ಯಾಕುಲವಾಯಿತು. ಜಾಲಪಳ ಮಾತಿನ ಒಂದೊಂದು ಶಬ್ದದಲ್ಲಿಯೂ ಆಕೆಯ ತೀವ್ರವೇದನೆಯು ತುಂಬಿ ತುಳುಕುತ್ತಿತ್ತು. ಆಕೆಯ ಈ ದುಸ್ಥಿತಿಗೆ ಕಾರಣನಾರು ? ತಾನೇ ಅಲ್ಲವೆ? ಆಸುಪಾಸಿನಲ್ಲಿ ಏನೆಲ್ಲ ವಿಶೇಷಗಳು ನಡೆಯುವುದಿಲ್ಲ ? ಆಗಾಗ ಏನಾದರೂ ಇದ್ದೇ ಇರುತ್ತದೆ. ಬೇರೆ ಸ್ತ್ರೀಯರೆಲ್ಲಾ ಆನಂದಪಡುತ್ತಿರುವ ವೇಳೆಯಲ್ಲಿ ಈಕೆ ಈ ತೆರನಾಗಿ ಆತ್ಮವನ್ನೊತ್ತಿ ಹಿಡಿದು ಒಳಗಿಂದೊಳಗೆ ಬೇಯುತ್ತಿರ

ಬೇಕೆ? ನಗು ಹರಟೆಗಳು ಯಾರಿಗೆ ಬೇಡ? ತನ್ನ ಕಾರಣವಾಗಿಯೇ ಅಲ್ಲವೆ ಈಕೆಗೆ ಈ ಬಗೆಯ ಭೀಷಣಯಾತನೆಯನ್ನು ಅನುಭವಿಸಬೇಕಾಗಿರುವುದು?

ಯಾರಾದರೊಬ್ಬ ಸರಾಫನಿಂದ ಒಡವೆಗಳನ್ನು ಕಡ ತಕ್ಕೊಳ್ಳುವುದೆಂದು ಒಮ್ಮೆ ಯೋಚಿಸಿದನು. ಆದರೆ ತಾನು ಕೇಳಿದಾಗ ಅವರು ಕೊಡಲೊಪ್ಪದಿದ್ದರೆ? ಏನಾದರೂ ನೆವ ಹೇಳಿ ತಪ್ಪಿಸಲು ನೋಡಿದರೆ? ವಾಯಿದೆಗೆ ಸರಿಯಾಗಿ ಹಣ ಸಲ್ಲಿಸಲಾಗದಿದ್ದರೆ? ಇಲ್ಲ. ಹಾಗೆ ಮಾಡಿದರೆ ಸುಮ್ಮನೆ ಪೇಚಿನಲ್ಲಿ ಸಿಲುಕಿದಂತಾಗುವುದು.

ಫಕ್ಕನೆ ಆತನಿಗೆ ಜಾಲಪಳ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕೆಂದು ತೋರಿತು. ಹೇಳಿದನು—ನಿನ್ನೊಡನೆ ಒಂದು ಮಾತನ್ನು ಕೇಳಬೇಕೆಂದಿದ್ದೇನೆ. ಕೇಳಲೆಬೇಡವೆ?

ಜಾಲಪಳಿಗೆ ನಿದ್ದೆ ಬರುತಿತ್ತು. ಕಣ್ಣು ಮುಚ್ಚಿಕೊಂಡೆ ಹೇಳಿದಳು—ನಿದ್ದೆಮಾಡಲು ಬಿಡಿರಿನ್ನು. ಬೆಳಗ್ಗೆ ಬೇಗ ಏಳಬೇಕು.

ರಮಾನಾಥ—ನಿನಗೆ ಸಮ್ಮತಿಯಿದ್ದರೆ ಯಾರಾದರೂ ಸರಾಫನಿಂದ ವಾಯಿದೆಯ ಮೇಲೆ ಒಡವೆಗಳನ್ನು ಮಾಡಿಸಿ ತರುವೆನು. ಇದಕ್ಕೇನಾದರೂ ಅಡ್ಡಿಯಿದೆಯೆ?

ಜಾಲಪಳ ಕಣ್ಣುಗಳು ತೆರೆದುವು. ಎಂತಹ ಕಠೋರ ಪ್ರಶ್ನೆಯದು! ಒಬ್ಬ ಅಭ್ಯಾಗತನೊಡನೆ ನಿಮಗೆ ಊಟಕ್ಕೆ ಹೇಳಲೆ, ಎಂದು ಕೇಳುವುದು ಎಂತಹ ಅಶಿಷ್ಟತೆ? ಬಂದವನಿಗೆ ಊಟ ಹಾಕಲು ಮನಸ್ಸಿಲ್ಲವೆಂದಷ್ಟೆ ಇದರ ಅರ್ಥ? ರಮಾನಾಥನು ಜಾಲಪಳ ಮುಂದೆ ಆಭರಣಗಳನ್ನು ತಂದಿಡಬೇಕಿತ್ತು. ಆಕೆ ಎಷ್ಟು ಸಲ ಕೇಳಿದರೂ ಹಣಕೊಟ್ಟೇ ತಂದಿರುವೆನೆಂದು ಹೇಳಬೇಕಿತ್ತು. ಆಗ ಆಕೆಗೆ ಸಂತೋಷವಾಗುತ್ತಿತ್ತು. ಅದನ್ನೆಲ್ಲಾ ಬಿಟ್ಟು ಈಗ ಆ ವಿಷಯದಲ್ಲಿ ಆಕೆಯ ಸಮ್ಮತಿಯನ್ನು ಕೇಳುವುದೆಂದರೆ ಹಸಿಗಾಯಕ್ಕೆ ಉಪ್ಪು ನೀರೆರೆವಂತಲ್ಲದೆ ಬೇರೇನು!

ಅವಳು ರಮಾನಾಥನನ್ನು ಅವಿಶ್ವಾಸದ ಕಣ್ಣುಗಳಿಂದ ನೋಡಿ ಹೇಳಿದಳು—ಆಭರಣಗಳ ವಿಷಯದಲ್ಲಿ ನಾನು ಅಷ್ಟೇನೂ ಉತ್ಸುಕಳಾಗಿಲ್ಲ!

ರಮಾನಾಥ—ಛೇ, ಛೇ, ಹಾಗಲ್ಲ. ಸರಾಫನಿಂದ ಆಭರಣಗಳನ್ನು ಮಾಡಿಸುವುದಕ್ಕೆ ತೊಂದರೆ ಏನು? ಮೆಲ್ಲ ಮೆಲ್ಲಗೆ ಅವನ ಹಣವನ್ನು ಕೊಟ್ಟು ತೀರಿಸಬಹುದು.

ಜಾಲಪಳು ದೃಢತೆಯಿಂದ ಹೇಳಿದಳು—ಬೇಡ, ಬೇಡ, ನನಗಾಗಿ ಸಾಲಮಾಡುವುದು ಬೇಡ. ನಿಮ್ಮನ್ನು ಕಿತ್ತು ಸುಲಿದು ನನ್ನ ಹಾದಿಯನ್ನು ಕಂಡುಕೊಳ್ಳಲು ನಾನೇನೂ ಸೂಳೆಯಲ್ಲ. ನನ್ನ ಸಾವು ಬಾಳ್ವೆಗಳೆಲ್ಲಾ ನಿಮ್ಮದರೊಡನೆ ಹಾಸು ಹೊಕ್ಕಾಗಿರಬೇಕಾಗಿದೆ. ಆಯುಷ್ಯವಿಡೀ ಆಭರಣವಿಲ್ಲದೆ ಇರಬೇಕಾಗಿ ಬಂದರೂ, ನಾನು ನಿಮ್ಮನ್ನು ಸಾಲಮಾಡಿರೆಂದು ಹೇಳಲಾರೆನು. ಮನೆಮಂದಿಯನ್ನು ಸಂಕಟದಲ್ಲಿ ಹಾಕಿ ಒಡವೆ ತೊಡುವವರು ಬೇರೆ ಇದ್ದಾರು. ಆದರೆ ನೀವು ಮೊದಲು ಹೇಳಿದಿರಲ್ಲವೆ, ನಿಮ್ಮ ಹುದ್ದೆ ಆದಾಯದ್ದೆಂದು ನನಗೇನೂ ಇದರಲ್ಲಿ ವಿಶೇಷ ಆದಾಯ ಕಂಡುಬರುವುದಿಲ್ಲ.

ರಮಾನಾಥ:—ಆದಾಯ ಚೆನ್ನಾಗಿರುತ್ತಿತ್ತು. ಆದರೆ ಈ ಕರ್ಮಚಾರಿಗಳ ಕಾಟ ಅಷ್ಟಿಷ್ಟಲ್ಲ. ಇಷ್ಟು ಪ್ರೇತಗಳಿಗೆ ನಡಕೊಳ್ಳಬೇಕಾಗಿ ಬರಬಹುದೆಂದು ನಾನು ಎಣಿಸಿರಲಿಲ್ಲ.

ಜಾಲಪ—ಹಾಗಾದರೆ ಒಡವೆಗಳ ಅವಸರವೂ ಅಷ್ಟರಲ್ಲೆ ಇದೆ. ನಿಧಾನವಾಗಿ ಮಾಡಿಸಿದರೆ ಸಾಕು.

ರಮಾನಾಥ—ಸರಿ, ನಿನ್ನ ಸಮ್ಮತಿ ಇದ್ದರೆ ಇನ್ನೊಂದೆರಡು ತಿಂಗಳು ಹೀಗೆಯೇ ದೂಡುವೆನು. ಎಲ್ಲಕ್ಕೂ ಮೊದಲು ಬಳೆಗಳನ್ನು ಮಾಡಿಸುವೆನು.

ಜಾಲಪಳು ಗದ್ಗದಳಾಗಿ ಹೇಳಿದಳು—ನಿಮ್ಮ ಹತ್ತಿರ ಈಗಲೇ ಇಷ್ಟು ರೂಪಾಯಿಗಳು ಎಲ್ಲಿಂದ ಬರಬೇಕು ?

ರಮಾನಾಥ—ಅದರ ಚಿಂತೆ ನನಗೆ ! ಎಂತಹ ಬಳೆಗಳು ಬೇಕು ? ಹೇಳು.

ಜಾಲಪಳಿಗೆ ಈಗ ತನ್ನ ಕೃತ್ರಿಮ ಸಂಯಮವನ್ನು ನಿರ್ವಹಿಸಲಿಕ್ಕಾಗಲಿಲ್ಲ. ಕಪಾಟನಿಂದ ಸೂಚೀಪತ್ರವನ್ನು ತೆಗೆದು ರಮಾನಾಥನಿಗೆ ತೋರಿಸಹತ್ತಿದಳು. ಆಗ ಅವಳ ತತ್ಪರತೆಯನ್ನು ಕಂಡವರಿಗೆ ಚಿನ್ನವನ್ನು ಹಿಡಿದುಕೊಂಡು ಸೊನ್ನೆಗಾರನು ಕುಳಿತಿರುವನೆಂದೂ, ಬರೆ 'ಡಿಜಾಯಿನ್' ಯಾವುದೆಂದು ಹೇಳುವದು ಮಾತ್ರ ಉಳಿದಿದೆಯೆಂದೂ ತೋರುವಂತಿತ್ತು. ಅವಳು ಆ ಸೂಚಿಯ ಎರಡು 'ಡಿಜಾಯಿನು'ಗಳನ್ನು ಮೆಚ್ಚಿದಳು. ನಿಜವಾಗಿಯೂ ಅವೆರಡು ಸುಂದರವಾಗಿಯೇ ಇದ್ದುವು. ಆದರೆ ರಮಾನಾಥನು

ಅವುಗಳ ಮೂಲ್ಯವನ್ನು ಕಂಡು ದಂಗುಬಡೆದು ಹೋದನು. ಒಂದಕ್ಕೆ ಸಾವಿರ, ಇನ್ನೊಂದಕ್ಕೆ ಎಂಟುನೂರು.

## ೧೨

ಮರುದಿನ ಬೆಳಗಾಗುತ್ತಲೇ ರಮಾನಾಥನು ರಮೇಶಬಾಬುಗಳ ಮನೆಯ ಹಾದಿ ಹಿಡಿದನು. ಅವರಲ್ಲಿಯೂ ಜನ್ಮಾಷ್ಟಮಿಯ ಸಮಾರಂಭವು ಬಹಳ ವೈಭವದಿಂದ ನಡೆಯುತ್ತಿತ್ತು. ಅವರಿಗೆ ಸ್ವತಃ ಇದರಲ್ಲಿ ವಿಶೇಷ ಅನುರಾಗವಿದ್ದಿರಲಿಲ್ಲವಾದರೂ, ತಮ್ಮ ಹೆಂಡತಿಯು ಆಚರಿಸುತಿದ್ದುದರ ಸವಿನೆನಪಿಗಾಗಿ ಇಂದಿನವರೆಗೆ ಆ ಉತ್ಸವವನ್ನಾಚರಿಸಿಕೊಂಡು ಬರುತ್ತಿದ್ದರು. ರಮಾನಾಥನನ್ನು ಕಂಡು ಹೇಳಿದರು—ಬನ್ನಿ, ಸ್ವಾಮೀ, ರಾತ್ರಿಯೇಕೆ ಬರಲಿಲ್ಲ ? ಬಡವರ ಮನೆಗೆ ನೀವು ಯಾಕೆ ಬರುತ್ತೀರಿ ? ಏಕೆ ? ಸೇಠಜಿಯವರ ಉತ್ಸವದ ಮೋಹ ತೊಲಗೀತೆ ? ತುಂಬಾ ಮನೋಹರವಾಗಿದ್ದಿರಬಹುದು.

ರಮಾನಾಥ—ನಿಮ್ಮಲ್ಲಿಯಹಾಗೆ ಶೃಂಗಾರವೇನೂ ಇದ್ದಿಲ್ಲ. ಆದರೂ, ಹಿಂದಿನ ವರುಷಗಳಿಗಿಂತ ಚೆಲೋದಿತ್ತು. ಎಷ್ಟೋ ನರ್ತಕಿಯರೂ, ವೇಶ್ಯೆಯರೂ ಬಂದಿದ್ದರೂ ನಾನು ನಡುವಿನಲ್ಲೆ ಎದ್ದು ಬಂದೆನು; ಆದರೆ ಇರುಳೆಲ್ಲಾ ಗಾಯನವು ನಡೆಯುತ್ತಿತ್ತೆಂದು ಕೇಳಿದೆ.

ರಮೇಶ—ಆಂ ! ವೇಶ್ಯೆಯರನ್ನು ಕರೆಯಿಸುವುದಿಲ್ಲವೆಂದು ಸೇಠಜಿಯವರು ಮಾತು ಕೊಟ್ಟಿದ್ದರು; ಈಗ ಇದೇನು ಮಾಡಿಬಿಟ್ಟರು ? ಈ ಮೂರ್ಖರ ದೆಸೆಯಿಂದ ಹಿಂದೂಧರ್ಮವು ಉಳಿಯುವಹಾಗಿಲ್ಲ. ವೇಶ್ಯೆಯರ ಹೆಸರೇ ಸಾಕು, ಎಲ್ಲವನ್ನೂ ಕೆಡಿಸಲಿಕ್ಕೆ, ಆದರ ಮೇಲೆ ದೇವಾಲಯದಲ್ಲಿ. ಛೀ, ಛೀ ! ಈ ಕತ್ತೆಗಳಿಗೆ ಬುದ್ಧಿ ಬರುವುದು ಯಾವಾಗಲೋ ನಾನರಿಯೆ.

ರಮಾ— ವೇಶ್ಯೆಯರಿಲ್ಲದಿದ್ದರೆ ಉತ್ಸವವನ್ನು ಕಾಣಲು ಯಾರು ಹೋಗುವರು ? ಎಲ್ಲರೂ ನಿಮ್ಮಹಾಗೆ ಯೋಗಿಗಳೂ, ತಪಸ್ವಿಗಳೂ ಆಗಿರುವದಿಲ್ಲ !

ರಮೇಶ—ನಾನಾದರೆ, ಕಾನೂನುಮಾಡಿ ಈ ದುರಾಚಾರವನ್ನು ಕೊನೆಗಾಣಿಸುತ್ತಿದ್ದೆ. ಅದಿರಲಿ, ಬಿಡು. ಅವಕಾಶವಿದ್ದರೆ ಒಂದೆರಡು ಆಟಗಳನ್ನು ಆಡೋಣ, ಬಾ.

ರಮಾ – ಮತ್ತೆ ನಾನು ಬಂದಿರುವುದಾದರೂ ಏಕೆ ? ಆದರೆ ಇವತ್ತು ನೀವು ನನ್ನೊಡನೆ ಸರಾಫಕಟ್ಟೆಯತನಕ ಸ್ವಲ್ಪ ಬರಬೇಕು. ದೊಡ್ಡ ದೊಡ್ಡ ಎಷ್ಟೋ ಅಂಗಡಿಗಳನ್ನು ಬಲ್ಲೆನು; ಆದರೆ ನೀವಿದ್ದರೆ ಸಂಗತಿಯೇ ಬೇರೆ.

ರಮೇಶ—ಬರುವುದಕ್ಕೇನು, ಬರುತ್ತೇನೆ. ಆದರೆ ಈ ವಿಷಯದಲ್ಲಿ ನನಗೇನೂ ತಿಳಿಯದು. ಒಡವೆಯನ್ನು ಮಾಡಿಸಿದವನೂ ಅಲ್ಲ. ಕೊಂಡವನೂ ಅಲ್ಲ. ಯಾಕೆ, ನಿನಗೇನಾದರೂ ಆಭರಣಗಳನ್ನು ಮಾಡಿಸುವುದಿದೆಯೆ ?

ರಮಾ—ಮಾಡಿಸುವುದೆಲ್ಲಿಂದ ಬಂತು ? ಬರೆ ಬೆಲೆ ಎಷ್ಟೆಷ್ಟೆಂದು ನೋಡಬೇಕಾಗಿದೆ. ಅಷ್ಟೆ.

ರಮೇಶ—ಮನೆಯಲ್ಲಿ ಗದರಿಸಿದರೆಂದು ತೋರುತ್ತದೆ.

ರಮಾ—ಇಲ್ಲಪ್ಪಾ, ಇಲ್ಲ ಅವಳು ಆಭರಣಗಳ ಹೆಸರನ್ನೇ ಎತ್ತುವದಿಲ್ಲ. ನಾನು ಕೇಳಿದರೆ ಬೇಡವೆನ್ನುತ್ತಾಳೆ. ಆದರೆ ನಮ್ಮ ಕರ್ತವ್ಯವೊಂದಿದೆಯಲ್ಲವೆ ? ಆಭರಣಗಳು ಕಳವಾದಂದಿನಿಂದ ಒಂದು ಒಡವೆಯನ್ನೂ ಮಾಡಿಸಲಾಗಲಿಲ್ಲ.

ರಮೇಶ—ಈ ಹುಚ್ಚಿಗೆ ಸಿಕ್ಕಬೇಡ. ಹಣ ಕೈಯಲ್ಲಿ ಇಲ್ಲದಿರುವತನಕ ಬಾಜಾರದ ಕಡೆಗೆ ಹೋಗಲೇ ಬೇಡ, ಮುದಿಗಂಡಂದಿರು ಆಭರಣಗಳಿಂದ ತಮ್ಮ ಹೊಸ ಹೆಂಡತಿಯರನ್ನು ತೃಪ್ತಿಪಡಿಸುತ್ತಾರೆ. ಪಾಪ, ಅವರ ಹತ್ತಿರ ಇದರ ಹೊರತು ಬೇರೆ ದಾರಿಯೇನಿದೆ ? ಯುವಕರಿಗೆ ಬೇರೆ ಎಷ್ಟೋ ಒಳ್ಳೊಳ್ಳೆಯ ಮಾರ್ಗಗಳಿವೆ. ನನಗೆ ಬೇಕೆಂದು ಕಂಡರೆ ನಾಲ್ಕು ಸಾವಿರ ರೂಪಾಯಿಗಳ ಒಡವೆಗಳನ್ನು ಹೀಗೆಯೆ ಕೊಡಿಸಬಲ್ಲೆನು. ಆದರೆ ಸಾಲದ ಅಭ್ಯಾಸವು ಒಳ್ಳೆಯದಲ್ಲವಪ್ಪಾ.

ರಮಾ :—ಎರಡು ಮೂರು ತಿಂಗಳುಗಳಲ್ಲಿ ಎಲ್ಲ ಹಣವನ್ನೂ ತೀರಿಸಿಬಿಡುವೆನು. ಆ ಧೈರ್ಯವಿಲ್ಲದಿರುತ್ತಿದ್ದರೆ, ಈ ಪ್ರಸ್ತಾಪವನ್ನೇ ಎತ್ತುತ್ತಿರಲಿಲ್ಲ.

ರಮೇಶ :– ಹಾಗಾದರೆ ಇನ್ನೆರಡು ತಿಂಗಳು ತಡೆದುಕೊಳ್ಳಬಾರದೇಕೆ ? ಸಾಲಕ್ಕಿಂತ ದೊಡ್ಡ ಪಾಪ ಬೇರೊಂದಿಲ್ಲ. ಅದಕ್ಕೆ ಹೆಚ್ಚಿನ ವಿಪತ್ತೂ ಬೇರೊಂದಿಲ್ಲ. ಒಂದು ಸಲ ಸಂಶಯ ಬಿತ್ತೆಂದರೆ ಸರಿ. ಮತ್ತೆ ಯಾವಾಗಲೂ ನಿನ್ನನ್ನು ಸರಾಫರ ಅಂಗಡಿಯಮುಂದೆಯೇ ಕಾಣಬೇಕಾದೀತು.

ಕೋಪಿಸಿಕೊಳ್ಳಬೇಡ, ನಿನ್ನ ಆದಾಯವು ಚೆನ್ನಾಗಿದೆಯೆಂದು ನನಗೆ ಗೊತ್ತಿದೆ. ಆದರೆ ಭವಿಷ್ಯವನ್ನು ನಂಬಿಕೊಂಡು ಬೇರೆ ಯಾವ ಕೆಲಸ ಬೇಕಾದರೂ ಕೈಕೊಳ್ಳು, ಸಾಲಕ್ಕೆ ಮಾತ್ರ ಕೈಯಿಕ್ಕಬೇಡ. ಈ ದರಿದ್ರ ದೇಶದಲ್ಲಿ ಆಭರಣಗಳ ರೋಗ ಹೇಗೆ ಹಬ್ಬಿಬಿಟ್ಟಿತೋ ನಾನರಿಯೆ. ಊಟಕ್ಕೆ ಗತಿಯಿಲ್ಲದಿದ್ದವರೂ ಕೂಡಾ ಆಭರಣಗಳಿಗಾಗಿ ಪ್ರಾಣಬಿಡಲು ಸಿದ್ಧರು. ಪ್ರತಿವರ್ಷವೂ ಕೋಟ್ಯಂತರ ರೂಪಾಯಿಗಳು ಈ ಆಭರಣಗಳ ಚಿನ್ನ ಬೆಳ್ಳಿಗಳನ್ನು ಕೊಳ್ಳುವುದರಲ್ಲಿ ಖರ್ಚಾಗುತ್ತಿದೆ. ಜಗತ್ತಿನ ಬೇರಾವ ದೇಶದಲ್ಲಿಯೂ ಈ ಲೋಹಗಳು ಇಷ್ಟು ಖರ್ಚಾಗುವುದಿಲ್ಲ. ಇದರ ಗುಟ್ಟು ಇಷ್ಟೆ. ಉಚ್ಚಶ್ರೇಣಿಯ ದೇಶಗಳಲ್ಲಿ ಹಣವು ಜನರ ಪಾಲನೆ ಪೋಷಣೆಗಳಿಗೆ ಅಗತ್ಯವಾದ ವ್ಯಾಪಾರದಲ್ಲಿರುತ್ತದೆ. ಇದರಿಂದ ಹಣವು ವೃದ್ಧಿಯಾಗುತ್ತದೆ. ನಮ್ಮಲ್ಲಿ ಧನವು ಶೃಂಗಾರಕ್ಕೋಸ್ಕರ ವ್ಯಯವಾಗುವುದರಿಂದ ಉನ್ನತಿ ಮತ್ತು ಉಪಕಾರವನ್ನೆಸಗುವ ಅದರ ಅಪಾರ ಶಕ್ತಿಗೆ ಒಮ್ಮೆಗೆ ಕೊಡಲಿಹಾಕಿದಂತಾಗುವುದು. ಯಾವ ದೇಶದಲ್ಲಿ ಮೂರ್ಖರ ಸಂಖ್ಯೆಯು ಹೆಚ್ಚಾಗಿರುವುದೋ, ಅಲ್ಲೆ ಆಭರಣಗಳ ಪ್ರಚಾರವೂ ಹೆಚ್ಚೆಂದು ತಿಳಿ. ಇಲ್ಲಿ ಕಿವಿ, ಮೂಗುಗಳನ್ನಷ್ಟೆ ಭೇದಿಸುತ್ತಾರೆ. ಕೆಲವು ದೇಶಗಳಲ್ಲಿ ತುಟಿಯನ್ನು ತೂತು ಮಾಡಿ ಆಭರಣವನ್ನು ತೊಡುವುದೂ ಇದೆಯಂತೆ.

ರಮಾನಾಥನು ಕುತೂಹಲದಿಂದ ಕೇಳಿದನು—ಅದು ಯಾವ ದೇಶ?

ರಮೇಶಃ—ಈಗ ಸರಿಯಾಗಿ ನೆನಪಿಲ್ಲ. ಪ್ರಾಯಶಃ ಆಫ್ರಿಕವಿರಬೇಕು. ನಮಗಿದನ್ನು ಕೇಳಿ ಆಶ್ಚರ್ಯವಾಗುತ್ತದೆ. ಆದರೆ ಅನ್ಯದೇಶಗಳವರಿಗೆ ಕಿವಿ, ಮೂಗುಗಳನ್ನು ತೂತು ಮಾಡಿಕೊಳ್ಳುವುದೂ ಕಡಮೆ ಆಶ್ಚರ್ಯದ ಸಂಗತಿಯಲ್ಲ. ಇದೊಂದು ಕೆಟ್ಟ ರೋಗ, ಬಲು ಕೆಟ್ಟ ರೋಗ! ಊಟದಲ್ಲಿ ಖರ್ಚಾಗಬೇಕಾಗಿದ್ದ ಹಣವು, ಮಕ್ಕಳು ಮರಿಗಳ ಹೊಟ್ಟೆಯನ್ನು ಕಟ್ಟಿ, ಒಡವೆಗಳಿಗೆ ಸಮರ್ಪಣೆಯಾಗುತ್ತಿದೆ. ಮಕ್ಕಳಿಗೆ ಕುಡಿಯಲು ಹಾಲಿಲ್ಲವಾದರೆ ಚಿಂತಿಲ್ಲ. ತುಪ್ಪದ ಗಂಧವೇನೆಂದು ಅವರ ಮೂಗಿಗೆ ಗೊತ್ತಿಲ್ಲವಾದರೂ ಚಿಂತಿಲ್ಲ. ಹಣ್ಣು ಹಂಪಲುಗಳನ್ನು ಅವರು ಕಣ್ಣಿಂದ ನೋಡಿಲ್ಲ. ಅಡ್ಡಿಯೇನು? ಆದರೆ ಪತ್ನೀದೇವಿಯವರು ಆಭರಣಗಳನ್ನು ತೊಟ್ಟೇ ತೊಡುವರು, ಪತಿರಾಯರು ಮಾಡಿಸಿಯೇ ತೀರುವರು. ಹತ್ತಿಪ್ಪತ್ತು ರೂಪಾಯಿಗಳ ವೇತನವನ್ನು ಪಡೆವ ಕ್ಲಾರ್ಕುಗಳಿದ್ದಾರೆ. ಬೆಳಗ್ಗೆ ಕಾಫಿಗೂ ಗತಿ

ಯಿಲ್ಲ. ಅಂತಹರಿಗೂ ಈ ಒಡವೆಯ ಹುಚ್ಚು ತಪ್ಪಿದ್ದಲ್ಲ. ಈ ಪದ್ಧತಿಯು ನಮ್ಮ ಸರ್ವನಾಶವನ್ನು ಮಾಡುತ್ತಿದೆ. ಈ ಗುಲಾಮಗಿರಿಯು ಪರಾಧೀನತೆ ಗಿಂತಲೂ ಹೆಚ್ಚಿನದೆಂದು ನಾನೆಣಿಸುತ್ತೇನೆ. ಇದರ ದೆಸೆಯಿಂದಾಗುವ ನಮ್ಮ ಆತ್ಮಿಕ, ನೈತಿಕ, ದೈಹಿಕ, ಆರ್ಥಿಕ ಮತ್ತು ಧಾರ್ಮಿಕ ಅವನತಿಯೆಷ್ಟೆಂಬು ದನ್ನು ಅಂದಾಜು ಮಾಡಲು ಬ್ರಹ್ಮನಿಗೂ ಸಾಧ್ಯವಿಲ್ಲ.

ರಮಾ:—ಸ್ತ್ರೀಯರು ಆಭರಣಗಳನ್ನು ತೊಡದಿರುವ ದೇಶವೂ ಯಾವುದೂ ಇಲ್ಲವೆಂದು ನಾನೆಣಿಸುತ್ತೆನೆ ಯುರೋಪಿನಲ್ಲಿ ಈ ಕ್ರಮ ಪ್ರಚಾರದಲ್ಲಿಲ್ಲವೇನು ?

ರಮೇಶಃ—ಹಾಗೋ ? ಹಾಗಾದರೆ, ನಿನ್ನ ದೇಶ ಯುರೋಪಲ್ಲ ವೆಂದು ತಿಳಿ. ಅಲ್ಲಿಯ ಜನರು ಶ್ರೀಮಂತರು. ಅವರು ಬೇಕಾದರೆ ಹಣವನ್ನು ನೀರಿಗೆ ಚೆಲ್ಲಲಿ. ಅದು ಅವರಿಗೇ ಚಂದ. ನಾವು ದರಿದ್ರರು; ನಮ್ಮ ದುಡಿ ಮೆಯ ಬಿಂದು ಕಾಸಾದರೂ ವ್ಯರ್ಥವಾಗಿ ವ್ಯಯವಾಗಬಾರದು.

ಈ ವಿವಾದದ ನಡುವೆ ರಮೇಶಬಾಬುಗಳಿಗೆ ಚದುರಂಗದ ವಿಷಯವು ಮರೆತೇ ಹೋಯಿತು. ರಜಾದಿನವಾದುದರಿಂದ ಬೇರೆ ಕೆಲವರು ಬಂದರು. ರಮಾನಾಥನು ಅವರ ನಡುವೆ ಜಾರಿಕೊಂಡು ಬಿಟ್ಟನು. ರಮೇಶಬಾಬುಗಳ ತರ್ಕವು ಅವನ ವಿಚಾರಧಾರೆಗೆ ಕಲ್ಲು ಹಾಕಿತ್ತು. ಸರಾಫಕಟ್ಟೆಯವರೆಗೆ ಹೋದರೂ ಒಳಗೆ ಕಾಲಿಡುವ ಧೈರ್ಯಬರಲಿಲ್ಲ. ಮೂರು ನಾಲ್ಕು ತಿಂಗಳು ಗಳವರೆಗೆ ಆಭರಣಗಳ ಹೆಸರನ್ನು ಎತ್ತುವುದಿಲ್ಲವೆಂದು ನಿರ್ಧರಿಸಿದನು.

ಅವನು ಮನೆಯನ್ನು ಸೇರಿದಾಗ ಒಂಬತ್ತು ಘಂಟೆಯಾಗಿತ್ತು. ದಯಾನಾಥರು ಅವನನ್ನು ಕಂಡು ಕೇಳಿದರು—ಇಷ್ಟು ಬೆಳಗ್ಗೆ ಎಲ್ಲಿಗೆ ಹೋಗಿದ್ದೆ.

ರಮಾ:—ರಮೇಶಬಾಬುಗಳನ್ನು ನೋಡಲು ಹೋಗಿದ್ದೆ.

ದಯಾನಾಥ:—ಒಂದರ್ಧ ತಾಸು ಪುಸ್ತಕಾಲಯದಲ್ಲಿ ಕಳೆಯಬಾರದೆ? ಹಾಳುಹರಟೆಯಲ್ಲಿ ಕಾಲ ಹಾಳುಮಾಡುತ್ತಿರುವೆ. ಒಂದು ಸಾಧಾರಣ ಪತ್ರವು ಬಂದರೂ, ಓದುವಾಗ ಕಷ್ಟಪಡುತ್ತಿ. ಶಾಲೆಯನ್ನು ಬಿಟ್ಟ ಬಳಿಕವೇ ನಿಜ ವಾದ ಶಿಕ್ಷಣವು ಆರಂಭವಾಗುವುದು ಅದೇ ನಮ್ಮ ಜೀವನಕ್ಕೆ ಉಪಯೋ ಗಕರವಾದುದು. ನಾನು ನಿನ್ನ ಕುರಿತಾಗ ಕೇಳಿದ ಕೆಲವೊಂದು ಮಾತುಗ

ಳಿಂದ ನನಗೆ ಬಹಳೇ ದುಃಖವೆನಿಸುತ್ತದೆ. ನಿನಗೆ ಸ್ವಲ್ಪ ಬುದ್ಧಿ ಹೇಳುವುದು ನಾನು ನನ್ನ ಧರ್ಮವೆಂದು ಬಗೆಯುತ್ತೇನೆ. ನನ್ನ ಮನೆಯೊಳಗೆ ಅಧರ್ಮದ ಒಂದು ಕಾಸೂ ಬರಕೂಡದು. ಈ ಮೂವತ್ತು ವರ್ಷಗಳ ಕೆಲಸದಲ್ಲಿ ನಾನೊಮ್ಮೆಯಾದರೂ ಅಧರ್ಮದ ಮಾರ್ಗದಲ್ಲಿ ಕಾಲಿಟ್ಟುದಿಲ್ಲ; ನಿನಗೆ ಈ ಬುದ್ಧಿ ಎಲ್ಲಿಂದ ಬಂತೆಂದು ನನಗೆ ತಿಳಿಯದಾಗಿದೆ.

ರಮಾನಾಥನು ತೋರಿಕೆಯ ಸಿಟ್ಟಿನಿಂದ ಹೇಳಿದನು—ನಿಮಗೆ ಇದನ್ನು ಹೇಳಿದವನು ಯಾರು? ಅವನ ಹೆಸರನ್ನಷ್ಟು ಹೇಳಿರಿ. ಅವನ ಮೀಸೆ ಕಿತ್ತು ಬಿಡುವೆನು.

ದಯಾ—ಯಾರೇ ಹೇಳಲಿ. ನಿನಗೇನು? ನೀನವನ ಮೀಸೆಯನ್ನು ಕೀಳುವಿಯಲ್ಲವೆ, ಆದುದರಿಂದ ಹೇಳುವುದಿಲ್ಲ. ಆದರೆ ಇದು ನಿಜವೇ, ಸುಳ್ಳೇ ಎಂದು ಮಾತ್ರ ನಾನು ತಿಳಿಯಬೇಕು.

ರಮಾ—ಪೂರಾ ಸುಳ್ಳು.

ದಯಾ—ಪೂರಾ ಸುಳ್ಳೇ?

ರಮಾ—ಹೌದು, ಖಂಡಿತವಾಗಿಯೂ ಸುಳ್ಳು.

ದಯಾ—ನೀನು 'ಕಮಿಶನ್' ತೆಗೆದುಕೊಳ್ಳುವುದಿಲ್ಲವೆ?

ರಮಾ—'ಕಮಿಶನ್ನು' ಲಂಚವಲ್ಲ. ಎಲ್ಲರೂ ತೆಗೆದುಕೊಳ್ಳುತ್ತಾರೆ. ಅದರಲ್ಲಿ ಗುಟ್ಟೇನು? ಜನರಾವರೂ ಕೇಳದೆಯೇ ಕೊಡುತ್ತಾರೆ. ನಾನು ಯಾರನ್ನೂ ಬೇಡಲು ಹೋಗುವುದಿಲ್ಲ.

ದಯಾ—ಬೇಡದೆಯೆ ಕೊಡುತ್ತಾರೆ, ಬಹಿರಂಗವಾಗಿ ಕೊಡುತ್ತಾರೆ, ಎಂದಿದ್ದರೂ ಲಂಚದ ಕೆಡುಕು ಕಡಮೆಯಾಗದು.

ರಮಾ—ನಾನು ತೆಗೆದುಕೊಳ್ಳದಿದ್ದರೆ ಆ ಎಂಟೊಂಭತ್ತು ರೂಪಾಯಿಗಳ ಪೇದೆಗಳ ಜೀವನ ಹೇಗೆ ಸಾಗೀತು. ನಾನು ಸ್ವತಃ ತೆಗೆದುಕೊಳ್ಳದಿದ್ದರೂ, ಅವರ ಕೈಯನ್ನೇನೂ ಕಟ್ಟಲಾರೆನಷ್ಟೆ?

ದಯಾನಾಥರು ಉದಾಸೀನರಾಗಿ ಹೇಳಿದರು—ನನ್ನ ಕೆಲಸ ನಾನು ಮಾಡಿದೆ. ಅದನ್ನು ಕೇಳುವ, ಬಿಡುವ ಅಧಿಕಾರವು ನಿನಗಿದೆ.

ರಮಾನಾಥನು ಮನೆಯೊಳಗೆ ಹೋದನು. ತಾಯಿ ಕೇಳಿದಳು—ಏನು, ತಂದೆಯವರ ಬಾಯಿ ಕೇಳುತ್ತಿತ್ತು?

ರಮಾ—ಮತ್ತೇನು, ಉಪದೇಶ. 'ಕಮಿಶನ್' ತೆಗೆದುಕೊಂಡರೆ ಆತ್ಮವು ದುರ್ಬಲವಾಗುವುದಂತೆ, ಕೆಟ್ಟ ಹೆಸರು ಬರುವುದಂತೆ.

ಜಾಗೇಶ್ವರಿ—ನಿಮ್ಮ ಪ್ರಾಮಾಣಿಕತೆಯಿಂದ ನೀವು ಮಾಡಿದ ಮಹತ್ಕಾರ್ಯವಾದರೂ ಏನೆಂದು ಕೇಳಲಿಲ್ಲವೆ ನೀನು ?

ರಮಾ—ಕೇಳಬೇಕೆಂದಿದ್ದೆ. ಆದರೆ ಸುಮ್ಮನೆ ಅವರ ಕೋಪವನ್ನು ಕಟ್ಟಿಕೊಳ್ಳುವುದೇಕೆಂದು ಬಿಟ್ಟೆ. ತಮಗೆ ತೆಗೆದುಕೊಳ್ಳುವಷ್ಟು ಜಾಣತನವಿಲ್ಲವೆಂದು ದೊಡ್ಡ ಭಕ್ತನ ಸೋಗನ್ನು ತಾಳಿದ್ದಾರೆ. ಇಲ್ಲಿ ಅಂತಹ ದಡ್ಡರಿಲ್ಲ. ಸಾಹುಕಾರರ ಹಣವನ್ನು ಎತ್ತಲು ಚಾತುರ್ಯ ಬೇಕು. ಯಾರಾದರೂ ಹೀಗೆ ಧರ್ಮಬುದ್ಧಿಯನ್ನು ತೋರಿಸಿದರೆ ನನಗಾಗಲೇ ಗೊತ್ತು ಅವರು ಒಡ್ಡುತಲೆಯವರೆಂದು.

ಜಾಗೇಶ್ವರಿ—ನೀನು ಹೇಳಿದುದು ಸರಿ, ಮಗೂ ! ಇವರಿಗೇನು ? ಮನೆಯಲ್ಲಷ್ಟು ಕಾನೂನನ್ನು ಕೊಚ್ಚಿದರೆ ಸರಿ. ಯಾರ ಮುಂದಾದರೂ ಹೋದರೆ ಇವರ ಬಾಯಿಂದ ಮಂಕೇ ಹೊರಡುವುದಿಲ್ಲ. ಇಂಥವರು ರೂಪಾಯಿಯನ್ನು ಗಳಿಸಬಲ್ಲರೇ !

ರಮಾನಾಥನು ಆಫೀಸಿಗೆ ಹೊರಟಾಗ ಜಾಲಪಳು ಟಪ್ಪಾಲಿಗೆ ಹಾಕುವುದಕ್ಕೆಂದು ಅವನ ಹತ್ತಿರ ಮೂರು ಪತ್ರಗಳನ್ನಿತ್ತಳು. ಅವನು ಅವನ್ನು ಕಿಸೆಯಲ್ಲಿ ಹಾಕಿಕೊಂಡು ಹೊರಟನು. ಆದರೆ ರಸ್ತೆಯನ್ನು ಸೇರಿದ ಬಳಿಕ ಅವನ್ನು ಬಿಚ್ಚಿ ಓದತೊಡಗಿದನು. ವಿಪತ್ತು, ವೇದನೆಗಳ ಕರುಣವಿಲಾಪದ ಪತ್ರಗಳವು ! ಮೂರರ ವಿಷಯವೂ ಒಂದೇ " ಬಾಳುವೆಯು ಬೆಟ್ಟವಾಗಿದೆ. ಇರುಳಲ್ಲಿ ನಿದ್ದೆ ತಗಲುವುದಿಲ್ಲ. ಹಗಲಲ್ಲಿ ಸುಖವಿಲ್ಲ. ಪತಿದೇವನ ಹರ್ಷಕ್ಕಾಗಿ ನಗುತ್ತೇನೆ, ಮಾತಾಡುತ್ತೇನೆ. ಆದರೆ ಹೃದಯವು ಯಾವಾಗಲೂ ಅಳುತ್ತಿರುತ್ತದೆ. ಯಾರ ಮನೆಗೂ ಹೋಗುವುದಿಲ್ಲ. ಯಾರಿಗೂ ಮುಖ ತೋರಿಸುವುದಿಲ್ಲ. ಈ ಶೋಕವು ನನ್ನ ಪ್ರಾಣವನ್ನು ಹೀರಿಯೇ ತೃಪ್ತವಾದೀತೆಂದು ಎಣಿಸುತ್ತೇನೆ. ವಾಗ್ದಾನವಂತೂ ದಿನಾಲು ನಡೆಯುತ್ತಿದೆ. ಆದರೆ, ಇದೆಲ್ಲ ಬರಿಯ ಮೋಸವಲ್ಲದೆ ಬೇರೇನೂ ಅಲ್ಲ. "

ರಮಾನಾಥನು ಮೂರು ಪತ್ರಗಳನ್ನೂ ಕಿಸೆಯೊಳಗೆ ಹಾಕಿಕೊಂಡನು. ಅಂಚೆಮನೆಯು ಕಣ್ಣಮುಂದೆ ಹೊರಳಿ ಹೋದರೂ ಅವನಿಗೆ ತಿಳಿಯಲಿಲ್ಲ.

ಇವಳಿನ್ನೂ, ನಾನು ಮೋಸ ಮಾಡುತ್ತಿರುವೆನೆಂದೇ ತಿಳಿಯುವಳಲ್ಲ ? ಏನು ಮಾಡಲಿ? ಹೇಗೆ ವಿಶ್ವಾಸವನ್ನು ಹುಟ್ಟಿಸಲಿ ? ಎಂತಹ ಅಪಾರವೇದನೆ ! ವಿಶ್ವಾಸವನ್ನೂ ನಾಶಗೊಳಿಸಿತಲ್ಲವೆ ಅದು ? ಸುಳ್ಳು ಮರ್ಯಾದೆಯ ರಕ್ಷಣೆಗಾಗಿ ತಾನು ಆಕೆಗೆ ಉಂಟುಮಾಡಿದ ನೋವಿನ ನಿಜವಾದ ಆಳವು ಎಷ್ಟೆಂದು ಅವನಿಗೆ ಈಗ ಗೊತ್ತಾಯಿತು. ಜಾಲಪಳು ಶೋಕದಿಂದ ಈ ತೆರನಾಗಿ ಬೇಯುತ್ತಿರುವಾಗಲೂ, ರಮಾನಾಥನು ಸಾಲ ಮಾಡುವುದಕ್ಕೆ ಹಿಂಜರಿವುದೆ ? ಅವನ ಹೃದಯವು ಕಾತರವಾಯಿತು. ಅತಿ ದೈನ್ಯದಿಂದ, ಅತಿ ಶ್ರದ್ಧೆಯಿಂದ ಅವನು ದೇವರನ್ನು ಬೇಡಿಕೊಂಡನು—ಭಗವನ್, ನನಗೆ ಏನು ಬೇಕಾದರೂ ದಂಡನೆಯನ್ನು ವಿಧಿಸು. ಆದರೆ ನನ್ನ ಜಾಲಪಳನ್ನು ಮಾತ್ರ ನನ್ನಿಂದ ದೂರಮಾಡಬೇಡ. ಅದಕ್ಕೆ ಮುಂಚೆಯೇ ನನ್ನ ಪ್ರಾಣವನ್ನು ತೆಗೆದುಕೋ. ಅವನ ಹೃದಯದಿಂದ ಹೊರಟ ಮಾತುಗಳಿವು—ದೇವರೆ, ದೇವರೆ, ನನ್ನ ದೀನದಶೆಯನ್ನು ಕಂಡು ದಯೆದೋರು !

ಆದರೆ ಈ ಗ್ಲಾನಿಯೊಡನೆ ಆತನಿಗೆ ಜಾಲಪಳ ಮೇಲೆ ಸಿಟ್ಟು ಬಂದಿತು. ಇಷ್ಟು ಬಯಕೆಯಿದ್ದೂ, ಈಕೆ ನನ್ನೊಡನೆ ಏಕೆ ಹೇಳಲಿಲ್ಲ? ನನ್ನ ಹತ್ತಿರವೂ ಈ ಕಣ್ಣುಮುಚ್ಚಾಲೆಯೆ ?

ಅಂಗಣದಲ್ಲಿ ದಿನಸುಗಳ ತೂಕವಾಗುತ್ತಿತ್ತು. ಮೇಜಿನ ಮೇಲೆ ರೂಪಾಯಿಗಳು ಬಂದು ಬೀಳುತ್ತಿದ್ದವು. ರಮಾನಾಥನು ತನ್ನ ಚಿಂತೆಯಲ್ಲೇ ಮುಳುಗಿದ್ದನು. ಯಾರ ಸಲಹೆಯನ್ನು ಕೇಳಲಿ ? ತಾನು ಮದುವೆ ಮಾಡಿಕೊಂಡುದಾದರೂ ಏಕೆ ? ಎಲ್ಲ ದೋಷವೂ ತನ್ನದೆ. ಮನೆಯ ಸ್ಥಿತಿ ಗೊತ್ತಿದ್ದೂ, ತಾನು ಮದುವೆ ಮಾಡಿಕೊಳ್ಳಲು ಸಮ್ಮತಿಸಿದುದೇಕೆ ? ಅಂದು ಅವನಿಗೆ ಕೆಲಸ ಮಾಡಲು ಮನಸ್ಸಿರಲಿಲ್ಲ. ಹೊತ್ತಿಗೆ ಮೊದಲೇ ಹೊರಟು ಬಂದನು.

ಜಾಲಪಳು ಅವನನ್ನು ಕಂಡೊಡನೆ ಕೇಳಿದಳು—ನನ್ನ ಪತ್ರಗಳನ್ನು ನೀವು ಹಾಕಿಲ್ಲವಷ್ಟೆ ? ರಮಾನಾಥನು ಹೇಳಿದನು.—ಅಯ್ಯೋ, ಅವುಗಳ ನೆನಪೇ ಇರಲಿಲ್ಲ. ಕಿಸೆಯಲ್ಲಿದ್ದುದು ಕಿಸೆಯಲ್ಲೇ.

ಜಾಲಪ—ಅದೊಳ್ಳೆಯದೇ ಆಯಿತು. ಸರಿ ಅವನ್ನಿಲ್ಲಿ ಕೊಡಿರಿ. ಅವನ್ನು ಹಾಕುವುದೇ ಬೇಡ.

ರಮಾ—ಯಾಕೆ, ನಾಳೆ ಹಾಕುವೆನು.

ಜಾಲಪ—ಬೇಡ ಅವನ್ನು ಕಳಿಸುವ ಅಗತ್ಯವೇ ಇಲ್ಲ. ಅವುಗಳಲ್ಲಿ ಬರಿ ಯುಬಾರದ ಕೆಲವು ಸಂಗತಿಗಳನ್ನು ನಾನು ಬರೆದು ಬಿಟ್ಟಿದ್ದೆ ನೀವವನ್ನು ಟಪ್ಪಾಲಿಗೆ ಹಾಕುತ್ತಿದ್ದರೆ ನನಗೆ ದುಃಖವಾಗುತ್ತಿತ್ತು. ನಾನು ನಿಮ್ಮ ನಿಂದೆ ಯನ್ನು ಮಾಡಿದ್ದೆನು. ಹೀಗೆ ಹೇಳಿ ಅವಳು ಮಂದಹಾಸವನ್ನು ಬೀರಿದಳು.

ರಮಾ—ಕೆಟ್ಟವನನ್ನು, ಮೋಸಗಾರನನ್ನು, ಧೂರ್ತನನ್ನು ನಿಂದಿಸದೆ ಇನ್ನಾರನ್ನು ನಿಂದಿಸುವುದು ?

ಜಾಲಪಳು ವ್ಯಗ್ರಳಾಗಿ ಕೇಳಿದಳು—ನೀವು ಪತ್ರಗಳನ್ನೋದಿರುವಿರಾ ?

ರಮಾನಾಥನು ನಿಃಸಂಕೋಚಭಾವದಿಂದ ಹೇಳಿದನು—ಹೌದು, ಇದು ಅಕ್ಷಮ್ಯ ಅಪರಾಧವೆ ?

ಜಾಲಪಳು ಕಾತರಸ್ವರದಲ್ಲಿ ಹೇಳಿದಳು—ಹಾಗಾದರೆ ನನ್ನ ಮೇಲೆ ನೀವು ಬಹಳ ಸಿಟ್ಟುಗೊಳ್ಳುವಿರಿ

ಕಣ್ಣೀರಿನ ಆವೇಗದಿಂದ ಅವಳ ಕಂಠವು ಬಿಗಿದು ಬಂದಿತು. ಅವಳ ತಲೆಯು ಬಾಗಿತು. ನತನಯನಗಳಿಂದ ಕಣ್ಣೀರ ಹನಿಗಳು ಸೆರಗಿನ ಮೇಲೆ ಬೀಳತೊಡಗಿದವು. ಒಂದು ನಿಮಿಷದಲ್ಲಿ ತನ್ನ ಸ್ವರವನ್ನು ಸರಿಪಡಿಸಿಕೊಂಡು ಆಕೆ ಹೇಳಿದಳು—ನನ್ನಿಂದ ಬಹಳ ದೊಡ್ಡ ಅಪರಾಧವಾಯಿತು. ನನಗೇನು ಬೇಕಾದರೂ ದಂಡನೆಯನ್ನು ವಿಧಿಸಿರಿ; ಆದರೆ ಅಪ್ರಸನ್ನರಾಗಬೇಡಿರಿ. ನೀವು ಹೋದಬಳಿಕ ನನಗೆಷ್ಟು ದುಃಖವಾಯಿತೆಂದು ಆ ಪರಮಾತ್ಮನಿಗೇ ಗೊತ್ತು. ಹೇಗೆ ನನ್ನ ಲೇಖನಿಯಿಂದ ಆ ಮಾತುಗಳು ಹೊರಟುವೋ ನನಗೇ ತಿಳಿಯದು.

ಭೂಷಣಗಳ ಚಿಂತೆಯು ರಮಾನಾಥನಿಗೆ ತನಗಿದ್ದುದಕ್ಕಿಂತ ಕಡಮೆ ಇರಲಿಲ್ಲವೆಂದು ಜಾಲಪಳಿಗೆ ತಿಳಿದಿದ್ದರೂ, ಗೆಳತಿಯರಿಗೆ ಪತ್ರ ಬರೆಯುವಾಗ ನಾವು ನಮ್ಮ ದುಃಖವನ್ನು ಹಿಂದುಮಾಡಿ ಹೇಳುವಂತೆ, ಆಕೆಯಾದರೂ ತನ್ನ ಗೆಳತಿಯರಿಗೆ ಬರೆದಾಗ ಸ್ವಲ್ಪ ಅಧಿಕವಾಗಿಯೇ ಬರೆದಿದ್ದಳು.

ರಮಾನಾಥನು ಜಾಲಪಳ ಕಂಬನಿಗಳನ್ನೊರಸುತ್ತ ಹೇಳಿದನು—ನಾನು ನಿನ್ನ ಮೇಲೆ ಅಪ್ರಸನ್ನನಾಗಿಲ್ಲ, ಪ್ರಿಯೇ. ಆಶೆಯನ್ನು ವಿಳಂಬ ಮಾ

ವುದೇ ದುರಾಶೆಯು. ಇಷ್ಟೂ ನನಗರಿಯದೆ? ನೀನು ಸಮ್ಮತಿಸಿದ್ದರೆ, ಎಷ್ಟೋ ಮುಂಚೆಯೇ ಒಂದೆರಡು ಒಡವೆಗಳನ್ನಾದರೂ ಮಾಡಿಸದಿರುತ್ತಿದ್ದಿಲ್ಲ. 'ಮನುಷ್ಯನು ಸಂಕೋಚದಿಂದ, ಒಂದು ವಸ್ತುವು ಬೇಕೆಂದೆ ಇದ್ದರೂ, 'ಬೇಡ ಬೇಡ' ವೆಂದು ಹೇಳುವನೆಂಬುದು ಆಗ ನನ್ನ ಬುದ್ಧಿಗೆ ಹೊಳೆಯಲಿಲ್ಲ. ದೇವರು ಬಯಸಿದರೆ ನೀನು ಇನ್ನು ಹೆಚ್ಚು ಹೊತ್ತು ಕಾಯಬೇಕಾಗಿಲ್ಲ

ಜಾಲಪಳು ಚಿಂತಿತ ನೇತ್ರಗಳಿಂದ ಕೇಳಿದಳು– ಹಾಗಾದರೆ ಕಡವಾಗಿ ತರುವಿರೇನು?

ರಮಾ—ಹಾಂ, ಉದ್ದರಿ ತರುವುದಕ್ಕೇನೂ ಅಡ್ಡಿಯಿಲ್ಲ. ಬಡ್ಡಿಕೊಡಲಿಕ್ಕಿಲ್ಲವಾದರೆ ಉದ್ದರಿಕೊಳ್ಳುವುದು ನಗದಿಕೊಂಡಂತೆಯೆ. ಸಾಲದಿಂದಲೇ ಪ್ರಪಂಚದ ಕೆಲಸಗಳು ಸಾಗುತ್ತವೆ. ಸಾಲ ಕೊಳ್ಳದವನು ಯಾರು?

ಜಾಲಪ—ನಾನು ನಿಮ್ಮ ಚಿಂತೆಗೆ ಕಾರಣಳಾಗುವುದಿಲ್ಲ. ಇನ್ನು ನಾನು ಕನಸಿನಲ್ಲಾದರೂ ಆಭರಣಗಳ ಹೆಸರನ್ನೆತ್ತುವುದಿಲ್ಲ.

ರಮಾ—ಹೆಸರನ್ನು ನೀನೆಂದೂ ಎತ್ತಿದವಳಲ್ಲ. ಹೌದು. ಆದರೆ ನೀನು ಹೆಸರೆತ್ತದಿದ್ದ ಮಾತ್ರಕ್ಕೇ ನಾನು ಮಾಡಬೇಕಾದ್ದು ಮಾಡಿದಂತಾಗುವುದಿಲ್ಲವಷ್ಟೆ! ಸಾಲವೆಂದರೆ ನೀನು ಇಷ್ಟು ಹೆದರುವುದು ಸುಮ್ಮನೆ. ರೂಪಾಯಿಗಳು ಕೂಡಲಿ ಎಂದು ನಾನು ಕಾಯುತ್ತ ಕುಳಿತರೆ, ಅವುಗಳೆಂದೂ ಜಮೆಯಾಗಲಿಕ್ಕಿಲ್ಲ. ಹೀಗೆಯೇ ಏನಾದರೂ ಮಾಡಿ ವರ್ಷಕ್ಕೆ ಒಂದೆರಡು ಒಡವೆಗಳನ್ನು ಮಾಡಿಸುವುದು ಕಷ್ಟವಾಗದು.

ಜಾಲಪ—ಆದರೆ ಮೊದಲು ಒಂದು ಸಣ್ಣ ಒಡವೆಯನ್ನೇ ತಂದರೆ ಸಾಕು

ರಮಾ—ನಾನೂ ಹಾಗೆಯೇ ಎಣಿಸಿರುವೆನು.

ರಮಾನಾಥನು ಪೇಟೆಯ ಕಡೆಗೆ ತೆರಳಿದಾಗ ಕತ್ತಲಾಗಿತ್ತು. ಹಗಲಾಗಿದ್ದರೆ ಗೆಳೆಯರಲ್ಲಿ ಯಾರಾದರೂ ನೋಡುತ್ತಿದ್ದರು. ದಯಾನಾಥರ ಕಣ್ಣಿಗೂ ಬೀಳುತ್ತಿದ್ದನೋ ಏನೊ. ಅವನು ಈ ಕೆಲಸವನ್ನಾರಿಗೂ ತಿಳಿಸದೆಯೆ ಮಾಡಬೇಕೆಂದಿದ್ದನು.

## ೧೩

ಸರಾಫಕಟ್ಟೆಯಲ್ಲಿ ಗಂಗುವಿನ ಅಂಗಡಿಯೆಂದರೆ ಬಹಳ ಪ್ರಸಿದ್ಧಿ. ಗಂಗುವು ಬ್ರಾಹ್ಮಣನಾದರೂ ವ್ಯಾಪಾರದಲ್ಲಿ ಬಹಳ ಚತುರನಾಗಿದ್ದನು. ಅವನ ಅಂಗಡಿಯಲ್ಲಿ ದಿನಾಲೂ ಗಿರಾಕಿಗಳ ಸಂತೆಯಿರುತಿತ್ತು. ಅವನ ಕರ್ಮ ನಿಷ್ಠೆಯು ಗಿರಾಕಿಗಳಲ್ಲಿ ನಂಬುಗೆಯನ್ನು ಹುಟ್ಟಿಸಿತ್ತು. ಬೇರೆ ಅಗಂಡಿಗಳ ಲ್ಲಾದರೆ ಮೋಸ ಹೋಗುವ ಭಯವಿತ್ತು. ಇಲ್ಲಿ ಯಾವ ತರದ ಕಪಟವೂ ಇಲ್ಲ. ಗಂಗುವು ರಮಾನಾಥನನ್ನು ಕಂಡೊಡನೆ ಮುಗುಳುನಗೆಯೊಂದನ್ನು ಬೀರಿ ಹೇಳಿದನು:—ಬನ್ನಿ, ಸ್ವಾಮೀ, ಬನ್ನಿ ಮೇಲೆ. ಬಹಳ ದಯೆ ತೋರಿಸಿದಿರಿ. ಗುಮಾಸ್ತರೆ, ನಮ್ಮ ಬಾಬುಗಳಿಗೋಸ್ಕರ ಎಲೆಯಡಿಕೆ ತರಿಸಿರಿ. ಏನಪ್ಪಣೆ, ಬಾಬುಗಳೆ? ನೀವಂತೂ ನಮ್ಮ ಮೇಲೆ ಕೋಪಗೊಂಡಂತೆ ತೋರುವುದು. ಈಚೆಕಡೆ ಬರುವುದೇ ಇಲ್ಲ. ಬಡವರ ಮೇಲೂ ಆಗಾಗ ದಯೆದೋರುತ್ತಾ ಇರಬೇಕು. ಸ್ವಾಮೀ!

ಗಂಗುವಿನ ಈ ತೆರದ ಶಿಷ್ಟತೆಯಿಂದ ರಮಾನಾಥನಿಗೆ ತುಸು ಧೈರ್ಯ ಒಂದಂತಾಯಿತು ಅವಸಿಷ್ಟು ಮಾಡಿ ಹಟಹಿಡಿದು ಕರೆಯದಿದ್ದಲ್ಲಿ ರಮಾ ನಾಥನಿಗೆ ಅವನ ಅಂಗಡಿಯೊಳಗೆ ಕಾಲಿಡುವ ಸಾಹಸವಾಗುತ್ತಿದ್ದಿಲ್ಲ. ಅಂಗ ಡಿಯೊಳ ಹೊಕ್ಕು ಹೇಳಿದನು —ಇಲ್ಲಿ ನಮ್ಮಂತಹ ಮಜೂರರನ್ನು ಕೇಳುವ ವರು ಯಾರು ಸ್ವಾಮೀ, ಕಿಸೆ ತುಂಬಿದರಲ್ಲವೆ?

ಗಂಗು—ಇದೇನು ಹೇಳುತ್ತೀರಿ ಸ್ವಾಮೀ! ಇದು ನಿಮ್ಮ ಅಂಗಡಿ. ಏನು ಬೇಕೋ ಅದನ್ನು ಒಯ್ಯಿರಿ. ಬೆಲೆ ಹಿಂದೆ-ಮುಂದೆ ಸಿಕ್ಕೇಸಿಗುವುದು. ನಾವು ಜನರನ್ನು ಕಂಡೇ ಗುರುತು ಹಿಡಿಯುತ್ತೇವೆ. ಹಾಗೆಣಿಸಬೇಡಿರಿ. ನೀವು ನಿಮ್ಮ ಅಂಗಡಿಗೆ ಕಾಲಿಟ್ಟುದೇ ನಮ್ಮ ಭಾಗ್ಯ. ಏನು ತೋರಿಸಲಿ? ಬಳೆಯೋ ಹಾರವೋ? ಇದೇ ಹೊಸತಾಗಿ ದಿಲ್ಲಿಯಿಂದ ಮಾಲು ಬಂದಿದೆ.

ರಮಾ—ಯಾವುದಾದರೂ ಸುಲಭ ಬೆಲೆಯ ಹಾರವನ್ನು ನೋಡುವ.

ಗಂಗು—ಸಾಧಾರಣ ಆರ್ನೂರು-ಏಳ್ನೂರರದಾಗಬಹುದಲ್ಲವೆ?

ರಮಾ—ಬೇಡವಪ್ಪಾ, ಹೆಚ್ಚೆಂದರೆ ನಾಲ್ನೂರು.

ಗಂಗು—ನಾನು ನಿಮಗೆ ಅವೆರಡನ್ನೂ ತೋರಿಸುತ್ತೇನೆ. ಯಾವುದು ಕಣ್ಣಿಗೆ ಹಿಡಿಯುತ್ತದೋ ಅದನ್ನೆ ತೆಗೆಯಿರಿ. ನಮ್ಮಲ್ಲಿ ಯಾವ ಬಗೆಯ

ತಕ್ಕ-ಮೋಸಗಳಿಲ್ಲ. ಆ ವಿಷಯ ತಾವು ಚಿಂತಿಸುವುವೇ ಬೇಡ. ಐದು ವರುಷದ ಮಗುವೇ ಆಗಲೀ, ನೂರುವರುಷದ ಮುದುಕನೇ ಆಗಲಿ, ಎಲ್ಲರಿಗೂ ಒಂದೇ ಮಾತು ಅವನಿಗೂ ಒಂದು ದಿನ ಮುಖ ತೋರಿಸಬೇಕಾಗುತ್ತದಲ್ಲ ಸ್ವಾಮಿ !

ಸಂದೂಕವು ಹಾಗೆಯೆ ಬಂದಿತು. ರಮಾನಾಥನು ಏನೆಯಿಕ್ಕದೆ ಒಂದಾದ ಮೇಲೆ ಒಂದು ಆಭರಣಗಳನ್ನು ನೋಡುತ್ತಿದ್ದನು. ಅವುಗಳ ಹೊಳಪು ವಿದ್ಯುದ್ದೀಪವನ್ನು ನಾಚಿಸುತ್ತಿತ್ತು. ರಮಾನಾಥನು ನೂರು ರೂಪಾಯಿಗಳಿಗಿಂತ ಹೆಚ್ಚು ಕಡಕೊಳ್ಳುವುದಿಲ್ಲವೆಂದು ನಿರ್ಧರಿಸಿ ಬಂದಿದ್ದನು. ಆದರೆ ನಾಲ್ನೂರು ರೂಪಾಯಿಗಳ ಹಾರವೂ ಅವನ ಕಣ್ಣಿಗೆ ತಾಗುತ್ತಿದ್ದಿಲ್ಲ! ಜಾಲಪಳು ಅದನ್ನು ಮೆಚ್ಚದಿದ್ದರೆ? ಎಲ್ಲ ಪ್ರಯತ್ನಗಳೂ ವ್ಯರ್ಥವಾಗಬಹುದು. ಈ ಮಣಿಹಾರವು ಹೇಗೆ ಶೋಭಿಸುತ್ತಿದೆ! ಅದು ತನ್ನ ಸಹಸ್ರ ಮಣಿರಂಜಿತ ನೇತ್ರಗಳಿಂದ ಅವನನ್ನು ಸೆಳೆಯಹತ್ತಿತು. ಅವನು ದಂಗು ಬಡೆದವನಾಗಿ ನೋಡುತ್ತಿದ್ದನು, ಆದರೆ ಬಾಯಿಯಿಂದ ಮಾತುಗಳೇ ಹೊರಡಲೊಲ್ಲವು. ಅವನ ಹತ್ತಿರವಿದ್ದುದು ಮುನ್ನೂರು ರೂಪಾಯಿ ಮಾತ್ರ. ಗಂಗುವು ಮತ್ತೆ ಮುನ್ನೂರಕ್ಕೆ ಉದ್ರಿ ಬರೆಯದಿದ್ದರೆ ಅವನೆಷ್ಟು ನಾಚಿಗೆ ಪಡಬೇಕಾಗುವುದು? ಗಂಗುವು ಆತನ ಮನಸ್ಸಿನ ಸಂಶಯವನ್ನು ತಿಳಿದು—ನಿಮಗೆ ಈ ಹಾರವೇ ಒಪ್ಪುವುದು. ಕತ್ತಲಲ್ಲಿಟ್ಟರೆ ಬೈಳಗೆ ಬೆಳಕಾದೀತು.

ರಮಾ—ನನಗೂ ಒಪ್ಪುವುದು ಇದೇ ಹಾರ. ಆದರೆ ನನ್ನ ಹತ್ತಿರ ಇರುವುದು. ಮುನ್ನೂರು ಮಾತ್ರವೆಂದು ತಿಳಿದುಕೊಳ್ಳಿರಿ.

ನಾಚಿಕೆಯಿಂದ ರಮಾನಾಥನ ಮುಖವು ಕೆಂಪೇರಿತು. ಕಂಪಿಸುವ ಹೃದಯದಿಂದ ಅವನು ಗಂಗುವಿನ ಮುಖವನ್ನು ನೋಡತೊಡಗಿದನು

ಗಂಗುವು ನಿಷ್ಕಪಟ ಭಾವದಿಂದ ಹೇಳತೊಡಗಿದನು—ಸ್ವಾಮೀ, ರೂಪಾಯಿಯ ಮಾತೆತ್ತಬೇಡಿರಿ. ಹತ್ತು ಸಾವಿರದ ಒಡವೆಗಳನ್ನು ಕಳಿಸಲೇ, ಹೇಳಿರಿ. ಅಂಗಡಿಯೇ ನಿಮ್ಮದಿರುವಾಗ ಇದೆಲ್ಲಾ ಎಂತಹ ಮಾತು! ಅಪ್ಪಣೆಯಾದರೆ ಇನ್ನೊಂದೆರಡು ಒಡವೆಗಳನ್ನು ತೋರಿಸುವೆನು. ನಿನ್ನೆಯೇ ಒಂದು ಚೂಡಾಮಣಿಯು ತಯಾರಾಗಿ ಬಂದಿರುವುದು. ಒಂದು ಸಲ ನೋಡಿ ಬಿಡಿ. ದರವೂ ಬಹಳವಿಲ್ಲ ನಿಮಗಾದರೆ ಇನ್ನೂರೈವತ್ತಕ್ಕೆ ಕೊಡುವೆನು.

ರಮಾನಾಥನಿಗೆ ಚಿನ್ನದ ಆ ಗುಲಾಬಿ ಹೂವನ್ನು ಕಂಡು ಆಶ್ಚರ್ಯದ ಮೇಲೆ ಆಶ್ಚರ್ಯವಾಯಿತು. ನಿಜವಾದ ಗುಲಾಬಿ ಹೂವಿನಂತೆಯೇ ಇತ್ತು. ವಜ್ರದ ಕಲ್ಲುಗಳ ಹಿಮಕಣಗಳಂತೆ ಹೊಳೆಯುತ್ತಿದ್ದವು.

ಗಂಗು—ಏನು, ಚೆನ್ನಾಗಿಲ್ಲವೆ ?

ರಮಾನಾಥ—ಸುಂದರವಾಗಿದೆಯೇನೋ ಹೌದು ಆದರೆ ನೀವು ನಾಳೆಯಿಂದಲೇ ಹಣದ ತಗಾದೆಗೆ ಆರಂಭಿಸಿದರೆ ಇಲ್ಲಿ ನಾನು ಸತ್ತೆ ನನ್ನಿಂದಾದಷ್ಟು ಬೇಗನೆ ಸಲ್ಲಿಸುವ ಯೋಚನೆ ಮಾಡುವೆನು

ಗಂಗುವು ಎರಡನ್ನೂ ಮಖಮಲ್ಲಿನ ಸುಂದರ ಪೆಟ್ಟಿಗೆಗಳಲ್ಲಿ ಇಟ್ಟು ಹೆಸರು ಬರೆಕೊಂಡು ರಮಾನಾಥನಿಗೊಪ್ಪಿಸಿದನು. ಎಲೆಯಡಕೆಯ ಉಪಚಾರವನ್ನು ಮಾಡಿ ಕಳುಹಿಸಿಕೊಟ್ಟನು

ರಮಾನಾಥನ ಮನೋಲ್ಲಾಸವು ಎಲ್ಲೆ ಮೀರಿತು. ಆದರದು ಶುದ್ಧ ಉಲ್ಲಾಸವಾಗಿರಲಿಲ್ಲ; ಆದರೊಡನೆ ಶಂಕೆಯ ಬೆರಕೆಯಿದ್ದಿತು. ತಾಯಿಯ ಹತ್ತಿರ ಬೇಡಿ ಹಣತೆಗೆದುಕೊಂಡು ಮಿಠಾಯಿ ತಿನ್ನುವ ಬಾಲಕನ ಉತ್ಸಾಹವಾಗಿರಲಿಲ್ಲ; ಹಣವನ್ನು ಕದ್ದು ಮಿಠಾಯಿ ತಿನ್ನುವವನದಾಗಿದ್ದಿತು. ಅವನಿಗೆ ಮಿಠಾಯಿಗಳು ಸಿಹಿಯಾಗಿ ರುಚಿಸುತ್ತವೇನೋ ಸರಿ. ಆದರೆ ಮನೆಗೆ ಹೋದೊಡನೆ ಬೆನ್ನಿಗೆ ಏಟು ಬೀಳುವುದೋ ಏನೋ ಎಂದು ಎದೆನಡುಗುತ್ತಿರುವುದು. ಆರ್ನೂರೈವತ್ತು ರೂಪಾಯಿಗಳನ್ನು ತೀರಿಸುವುದು ಅಷ್ಟೊಂದು ದೊಡ್ಡ ಮಾತಾಗಿರಲಿಲ್ಲ; ಸರಿಯಾಗಿ ಕೆಲಸ ನಡೆಯಿಸಿದರೆ ಆರು ತಿಂಗಳಲ್ಲಿ ತೀರಿಸಬಹುದು. ಮನೆಯನ್ನು ಬೇಗ ತಲಪಬೇಕೆಂದು ಒಂದು ಗಲ್ಲಿಯ ಹಾದಿಯನ್ನು ಹಿಡಿದನು. ಆಕಾಶದಲ್ಲಿ ಕವಿದಿದ್ದ ಮೋಡಗಳು ಭೋರೆಂದು ಸುರಿಯತೊಡಗಿದುವು. ಅವನು ಕೊಡೆಬಿಡಿಸುವುದರೊಳಗೆ ಒಮ್ಮೆ ಎಲ್ಲಾ ಒದ್ದೆಯಾದನು. ಆ ಕತ್ತಲಾದ ಗಲ್ಲಿಯಲ್ಲಿ ಹೋಗುವಾಗ ಅವನಿಗೆ ಎಲ್ಲಿ ಕಳ್ಳರು ಬಂದು ತನ್ನ ಒಡವೆಗಳನ್ನು ಸೆಳೆದುಕೊಳ್ಳುವರೋ ಎಂಬ ಭಯವು ಕೂಡಾಹತ್ತಿತು. ತಾನೇಕೆ ಮುಖ್ಯ ಮಾರ್ಗವನ್ನು ಬಿಟ್ಟು ಈ ಗಲ್ಲಿಯನ್ನು ಸೇರಿದೆನೆಂದು ಪಶ್ಚಾತ್ತಾಪವಾಯಿತು. ಈ ಅಸಾಮಯಿಕ ಮಳೆಯು ಅವನ ಆನಂದ ಕಲ್ಪನೆಗಳಿಗೆ ತಡೆಮಾಡಿ ಬಿಟ್ಟಂತಿತ್ತು. ಹಾಗೂ ಹೀಗೂ ಪುನಃ ರಸ್ತೆಯು ಬಂದಿತು.

ಅವನು ಮನೆಯನ್ನು ತಲುಪಿದಾಗ ದಯಾನಾಥರು ಹುಕ್ಕವನ್ನು ಸೇದುತ್ತಿದ್ದರು. ಅವರಿಗೆ ಕಾಣದಂತೆ ಹೋಗಬೇಕೆಂದು ಮಾಡಿದ್ದನು. ಆದರೆ ಅವರು ಕೇಳಿಯೇ ಬಿಟ್ಟರು—ಈ ಹೊತ್ತಿನಲ್ಲಿ ಎಲ್ಲಿಗೆ ಹೋಗಿದ್ದೆ ?

ರಮಾನಾಥನು ಅವರ ಮಾತಿಗೆ ಉತ್ತರ ಕೊಡಲಿಲ್ಲ. ಎಲ್ಲಾದರೂ ಅವರು ಅಂದಿನ ವೃತ್ತಪತ್ರಿಕೆಯ ಸುದ್ದಿಯ ಚರ್ಚೆಗೆ ತೊಡಗಿದರೆಂದರೆ ಕೆಲವು ಗಂಟೆಗಳ ವರೆಗೆ ಬಿಡುವು ದೊರೆವಂತಿರಲಿಲ್ಲ. ಸೀದಾ ಒಳಗೆ ನಡೆದನು. ಜಾಲಪಳು ಬಾಗಿಲಲ್ಲಿ ನಿಂತು ಅವನ ಕೈಯಿಂದ ಕೊಡೆಯನ್ನು ಇಸಿದು ಕೊಂಡು ಹೇಳಿದಳು—ಪೂರಾ ಒದ್ದೆಯಾಗಿದ್ದೀರಿ. ಇದೇನು ? ಎಲ್ಲಾದರೂ ನಿಲ್ಲಬಾರದಾಗಿತ್ತೆ ?

ರಮಾ—ಮಳೆಯನ್ನು ಕೇಳುವವರಾರು ? ಇಡಿ ರಾತ್ರಿ ಸುರಿಯುತ್ತಾ ಇದ್ದರೆ ?

ಹೀಗೆ ಹೇಳಿ ರಮಾನಾಥನು ಮೇಲಕ್ಕೆ ಹೋದನು. ಜಾಲಪಳು ತನ್ನ ಹಿಂದೆಯೇ ಬರಬಹುದೆಂದು ಎಣಿಸಿದ್ದನು. ಆದರೆ ಅವಳು ಕೆಳಗೆ ಕೂತು ತನ್ನ ಮೈದುನರೊಂದಿಗೆ ಚಕ್ಕಂದವಾಡುತ್ತಿದ್ದಳು. ರಮಾನಾಥನು ಸರಾಫ ಕಟ್ಟೆಯಿಂದ ಬಂದಿರುವನೆಂದು ಅವಳಿಗೆ ಹೇಗೆ ತಿಳಿಯಬೇಕು ?

ರಮಾನಾಥನು ಬಟ್ಟೆ ಬದಲಿಸಿ ಸಿಡುಕಿನಿಂದ ಕೆಳಗೆ ಬಂದನು. ಊಟಕ್ಕೆ ಸಿದ್ಧವಾಗಿತ್ತು. ಜಾಲಪಳು ತನ್ನ ಉದ್ವೇಗವನ್ನು ತಡೆದುಕೊಂಡಿದ್ದರೂ ಅಂದಿನ ಆ ಉತ್ಕಂಠಾವಸ್ಥೆಯಲ್ಲಿ ಅವಳಿಗೆ ಊಟವು ಸೇರಲಿಲ್ಲ. ಅವಳು ಮೇಲೆ ಬಂದಾಗ ರಮಾನಾಥನು ಮಂಚದಮೇಲೆ ಒರಗಿದ್ದನು. ಅವನನ್ನು ಕಂಡೊಡನೆ ಹೇಳಿದನು—ಇವತ್ತು ಸುಮ್ಮನೆ ಸರಾಫಕಟ್ಟೆಯವರೆಗೆ ಹೋದಂತಾಯಿತು. ತಯಾರಾದ ಹಾರವು ಎಲ್ಲಿಯೂ ಇರಲಿಲ್ಲ.

ಜಾಲಪಳ ಉತ್ಸಾಹಭರಿತ ಮುಖವು ಕಳೆಗುಂದಿತು. ಹೇಳಿದಳು—ಅದು ನನಗೆ ಮೊದಲೇ ಗೊತ್ತಿತ್ತು. ನಾಲ್ಕಾರು ತಿಂಗಳಾದರೂ ಹಿಡಿದೀತು ಅದರ ಕೆಲಸವೆಲ್ಲಾ ಮುಗಿಯಲು.

ರಮಾ—ಇಲ್ಲ, ಇಲ್ಲ. ಬಹುಬೇಗನೆ ಮಾಡಿ ಕೊಡುವೆನೆಂದು ಆಣೆ ಹಾಕಿ ಹೇಳಿದನು

ಜಾಲಪ—ಹೂಂ, ಯಾವಾಗ ಬೇಕಾದರೂ ಕೊಡಲಿ

ಉತ್ಕಂಠತೆಯು ಚರಮಾವಸ್ಥೆಯೇ ನಿರಾಶೆ. ಜಾಲಪಳು ಮುಖ ತಿರುಗಿಸಿ ಮಲಗಲು ಹೋಗುವುದರಲ್ಲಿದ್ದಳು. ಅಷ್ಟರಲ್ಲಿ ರಮಾನಾಥನು ಬಿದ್ದು ಬಿದ್ದು ನಗತೊಡಗಿದನು. ಜಾಲಪಳು ಬೆಚ್ಚಿ ಬಿದ್ದಳು. ರಮಾನಾಥನು ಬೇಕೆಂದೇ ಈ ಸೋಗನ್ನು ಮಾಡಿದನೆಂದು ಆಕೆಗೆ ತಿಳಿಯಿತು. ಮುಗುಳ್ನಗುತ್ತಾ ಹೇಳಿದಳು—ಎಂತಹ ತುಂಟತನ ನಿಮ್ಮದು ! ಏನು ತಂದಿರಿ ?

ರಮಾ—ನಿನ್ನನ್ನು ಹೇಗೆ ಮೋಸಗೊಳಿಸಿದೆ ?

ಜಾಲಪ—ಇದು ಗಂಡಸರ ಸ್ವಭಾವ. ನೀವೇನೊ ಹೊಸತು ಮಾಡಿದಂತಾಗಲಿಲ್ಲ. ಬಿಡಿ.

ಜಾಲಪಳು ಆ ಎರಡೂ ಒಡವೆಗಳನ್ನು ಕಂಡು ಆನಂದತುಂದಿಲಳಾದಳು. ಎದೆಯಲ್ಲಿ ಸಂತಸದ ತೆರೆಗಳು ಏಳುತ್ತಿದ್ದವು. ತನ್ನ ಸಂತೋಷವನ್ನು ತಡೆದುಕೊಳ್ಳಬೇಕೆಂದು ಆಕೆಯೆಷ್ಟು ಯತ್ನಿಸಿದರೂ ಸಾಧ್ಯವಾಗಲಿಲ್ಲ. ಮುಗುಳ್ನಗುವ ಕಣ್ಣುಗಳು, ಹೊಳೆ ಹೊಳೆವ ಕಪೋಲಗಳು ಅರೆದೆರೆದ ಅಧರಗಳು, ಆಕೆಯ ಆನಂದವನ್ನು ಬಯಲಿಗೆಳೆಯುತಿದ್ದುವು. ಸರವನ್ನು ಕುತ್ತಿಗೆಗೆ ಹಾಕಿಕೊಂಡಳು. ಚಿನ್ನದ ಹೂವನ್ನು ಮುಡಿದುಕೊಂಡು ಹರ್ಷೋನ್ಮತ್ತಳಾಗಿ ಎಂದಳು—ದೇವರು ನಿಮ್ಮ ಎಲ್ಲಾ ಬಯಕೆಗಳನ್ನೂ ಈಡೇರಿಸಲೆಂದು ಕೋರುವೆ !

ಬಾಲ್ಯದಿಂದಲೂ ಆಕೆಯ ಕಲ್ಪನೆಗಳ ಮಧುರಸ್ವಪ್ನವಾಗಿದ್ದು ಆಕೆಯ ಬಯಕೆಗಳ ಕ್ರೀಡಾರಂಗವಾಗಿದ್ದ ಆ ಅಭಿಲಾಷೆಯು ಇಂದು ಪೂರ್ಣವಾಯಿತು. ಆವಳ ಸಾಧನೆಯು ಇಂದು ಫಲಿಸಿತು; ಬಯಕೆ ಈಡೇರಿತು. ಮಾನಕಿಯು ಅಲ್ಲಿರುತಿದ್ದರೆ, ಎಲ್ಲರಿಗೂ ಮೊದಲು ಅವಳಿಗೆ ಈ ಹಾರವನ್ನು ತೋರಿಸಿ ನಿಮ್ಮ ಹಾರ ನಿಮಗೇ ಇರಲಿ—ಎಂದು ಹೇಳುತಿದ್ದಳು.

ರಮಾನಾಥನಿಗೆ ತನ್ನ ಜೀವನವು ಇಂದು ಸಫಲವಾಯಿತೆಂದು ಗೋಚರಿಸಿತು. ತನ್ನ ಬಾಳುವೆಯಲ್ಲಿ ಇಂದು ಮೊದಲ ಸಲ ಆತನಿಗೆ ವಿಜಯದ ಆನಂದವಾಯಿತು.

ಕೆಳಗೆ ಹೋಗಿ ಅಂಯಾಯವರಿಗೆ ತೋರಿಸಿ ಬರಲೇ ಎಂದು ಜಾಲಪಳು ಕೇಳಿದಾಗ ರಮಾನಾಥನು, ಮೊದಲು ಬೇಡವೆಂದು, ಕೊನೆಗೆ ಉದ್ದರಿ ತಂದ ವಿಷಯ ಪ್ರಸ್ತಾವಿಸಬೇಡವೆಂದು ಹೇಳಿ ಕಳುಹಿಕೊಟ್ಟನು.

ಅರ್ಧ ರಾತ್ರಿ ಕಳೆದಿತ್ತು. ರಮಾನಾಥನು ಆನಂದದಿಂದ ನಿದ್ರೆ ಮಾಡು ತ್ತಿದ್ದನು. ಜಾಲಪಳು ಮಾಳಿಗೆಯ ಮೇಲೆ ಬಂದು ಒಮ್ಮೆ ಬಾನಿನತ್ತ ಕಣ್ಣು ಹಾಕಿದಳು. ಹಿಟ್ಟು ಚೆಲ್ಲಿದಂತೆ ತಿಂಗಳ ಬೆಳಕು ಹರಡಿತ್ತು. ಕಾರ್ತಿಕಮಾಸದ ತಿಂಗಳ ಬೆಳಕು. ಅದರಲ್ಲಿ ಸಂಗೀತದ ಶಾಂತಿ ಇತ್ತು. ಶಾಂತಿಯ ಮಾಧುರ್ಯ ವಿತ್ತು, ಮಾಧುರ್ಯದ ಉನ್ಮಾದವಿತ್ತು. ಜಾಲಪಳು ಕೋಣೆಯೊಳಗೆ ಬಂದು ಆ ಸಂದುಕವನ್ನು ತೆರೆದು ಹಾರವನ್ನೂ ಹೂವನ್ನೂ ಜತನದಿಂದ ಅದರೊ ಳಗಿಟ್ಟಳು. ಆ ಹಿಂದಿನ ಮಣಿಸರಕಿನ ಹಾರವನ್ನು ತುಂಡು ಮಾಡಿ ಬಿಸಾಡಿ ದಳು. ಅದರ ಮಣಿಗಳು ಚೆಲ್ಲಾಪಿಲ್ಲಿಯಾಗಿ ಕೆಳಗಿನ ಗಲ್ಲಿಯಲ್ಲಿ ಹರಡಿ ಕೊಂಡುವು.

## ೧೪

ಆ ದಿನದಿಂದ ಜಾಲಪಳ ಪತಿಸ್ನೇಹದಲ್ಲಿ ಸೇವಾಭಾವದ ಉದಯವಾ ಯಿತು. ಅವನು ಮೀಯಲು ಹೋದಾಗ ಅಲ್ಲಿ ಮೈಯೊರಸುವ ವಸ್ತ್ರವು ತಾನಾಗಿ ದೊರೆಯುತಿತ್ತು. ಎಣ್ಣೆ ಮತ್ತು ಸಾಬೂನು ಬೇಗನೆ ಸಿಗುತಿದ್ದವು. ಆಫೀಸಿಗೆ ಹೊರಡುವ ಸಮಯದಲ್ಲಿ ಜಾಲಪಳು ಅವನ ಬಟ್ಟೆಗಳನ್ನು ಮುಂದೆ ತಂದಿಡುವಳು. ಮುಂಚೆ ಕೇಳಿದ ಮೇಲೆ ಎಲೆಯಡಿಕೆ ಬರುತಿತ್ತು; ಈಗ ಒತ್ತಾಯದಿಂದ ಬಾಯಿಗೆ ಬೀಳುತಿತ್ತು. ಅವನಿಗೆ ಯಾವ ವಿಷಯಕ್ಕೂ ಹೇಳಬೇಕಾಗಿ ಬರುತ್ತಿರಲಿಲ್ಲ. ಎಲ್ಲಿಯ ವರೆಗೆಂದರೆ ಅವನು ಊಟಕ್ಕೆ ಕೂತಾಗ ಅವಳು ಬೀಸಣಿಗೆಯಿಂದ ಬೀಸುತಿದ್ದಳು ಮೊದಲು ಅಡುಗೆ ಮಾಡಲು ಇಷ್ಟವಿಲ್ಲದೆ ಹೋಗುತಿದ್ದಳು. ಬಿಟ್ಟಿ ಕೆಲಸವೆಂಬಂತೆ ಮಾಡುತ್ತಿ ದ್ದಳು. ಈಗ ಪ್ರೇಮದಿಂದ ಅಡುಗೆ ಮಾಡುವಳು ರಮಾನಾಥನಿಗೆ ಹಿಂದಿನ ವಸ್ತುಗಳೇ ಆದರೂ ರುಚಿ ಹೆಚ್ಚಿದಂತೆ ತೋರಿಬರುತಿತ್ತು. ಅವನಿಗೆ ಈ ಮಧುರಸ್ನೇಹದ ಇದಿರು ಆ ಎರಡು ಆಭರಣಗಳು ತುಚ್ಛವಾಗಿ ಕಾಣು ತ್ತಿದ್ದುವು.

ಗಂಗುವಿನ ಅಂಗಡಿಯಿಂದ ರಮಾನಾಥನು ಆಭರಣಗಳನ್ನು ಕೊಂಡ ಮೇಲೆ ಬೇರೆ ವ್ಯಾಪಾರಿಗಳೂ ಅವನನ್ನು ಕಂಡೊಡನೆ ನಮಸ್ಕರಿಸಿ ತಮ್ಮ ಅಂಗಡಿಯೊಳಗೂ ಕಾಲಿರಿಸಿ ಕೃಪೆಮಾಡಬೇಕೆಂದು ಬೇಡಿಕೊಳ್ಳುತಿದ್ದರು. ರಮಾನಾಥನ ಆತ್ಮಸಂಯಮವು ಅವನ ಪ್ರಾಮಾಣಿಕತೆಯನ್ನು ಇಷ್ಟಿಷ್ಟು

ಹೆಚ್ಚಿಸುತ್ತಿದ್ದುದೇ ಹೊರತು ಕಡಮೆ ಮಾಡುತಿದ್ದಿಲ್ಲ. ಒಂದು ದಿನ ಒಬ್ಬ ದಲಾಲನು ಧೈರ್ಯ ಮಾಡಿಕೊಂಡು ರಮಾನಾಥನ ಮನೆಯತನಕವೂ ಬಂದು ಬಿಟ್ಟನು. ರಮಾನಾಥನು ತನ್ನ ಕೈ ಖಾಲಿಯಾಗಿರುವುದೆಂದೂ ಸದ್ಯ ತಾನು ಯಾವ ಆಭರಣವನ್ನೂ ಕೊಳ್ಳುವ ಸ್ಥಿತಿಯಲಿಲ್ಲವೆಂದೂ ಎಷ್ಟು ಬಗೆಯಾಗಿ ಹೇಳಿಕೊಂಡರೂ ದಲಾಲನು ತನ್ನ ವಿನಯವನ್ನು ಬಿಡಲಿಲ್ಲ. ಕೊನೆಗೆ ಹೀಗೆಂದನು—ನಿಮ್ಮಂತಹ ಶ್ರೀಮಂತರ ಹತ್ತಿರ ಹೋಗದೆ ಮತ್ತೆಲ್ಲಿಗೆ ಹೋಗಲಿ? ಬೇರೆಯವರು ನಿಮ್ಮ ದೆಶೆಯಿಂದ ತುಂಬಾ ತುಂಬಾ ಲಾಭವನ್ನು ಹೊಡೆದರೆ ಈ ಬಡವನು ಒಂದು ನಾಲ್ಕು ಕಾಸುಗಳನ್ನು ಒಯ್ಯುವುದಕ್ಕೆ ಅಡ್ಡಿಯೇತಕ್ಕೆ ಒಡೆಯರೆ? ಈವೊತ್ತಂತೂ ನಿಮ್ಮದೇ ಬೋಣಿಗೆಯೆಂದು ನನ್ನ ಮನಸ್ಸು ಹೇಳುತ್ತಿದೆ. ರೂಪಾಯಿಯ ವಿಷಯ ಬಿಡಿ. ಯಾವಾಗ ಕೊಟ್ಟರೂ ನಡೆಯುತ್ತದೆ. ನಾವು ಮನುಷ್ಯನ ಗುಣ ನೋಡುವುದಲ್ಲದೆ ಹಣವನ್ನಲ್ಲ. ಭಗವಂತನ ಇಚ್ಛೆಯಿದ್ದರೆ ನಾನು ಇಲ್ಲಿ ಏನಾದರೂ ವ್ಯಾಪಾರವನ್ನು ಮಾಡದೆ ಏಳುವುದಿಲ್ಲ. ದಲಾಲನು ಪೆಟ್ಟಿಗೆಯಿಂದ ಹೊಸತೆರದ ಎರಡು ಒಡವೆಗಳನ್ನು ತೆಗೆದಿಟ್ಟನು—ಕಲ್ಲು ಹಚ್ಚಿದ ಬಳೆ ಮತ್ತು ಕಿವಿಯ ಕುಟ್ಟೆಕಗಳು, ಎರಡೂ ಅಪೂರ್ವವಾಗಿದ್ದುವು. ರಮಾನಾಥನಿಗೆ ಅವನ್ನು ನೋಡಿ ತನ್ನ ಆಫೀಸಿನ ಹೊತ್ತಾದುದು ಕೂಡಾ ಮರೆತು ಹೋಯಿತು. ಅವೆರಡೂ ಕೇಸುಗಳನ್ನು ಹಿಡಿದುಕೊಂಡು ಒಳಗೆ ನಡದೇ ಬಿಟ್ಟನು ಅವನ ಕೈಯಲ್ಲಿದ್ದ ಕೇಸುಗಳನ್ನು ನೋಡುತ್ತಲೇ ಇಬ್ಬರು ಹೆಂಗುಸರೂ ಅವನ ಮೇಲೆ ಮುಗಿಬಿದ್ದರು. ಅದರ ಥಳಕು, ಅವರ ಗುಣದೋಷ ವಿವೇಚನೆಯ ಶಕ್ತಿಯನ್ನು ಕೂಡಾ ಕುಗ್ಗಿಸುವಷ್ಟರ ಮಟ್ಟಿಗೆ ಅವರನ್ನು ಮೋಹಿಸಿಬಿಟ್ಟಿತು.

ರಮಾನಾಥನು ನಗುತ್ತಾ ಕೇಳಿದನು—ಚೆನ್ನಾಗಿವೆಯಲ್ಲವೆ?

ಜಾಲಪ—ಇಲ್ಲದೆ ಏನು? ಅಮ್ಮಾ ನೀವು ತೆಗೆದುಕೊಳ್ಳಿರಿ.

ರಾಮೇಶ್ವರಿಯು ತನ್ನ ಮನೋವ್ಯಥೆಯನ್ನು ಅಡಗಿಸುವುದಕ್ಕೋಸ್ಕರ ತಲೆ ತಗ್ಗಿಸಿದಳು. ಇಡೀ ಜೀವನವನ್ನು ಮನೆವಾರ್ತೆಯ ಚಿಂತೆಯಲ್ಲಿ ಕಳೆದ ಆ ಜೀವ ಇದನ್ನು ತೊಡುವ ಬಯಕೆಯನ್ನು ಕನಸಿನೊಳಗೂ ಮಾಡಿರಬಹುದೆ? ಪಾಪ, ಆ ದುಃಖಿನಿಯ ಜೀವಮಾನದ ಒಂದು ಬಯಕೆಯೂ ಈಡೇರಿರಲಿಲ್ಲ. ಮಕ್ಕಳನ್ನು ಸಾಕಿ ಸಲಹುವುದಕ್ಕೆ ವೆಚ್ಚವಾಗಿ, ಪತಿಯ ಹತ್ತಿರ ಮತ್ತೆ ಉಳಿಯುತಿದ್ದ ಹಣವೆಂದರೆ ಸೊನ್ನೆ. ಮನೆಯ ಯಜಮಾನಿ

ಯಾದಂದಿನಿಂದ ತೊಡಗಿ ಅವಳ ತಪಶ್ಚರ್ಯೆಗಾರಂಭವಾಗಿತ್ತು; ಅವಳ ಲಾಲಸೆಗಳು ಒಂದಾದ ಬಳಿಕೊಂದು ಮಣ್ಣುಪಾಲಾಗಿ ಹೋದವು. ಅವಳು ಆ ಆಭರಣಗಳ ಕಡೆಯಿಂದ ತನ್ನ ಕಣ್ಣನ್ನು ತಿರುಗಿಸಿದಳು. ಎಲ್ಲಾದರೂ ಅವಳ ವೈರಾಗ್ಯದ ಕಗುಟ್ಟು ಬಯಲಾದರೆ!

ಹೇಳಿದಳು—ಇವನ್ನು ತಕ್ಕೊಂಡು ನಾನೇನು ಮಾಡಲಿ ಮಗೂ? ಉಡುವ ತೊಡುವ ಕಾಲವು ಎಂದೋ ಕಳೆದುಹೋಯಿತು. ಇದು ಎಲ್ಲಿದ್ದು? ಬೆಲೆಯೆಷ್ಟು?

ರಮಾ—ಒಬ್ಬ ಸರಾಫನು ತೋರಿಸಲಿಕ್ಕೆಂದು ತಂದಿದ್ದಾನೆ. ಕ್ರಯ ಹೇಳಲಿಲ್ಲ. ತೆಗೆದುಕೊಳ್ಳಬೇಕಾದರಲ್ಲವೆ ಕ್ರಯದ ವಿಚಾರ?

ಜಾಲಪ—ಹಾಗಿದ್ದರೆ ಇದನ್ನು ಇಲ್ಲಿಗೆ ತಂದುದೇಕೆ?

ಜಾಲಪಳು ಈ ಮಾತುಗಳನ್ನಾಡಿದ ಆವೇಶವನ್ನು ಕಂಡು ರಮಾನಾಥನು ಬೆಪ್ಪಾದನು ಆ ಶಬ್ದಗಳಲ್ಲಿ ತುಂಬಿದ ಉತ್ತೇಜನೆ, ತಿರಸ್ಕಾರಗಳು, ಆತನನ್ನು ಧೈರ್ಯಗೆಡಿಸಿದುವು. ಅವನ್ನು ಹಿಂದೆ ಕೊಡುವ ಸಾಹಸವನ್ನವನು ಮಾಡದಾದನು ಹೀಗೆಂದನು—ಹಾಗಾದರೆ ತೆಗೆದುಕೊಳ್ಳುವುದೇ?

ಜಾಲಪ—ಕೈಯಲ್ಲಿ ಹಣವಿದ್ದರೆ ಹಾಗೆಯೇ ಮಾಡಿರಿ. ಇಲ್ಲವಾದರೆ ಬೇಡ.

ರಾಮೇಶ್ವರಿಯು ಸ್ನೇಹಾಸಕ್ತ ಸ್ವರದಲ್ಲೆಂದಳು- ರೂಪಾಯಿ ಈಗಲೇ ಬೇಕೆಂದು ಅವನು ಚಂಡಿ ಹಿಡಿಯುವುದಿಲ್ಲವಷ್ಟೆ?

ಜಾಲಪ—ಉದ್ದರಿಕೊಟ್ಟರೆ ಒಡ್ಡಿ ಹಚ್ಚದೆ ಬಿಡಲಿಕ್ಕಿಲ್ಲ.

ರಮಾ—ಹಾಗಾದರೆ ಹಿಂದೆ ಕೊಡಲೇನು? ಏನಾದರೊಂದು ನಿಶ್ಚಯಿಸಿ ನನಗೆ ಬೇಗ ಹೇಳಿರಿ. ಬೇಕೆಂದಿದ್ದರೆ ಕೊಳ್ಳುವುದು, ಬೇಡವಾದರೆ ಬಿಡುವುದು. ಅದರಲ್ಲೇನು?

ಜಾಲಪಳಿಗೆ ಈ ಸ್ಪಷ್ಟವಾದ ಮಾತುಗಳು ಸಹನೆಯಾಗಲಿಲ್ಲ. ರಾಮೇಶ್ವರಿಯ ಕಡೆಗೆ ಲಾಲಾಯಿತ ನೇತ್ರಗಳಿಂದ ನೋಡುತ್ತ ಹೇಳಿದಳು—ಹಿಂದೆ ಮಾಡಿರಿ. ಮತ್ತೆ ಹಗಲು-ರಾತ್ರಿ ತಗಾದೆಯ ಚಿಂತೆಗೆ ಯಾಕೆ ಬೀಳಬೇಕು?

ಆದರೆ ರಾಮೇಶ್ವರಿಯು ಮಾತ್ರ ಥಕ್ಕನೆ ಆ ಬಳೆಗಳನ್ನು ತೆಗೆದು ಕೈಗೆ ಹಾಕಿಕೊಂಡೇ ಬಿಟ್ಟಳು. ಮರುಕ್ಷಣ ತನ್ನ ಮನಸ್ಸಿನ ನೀಚತೆಯನ್ನು ಕಂಡು ನಾಚಿದವಳಾಗಿ ಬಳೆಗಳನ್ನು ತೆಗೆಯುವುದರಲ್ಲಿದ್ದಳು. ಆಗ ರಮಾನಾಥ ನೆಂದನು—ಹೇಗೂ ತೊಟ್ಟುಕೊಂಡಾಯಿತಲ್ಲವೆ ಅಮ್ಮಾ, ಇರಲಿ ಬಿಡು. ನಿನಗೆ ನನ್ನ ಕಾಣಿಕೆಯಿದು. ರಾಮೇಶ್ವರಿಯ ಕಣ್ಣುಗಳು ನೀರಿನಿಂದ ತುಂಬಿದುವು. ಮನಸ್ಸಿನೊಳಗೆ ಇಷ್ಟುಕಾಲ ಹುದುಗಿದ್ದ ಬಯಕೆಯು ಇಂದು ತನ್ನ ಪುತ್ರನ ಮಾತೃ ಸ್ನೇಹದ ಫಲವಾಗಿ ಫಲಿಸುವುದರಲ್ಲಿದೆ; ಆದರೆ ಅವನಿನ್ನೂ ಹುಡುಗನು. ಅವನ ಮೇಲೆ ವ್ಯರ್ಥವಾಗಿ ಸಾಲದ ಹೊರೆಯನ್ನು ಹೊರಿಸುವುದೇ ? ರೂಪಾಯಿಗಳನ್ನು ಕೂಡಿಸುವುದಕ್ಕೆಷ್ಟು ಕಷ್ಟವಾ ದೀತೋ ಯಾರು ಬಲ್ಲ ? ಆಗದು, ಆಗದು. ತನ್ನ ಪ್ರಿಯ ಪುತ್ರನನ್ನಾಕೆಯು ಕಷ್ಟದಲ್ಲಿ ಸಿಲುಕಿಸಲಾರಳು. ಕಾತರಸ್ವರದಿಂದ ಹೇಳಿದಳು—ಇಲ್ಲ, ಮಗೂ, ಹೀಗೆಯೇ ತೊಟ್ಟುಕೊಂಡೆನಷ್ಟೆ ತೆಗೆದುಕೊಂಡು ಹೋಗಿ ಹಿಂದೆ ಮಾಡಿ ಬಾರಪ್ಪ.

ಮಾತೆಯ ಬಾಡಿಹೋದ ಮೋರೆಯನ್ನು ಕಂಡು ರಮಾನಾಥನ ಹೃದ ಯವು ಮಾತ್ರ ಪ್ರೇಮದಿಂದ ಕಂಪಿಸಿತು ಸಾಲಕ್ಕೆ ಹೆದರಿಕೊಂಡು ಮಾತೆಯ ಇಷ್ಟು ಸಣ್ಣ ಸೇವೆಯೊಂದನ್ನು ಸಲ್ಲಿಸದೆ ಬಿಡುವದೆ ? ಛೀಃ ಮಾತೆಯ ವಿಷಯದಲ್ಲಿ ತನ್ನ ಕರ್ತವ್ಯವನ್ನು ಮಾಡದಿರುವುದೆ ? ಹೇಳಿದನು—ಹಣದ ಗೊಡವೆ ನಿನಗೇಕಮ್ಮಾ ?

ರಾಮೇಶ್ವರಿಯು ಸೊಸೆಯಕಡೆ ನೋಡಿದಳು. ಸೊಸೆಯ ಮುಖದ ಭಾವವು ಆಕೆಯ ವಿರಸವನ್ನು ಒಡೆದು ಹೇಳುತ್ತಿತ್ತು. ಕೂಡಲೇ ಅವಳು ಬಳೆಯನ್ನು ತನ್ನ ಕೈಯಿಂದ ತೆಗೆದು ಜಾಲಪಳಿಗೆ ನೀಡಿ—ಮಗಳೆ, ಇಕೋ, ನಾನಿದನ್ನು ನಿನಗೆ ಕೊಡುತ್ತಿದ್ದೇನೆ. ನನಗೇಕೆ ಬೇಕು ಈ ಶೃಂಗಾರ ? ನಿನ್ನ ಕೈಗೆ ಇದು ಹೇಗೆ ಒಪ್ಪುತ್ತದೆಂದು ನೋಡುವಾ.

ಜಾಲಪಳು ಮೊದಲು ಬಳೆಗಳ ಕ್ರಯವನ್ನು ರಮಾನಾಥನೇ ಕೊಡ ಬೇಕಾಗುವುದೆಂದೆಣಿಸಿ ಅಡ್ಡಿಮಾಡಿದ್ದಳು. ಅತ್ತೆಯವರು ಸ್ವತಃ ಹಣಕೊಟ್ಟು ತನಗೆ ಒಡವೆ ಹಾಕುವುದಾದರೆ ಆಕೆ ಬಿಟ್ಟಾಳೆ ? ರಮಾನಾ ಥನ ಹತ್ತಿರ ಹೇಳಿದಳು—ಹೋಗಿ ಬೆಲೆಯನ್ನು ಕೇಳಿಬನ್ನಿರಿ

ರಮಾನಾಥನು ಹೊರಬಂದು ಅವುಗಳ ಬೆಲೆ ಕೇಳಿದನು. ಬಳೆಗಳಿಗೆ ಏಳ್ನೂರು, ಕುಟ್ಟಿಕಗಳಿಗೆ ನೂರೈವತ್ತು ರೂಪಾಯಿಗಳು. ಅವನ ತಲೆಯ ಮೇಲೆ ಬೆಟ್ಟವೇ ಜರಿದು ಬಿದ್ದಂತಾಯಿತು. ಅವನು ಬಳೆಗೆ ಮುನ್ನೂರು, ಕುಟ್ಟಿಕಗಳಿಗೆ ಒಂದು ನಾಲ್ಕತ್ತೈವತ್ತು ಇರಬಹುದೆಂದು ಭಾವಿಸಿದ್ದನು. ಒಳಗೆ ಹೋಗಿ ಜಾಲಪಳನ್ನು ಕೇಳಿದನು— ಇದರ ಬೆಲೆ ಎಷ್ಟಿರಬಹುದೆಂದು ಮಾಡಿದ್ದೀರಿ ?

ಜಾಲಪಳು ಕೂಡಲೇ ಎಂದಳು—ಆರುನೂರಕ್ಕೆ ಕಡಿಮೆಯಿರಲಿಕ್ಕಿಲ್ಲ.

ಸರಿ, ರಮಾನಾಥನ ಎಲ್ಲ ಆಟವು ಕೆಟ್ಟು ಹೋಯಿತು. ಕ್ರಯದ ಭಯವನ್ನು ತೋರಿಸಿದರಾದರೂ, ಜಾಲಪಳಿಗೆ ಅಂಜಿಕೆಯಾದೀತೆಂದೆಣಿಸಿದ್ದನು ಆದರೆ ಆರನೂರಕ್ಕೂ, ಏಳ್ನೂರಕ್ಕೂ ವ್ಯತ್ಯಾಸವು ಬಹಳವಿರಲಿಲ್ಲ. ಚರಣದಾಸನಾದರೂ ಇಷ್ಟಕ್ಕಾದರೆ ಒಪ್ಪದಿರನು. ಸ್ವಲ್ಪ ನಾಚಿ ಹೇಳಿದನು— ಕುಟ್ಟಿಕಗಳವೆಷ್ಟಿರಬಹುದು ? ಜಾಲಪಳು ಹೇಳಿದಳು—ಸುಮಾರು ಒಂದು ನೂರು.

ಇಲ್ಲಿಯೂ ರಮಾನಾಥನ ಉಪಾಯವು ಫಲಕಾರಿಯಾಗಲಿಲ್ಲ. ಜಾಲಪಳು ಬೇರೇನನ್ನೋ ಎಣಿಸಿಕೊಂಡು ಹೀಗೆ ಮಾಡುತ್ತಾಳೆಂದು ಆ ಬಡಪಾಯಿಗಾದರೂ ಹೇಗೆ ತಿಳಿಯಬೇಕು ! ದಲಾಲನು ಆರುನೂರಕ್ಕೆ ಒಪ್ಪದಿದ್ದರೆ ಹೇಗಾದರೂ ತಲೆಯುಳಿದೀತೆಂದು ಭಾವಿಸಿದನು. ಆದರೆ ಆ ಎಣಿಕೆಗೂ ಕಲ್ಲು ಬಿತ್ತು. ಜಾಲಪಳು ತಾನೇ ಹೊರಗೆ ಹೋಗಿ, ಆ ಸರಾಫನನ್ನು ಮಾತಾಡಿಸಿ, ಚರ್ಚೆಮಾಡಿ, ಆತನನ್ನು ಎರಡಕ್ಕೂ ಒಟ್ಟಿಗೆ ಏಳ್ನೂರ ಐವತ್ತಕ್ಕೆ ಒಪ್ಪಿಸಿಯೇ ಬಿಟ್ಟಳು. ಒಳಗೆ ಬಂದು ಹೇಳಿದಳು—ಹೇಗೆ, ನೂರೈವತ್ತು ರೂಪಾಯಿ ಉಳಿಸಿದೆನೋ ಇಲ್ಲವೋ. ಇನ್ನೂ ಕಮ್ಮಿಗೆ ಕೇಳಬಹುದಿತ್ತೆಷ್ಟೇ, ಏನೊ, ಎಂದು ನನಗೀಗ ತೋರುತ್ತಿದೆ ಇವರೆಲ್ಲ ಜನರಿಗೆ ಹೀಗೆಯೇ ಮೋಸಮಾಡುವುದು.

ಇಷ್ಟೊಂದು ಭಾರದ ಹೊರೆಯನ್ನು ತನಗೆ ಹೊರಲಾಗದೆಂದು ರಮಾನಾಥನಿಗೆ ಗೊತ್ತಿದ್ದರೂ, ಪರಿಸ್ಥಿತಿಗೆ ವಶನಾಗಿ ಅವನು ಏನೂ ಮಾಡಲಾರದಾದನು. ಜಾಲಪಳು ಆನಂದದಿಂದ ಎರಡನ್ನೂ ಹಿಡಿದುಕೊಂಡು ಮೇಲೆ ಹೋದಳು. ರಮಾನಾಥನು ಚಿಂತೆಯಲ್ಲಿ ತಲೆತಗ್ಗಿಸಿ ಮುಳುಗಿ ನಿಂತಿದ್ದನು.

ಜಾಲಪಳು ತನ್ನ ನಿಜ ಸ್ಥಿತಿಯನ್ನು ಅರಿತಿದ್ದರೂ ಹೀಗೇಕೆ ಮಾಡಿದಳೆಂಬುದು ಆತನಿಗೆ ಬಿಡಿಸಲಾರದ ಸಮಸ್ಯೆಯಾಗಿತ್ತು. ಆದರವನು ಮನಸ್ಸನ್ನು ಸಮಾಧಾನ ಪಡಿಸಿಕೊಂಡನು. ಇದು ತನ್ನ ಪಾಪದ ಪ್ರಾಯಶ್ಚಿತ್ತವೆಂದು ಬಗೆದನು. ಮತ್ತೆ ಮನುಷ್ಯನು ಸಂಪಾದಿಸುವುದಾದರೂ ಏತಕ್ಕೆ ? ಬಾಳುವೆಯು ರೊಟ್ಟಿಗಾಗಿ ಮಾತ್ರ ಅಲ್ಲವಷ್ಟೆ ? ಊಟಮಾಡಿ ರಮಾನಾಥನು ಮೇಲೆ ಹೋದಾಗ ಜಾಲಪಳು ಕುಟ್ಟಿಕಗಳನ್ನು ಕಿವಿಗಳಿಗೆ ಹಾಕಿಕೊಳ್ಳುತ್ತಿದ್ದಳು ಅವನನ್ನು ಕಂಡೊಡನೆ ಹೇಳಿದಳು—ಇವೊತ್ತು ಯಾರೋ ಒಳ್ಳೆಯವರ ಮುಖನೋಡಿ ಎದ್ದಿದ್ದೆನೆಂದು ಕಾಣುತ್ತದೆ. ಎರಡು ಒಡವೆಗಳು ಪುಕ್ಕಟೆ ದೊರೆತಂತಾಯಿತು.

ರಮಾನಾಥನು ವಿಸ್ಮಿತನಾಗಿ ಹೇಳಿದನು—ಪುಕ್ಕಟೆಯೆ ? ರೂಪಾಯಿ ಕೊಡುವುದು ಬೇಡವೆ ?

ಜಾಲಪ—ತಾಯಿಯವರು ಕೊಡುತ್ತಾರೆ.

ರಮಾನಾಥ—ಏನು, ಹಾಗೇನಾದರೂ ಹೇಳಿದಳೆ ?

ಜಾಲಪ—ಅವರು ನನಗೆ ಬಹುಮಾನವಾಗಿತ್ತ ಮೇಲೆ ಅವರೇ ಕೊಡಬೇಕಲ್ಲವೆ ?

ರಮಾ—ಒಹೋ, ಹೀಗೆಂದೆಣಿಸಿ ನೀನಿವನ್ನು ಕೊಂಡುದೆ ? ಅಮ್ಮನಿಗೆ ಕೊಡುವ ಇಷ್ಟವಿರುತ್ತಿದ್ದರೆ ಆಭರಣಗಳು ಕಳವಾದಾಗಲೇ ಕೊಡುತ್ತಿದ್ದಿಲ್ಲವೆ ? ಅವಳ ಹತ್ತಿರ ಆಗ ರೂಪಾಯಿ ಇದ್ದಿಲ್ಲವೇನು ?

ಜಾಲಪಳು ಅಸಮಂಜಸದಲ್ಲಿ ಸಿಲುಕಿ ಹೇಳಿದಳು—ಅದು ನನಗೆ ಹೇಗೆ ತಿಳಿಯಬೇಕು ? ಈಗಾದರೂ ಏನಾಯಿತು ? ಹಿಂದೆ ಕೊಡಬಹುದು. ಯಾರಿಗೆಂದು ಕೊಂಡೆನೋ, ಅವಳ ಮನಸ್ಸಿಗೆ ಬರಲಿಲ್ಲವೆಂದು ಹೇಳಿದರಾಯಿತು.

ಹೀಗೆ ಹೇಳಿ ಅವೆರಡೂ ಒಡವೆಗಳನ್ನು ಪುನಃ ಕೇಸಿನಲ್ಲಿಟ್ಟು, ಬಲು ಕಷ್ಟದಿಂದ ರಮಾನಾಥನಿಗೆ ಕೊಡುವುದಕ್ಕೆಂದು ಕೈ ನೀಡಿದಳು. ಅವಳ ದಶೆಯನ್ನು ಕಂಡು ರಮಾನಾಥನಿಗೆ ಸಹಿಸಲಾಗಲಿಲ್ಲ. ತಗಾದೆಗಳನ್ನು ಸಹಿಸುವುದು, ನಾಚುಗೆಗೊಳಗಾಗುವುದು, ತಲೆ ಮರಸಿಕೊಂಡು ತಿರುಗುವುದು, ಚಿಂತೆಯ ಬೆಂಕಿಯಲ್ಲಿ ಉರಿವುದು, ಇವು ಮೊದಲಾದುವನ್ನೆಲ್ಲಾ ಅವನು

ಸಹಿಸಲು ಸಿದ್ಧನು. ಆದರೆ ಜಾಲಪಳ ಹೃದಯವು ಒಡೆಯುವಂತಹ, ಆಕೆ ತನ್ನನ್ನು ಅಭಾಗಿನಿಯೆಂದು ಭಾವಿಸುವಂತಹ, ಕೆಲಸ ಮಾತ್ರ ಅವನು ಮಾಡಲೊಲ್ಲನು. ಅವನ ಎಲ್ಲ ಅರಿವೂ, ವಿವೇಕವೂ, ಈ ಆಘಾತವನ್ನು ವಿರೋಧಿಸತೊಡಗಿದುವು. ಪ್ರೇಮ ಮತ್ತು ಪರಿಸ್ಥಿತಿಗಳ ಸಂಘರ್ಷದಲ್ಲಿ ಪ್ರೇಮವೇ ಗೆದ್ದಿತು

ಅವನು ಮುಗುಳ್ನಗುತ್ತಾ ಹೇಳಿದನು—ಇರಲಿ, ಬಿಡು. ಒಮ್ಮೆ ತೆಗೆದು ಕೊಂಡಾಯಿತು ಇನ್ನು ಹಿಂದೆಮಾಡುವುದೇಕೆ? ತಾಯಿ ನಮ್ಮನ್ನು ನೋಡಿ ನಕ್ಕಾಳು.

ಜಾಲಪಳು ಮೋಸದ ನಡುಗು ದನಿಯಿಂದ ಹೇಳಿದಳು—ಹಾಸುಗೆಯಿದ್ದಷ್ಟೆ ಕಾಲು ಚಾಚಬೇಕು. ಹೊಸತೊಂದು ವಿಪತ್ತನ್ನು ಕೊಂಡುಕೊಳ್ಳುವುದೇಕೆ?

ರಮಾನಾಥನು ನೀರಿನಲ್ಲಿ ಮುಳುಗುತ್ತಿರುವವನಂತೆ ಹೇಳಿದನು—ದೇವರಿದ್ದಾನೆ. ಹೀಗಂದವನೇ ಕೆಳಗಿಳಿದು ಹೋದನು.

ನಾವು ಒಂದು ಕ್ಷಣಿಕ ಮೋಹ; ಸಂಕೋಚಗಳಿಗಾಗಿ ನಮ್ಮ ಜೀವನದ ಸುಖಶಾಂತಿಯನ್ನು ಹೇಗೆ ಮಣ್ಣುಗೂಡಿಸುತ್ತೇವೆ? ರಮಾನಾಥನು ಜಾಲಪಳ ಮೋಹದಸುಳಿಯನ್ನೆದುರು ಸ್ಥಿರವಾಗಿ ನಿಂತಿರುತ್ತಿದ್ದರೆ, ಸಂಕೋಚಕ್ಕೆ ತಲೆಬಾಗದಿರುತ್ತಿದ್ದರೆ, ಇಬ್ಬರ ಹೃದಯದಲ್ಲೂ ಪ್ರೇಮದ ನಿಜವಾದ ಬೆಳಕು ತುಂಬಿಕೊಂಡಿರುತ್ತಿದ್ದರೆ, ಅವರು ಪಥಭ್ರಷ್ಟರಾಗಿ ಸರ್ವನಾಶದ ದಾರಿಯಲ್ಲಿ ಕಾಲಿಡುತ್ತಿದ್ದಿಲ್ಲ.

## ೧೫

ಈಗ ಜಾಲಪಳು ದಿನವೆಲ್ಲಾ ಮುಖಮುಚ್ಚಿಕೊಂಡು ಉದಾಸಳಾಗಿ ಕುಳಿತುಕೊಳ್ಳುವ ಆ ಏಕಾಂತವಾಸಿ ರಮಣಿಯಾಗಿರಲಿಲ್ಲ. ಈಗವಳಿಗೆ ಮನೆಯಲ್ಲಿ ಕೂಡುವುದೆಂದರೆ ಒಗ್ಗುತ್ತಿರಲಿಲ್ಲ. ಇದುವರೆಗೆ ಬೇರೆ ಉಪಾಯವಿರಲಿಲ್ಲ. ಈಗ ದೇವರ ದಯೆಯಿಂದ ಅವಳ ಹತ್ತಿರ ಆಭರಣಗಳೂ ಇವೆ. ಸರಿ, ಇನ್ನು ಮನೆಯಲ್ಲಿ ನೊಣಹೊಡಕೊಂಡು ಕುಳ್ಳಿರುವುದೇಕೆ? ಗುಟ್ಟಿನಲ್ಲಿ ಸವಿಯನ್ನುಣ್ಣಲು ವಸ್ತ್ರಾಭೂಷಣಗಳು ಸಿಹಿತಿಂಡಿಯೇನೂ ಅಲ್ಲ. ಆಭರಣ

ಗಳನ್ನು ಪೆಟ್ಟಿಗೆಯಲ್ಲಿ ಮುಚ್ಚಿಟ್ಟು ಪ್ರಯೋಜನವೇನು ? ಈಗ ನೆರೆಕೆರೆಯ ಲ್ಲಾಗಲೀ ನೆಂಟರಿಷ್ಟರಲ್ಲಿಗಾಗಲೀ ಕರೆಬಂದರೆ ಜಾಲಪಳು ಅತ್ತೆಯೊಡನೆ ಅವಶ್ಯವಾಗಿಯೂ ಹೋಗುವಳು. ಕೆಲ ದಿನಗಳ ಬಳಿಕ ಅತ್ತೆಯೂ ಬೇಕಾಗಿ ರಲಿಲ್ಲ. ಒಬ್ಬಳೇ ಹೋಗತೊಡಗಿದಳು. ಮತ್ತೆ ಉದ್ದೇಶವಿಲ್ಲದೆಯೂ ಹೋಗ ಬರತೊಡಗಿದಳು. ಅವಳ ರೂಪಲಾವಣ್ಯವೂ, ವಸ್ತ್ರಭೂಷಣಗಳೂ, ಶೀಲ ವಿನಯಗಳೂ, ನೆರೆ ಹೊರೆಯ ಸ್ತ್ರೀಯರ ನಡುವೆ ಅಷ್ಟು ಶೀಘ್ರದಲ್ಲಿ ಅವ ಳನ್ನು ಒಂದು ಸವಾನ ಪದಕ್ಕೆ ಏರಿಸಿಬಿಟ್ಟವು. ಅವಳಿಲ್ಲದೆ ಮಂಡಳಿಯು ಶೂನ್ಯವೇ ಸರಿ. ಅವಳು ಸೇರಿದ ಬಳಿಕ ಆ ಕೇರಿಯ ನಾರೀ ಜೀವನಕ್ಕೆ ಪ್ರಾಣ ಬಂದಂತಾಯಿತು. ಜೀವಕಳೆಯೇರಿತು. ನಿತ್ಯವೂ ಒಂದಿ ಲ್ಲೊಂದು ಸ್ಥಳದಲ್ಲಿ ಕೂಟಕೂಡಿ ಹರಟೆ ನಡೆಯುತ್ತಿತ್ತು. ಇಂತಹ ಕೂಟ ಗಳ ಸತ್ಕಾರದ ಭಾರವೆಲ್ಲಾ ಜಾಲಪಳ ಮೇಲಿರುತ್ತಿತ್ತು. ಗಂಗಾಸ್ನಾನ ಕ್ಕೆಂದು ಎಲ್ಲಾದರೂ ಅವಳು ಹೊರಟರೆ, ಟಾಂಗದ ಖರ್ಚು ಮಾತ್ರ ಗಂಗಾ ತಟದ ಉಪಹಾರದ ವೆಚ್ಚವೆಲ್ಲ ಅವಳ ತಲೆಯ ಮೇಲೆ ಹೇರಲ್ಪಡುತ್ತಿತ್ತು. ಹೀಗೆ ದಿನಾಲೂ ಅವಳಿಗೆ ಎರಡು ಮೂರು ರೂಪಾಯಿಗಳ ಖರ್ಚು ಇದ್ದೇ ಇರುತ್ತಿತ್ತು. ರಮಾನಾಥನು ಆದರ್ಶಪತಿಯಾಗಿದ್ದುದರಿಂದ, ಅವಳು ಪ್ರಾಣ ವನ್ನು ಕೇಳಿದರೂ, ಅದನ್ನವಳ ಚರಣಕ್ಕರ್ಪಿಸಲು ಸಿದ್ಧನಾಗಿದ್ದನು. ಇಷ್ಟು ರೂಪಾಯಿಗಳನ್ನೇನು ಕೇಳುವುದು ? ಜಾಲಪಳು ಅವನೊಡನೆ ಈ ಕೂಟಗಳ ವಿಷಯ ಸವಿಸ್ತಾರವಾಗಿ ಹೇಳುತ್ತಿದ್ದಳು ಸ್ತ್ರೀಸಮಾಜದಲ್ಲಿ ಆಕೆಗೆ ಸಿಗುತಿದ್ದ ಗೌರವವನ್ನು ಕಂಡು ರಮಾನಾಥನಿಗೆ ಹಿಡಿಸಲಾರದಷ್ಟು ಆನಂದವಾಗುತ್ತಿತ್ತು.

ಒಂದು ದಿನ ಈ ಮಂಡಳಿಗೆ ಸಿನೆಮಾ ನೋಡುವ ಹುಚ್ಚು ಹಿಡಿಯಿತು. ಮತ್ತೆ ದಿನವೂ ನೋಡಬೇಕೆಂಬ ಗೀಳು ಹತ್ತಿತು ರಮಾನಾಥನಿಗೆ ಇದು ವರೆಗೆ ಆ ಆಸಕ್ತಿಯೇ ಇದ್ದಿರಲಿಲ್ಲ ಇದ್ದಿದ್ದರೂ ಏನು ಮಾಡಬರುತ್ತಿತ್ತು ? ಈಗ ಕೈಗೆ ನಾಲ್ಕು ಕಾಸು ಬರುತಿತ್ತಿತ್ತು ! ಅದರ ಮೇಲೆ ಜಾಲಪಳ ಹಟ, ಅಂದಮೇಲೆ ಅವನೇಕೆ ಹೋಗದಿದ್ದಾನು ? ಸಿನೆಮಾಗೃಹದ ಸ್ತ್ರೀಸ್ವಾತಂತ್ರ್ಯ ವನ್ನು ಕಂಡು ಜಾಲಪಳಿಗೂ ರಮಾನಾಥನು ತನ್ನೊಡನೆಯೆ ಕೂತಿದ್ದರಾಗ ಬಹುದೆಂದು ತೋರುತ್ತಿತ್ತು ಅಲ್ಲಿ ಆ ಫೇಶನ್ನಿನ ಸ್ತ್ರೀಯರಿಗಿಂತ ಅವಳು ಯಾವ ವಿಷಯದಲ್ಲಿ ಕಡಮೆ ? ರೂಪದಲ್ಲಿ ಕೀಳಲ್ಲ. ಶೃಂಗಾರದಲ್ಲಿ ಅವ

ರೇನೋ ಇವಳಿಗಿಂತ ಬಹಳ ಮೇಲಲ್ಲ. ಹೀಗಿದ್ದ ಮೇಲೆ ಅವಳು ಈ 'ಘೋಷಾ' ಹೆಂಗುಸರೊಂದಿಗೆ ಏಕೆ ಕೂತುಕೊಳ್ಳಬೇಕು ?, ರಮಾನಾಥನು ಅಷ್ಟು ಶಿಕ್ಷಿತನಲ್ಲದಿದ್ದರೂ ದೇಶ-ಕಾಲದ ಪ್ರಭಾವದಿಂದ ಉದಾರನಾಗಿದ್ದನು. ಆದರೆ ಸ್ವಲ್ಪ ಚಿಕ್ಕವನಾಗಿದ್ದಾಗ ಪರ್ದಾಪದ್ಧತಿಯ ಅನನ್ಯ ಭಕ್ತನಾಗಿದ್ದನು. ತಾಯಿಯು ಗಂಗಾಸ್ನಾನಕ್ಕೆ ಹೋಗಿದ್ದಾಗ 'ಪಂಡ'ರೊಡನೆಯೂ ಆಕೆಗೆ ಮಾತಾಡ ಬಿಡುತ್ತಿದ್ದಿಲ್ಲ. ಮನೆಯಲ್ಲಿ ಗಂಡಸರ ಕೂಡಿಗೆ ಎಲ್ಲಿಯಾದೂ ತಾಯಿಯ ನಗುವು ಕೇಳಿಸಿದರೆ, ಒಳಗೆ ಬಂದು—"ನಿಮಗಿಷ್ಟಾದರೂ ಮರ್ಯಾದೆ ಇಲ್ಲವೆ ?" ಎಂದು ಗದರಿಸುತ್ತಿದ್ದನು ದೊಡ್ಡವನಾದ ಮೇಲೆ ಅವನ ಅಭಿಪ್ರಾಯವು ಸ್ವಲ್ಪ ಬದಲಾಯಿತು ಏಕೆ, ಅದು ವೈದೆಗೆಯಿತೆಂದೇ ಹೇಳಬೇಕು ಅಷ್ಟು ಮಾತ್ರವಲ್ಲ; ಜಾಲಪಳ ಸೌಂದರ್ಯ ಲೋಕವು ಅವನಿಗೆ ಉತ್ತೇಜನವನ್ನು ಕೊಡುತ್ತಿತ್ತು. ಜಾಲಪಳು ಕರಿಮುಸುಡಿಯ ಕುರೂಪಿಯಾಗಿರುತ್ತಿದ್ದರೆ, ಆತನವಳನ್ನು ಒತ್ತಾಯಪಡಿಸಿ ಪರ್ದೆಯೊಳಗಿರಿಸುತ್ತಿದ್ದನು. ಜಾಲಪಳಂಥ ಅನನ್ಯ ಸುಂದರಿಯೊಡನೆ ತಿರುಗಿದರೆ, ಆನಂದ ಮಾತ್ರವಲ್ಲ. ಗೌರವವೂ ಇತ್ತು. ಅಲ್ಲಿಯ ಸಭ್ಯ ಸಮಾಜದಲ್ಲಿ ರೂಪ-ಸಿಂಗಾರಗಳಲ್ಲಿ ಜಾಲಪಳನ್ನು ಸರಿಗಟ್ಟುವ ಮಹಿಳೆಯೊಬ್ಬಳೂ ಇರಲಿಲ್ಲ. ಹಳ್ಳಿಯ ಹುಡುಗಿಯಾದರೂ ಪೇಟೆಯಲ್ಲೇ ಹುಟ್ಟಿ ಬೆಳೆದವಳಂತೆ ತೋರುತ್ತಿದ್ದಳು. ಇನ್ನು ಕೊರತೆಯೆಂದರೆ ಸ್ವಲ್ಪ ಇಗ್ಲೀಷಿನದು; ಆ ಕೊರತೆಯನ್ನು ರಮಾನಾಥನು ನೀಗಿಸಬಲ್ಲನು.

ಆದರೆ ಈ ಪರ್ದೆಯ ಬಂಧನವು ಹೇಗೆ ಜಾರೀತ ? ಸಿನೆಮಾಗೃಹದಲ್ಲಿ ಪರಿಚಯದವರೆಷ್ಟೋ ಮಂದಿ ಇರುತಿದ್ದರು. ಅವರು ಅವನನ್ನು ಜಾಲಪಳೊಡನೆ ಕಂಡರಾದರೆ ನಗಲಿಕ್ಕಿಲ್ಲವೆ ? ಕೊನೆಗೊಂದು ದಿನ ಅವನು ಸಮಾಜದೆದುರು ಟೊಂಕಕಟ್ಟಿ ನಿಲ್ಲುವ ನಿರ್ಧಾರವನ್ನು ಮಾಡಿಯೇ ಬಿಟ್ಟನು. ಜಾಲಪಳ ಹತ್ತಿರ ಹೇಳಿದನು, ಇವತ್ತು ಸಿನೆಮಾಗೃಹದಲ್ಲಿ ನಾನೂ ನೀನೂ ಒಟ್ಟೊಟ್ಟಿಗೇ ಕುಳಿತುಕೊಳ್ಳಬೇಕು.

ಜಾಲಪಳ ಹೃದಯದಲ್ಲಿ ಆನಂದದ ನಡುಕ ಉಂಟಾಯಿತು. ಹಾರ್ದಿಕ ಆನಂದದ ಬೆಳಕು ಮುಖದಲ್ಲೆಲ್ಲಾ ಹರಡಿತು. ಹೇಳಿದಳು—ನಿಜವೆ ! ಬೇಡಪ್ಪಾ, ಜತೆಗಾತಿಯರು ಜೀವದಿಂದ ಬಿಡಲಿಕ್ಕಿಲ್ಲ !

ರಮಾ—ಹೀಗೆ ಹೆದರಿದರೆ ಮತ್ತೆ ಏನೂ ಮಾಡಬರುವಂತಿಲ್ಲ. ಮುಖ ಮಡಗಿಸಿಕೊಂಡು ಹೆಂಗುಸರು ಪರ್ದೆಯ ಅಡ್ಡದಲ್ಲಿ ಕೂಡಬೇಕೆಂಬದು ಇದೆಂತಹ ಕಪಟವೇಷ ?

ಈ ರೀತಿ ಈ ವಿಷಯವೂ ತೀರಿತು. ಮೊದಲನೆಯದಿನ ಸ್ವಲ್ಪ ಸಂಕೋಚವಾಯಿತು. ಆದರೆ ಎರಡನೆಯದಿನ ಧೈರ್ಯವಾಯಿತು. ಕೆಲವು ದಿನಗಳಲ್ಲಿ ರಮಾನಾಥ—ಜಾಲಪರು ಪಾರ್ಕಿನಲ್ಲಿ ಅಡ್ಡಾಡುವುದನ್ನೂ ಕಾಣ ಬಹುದಾಗಿತ್ತು.

ಜಾಲಪಳು ಮುಗುಳ್ನಗುತ್ತ ಹೇಳಿದಳು—ಎಲ್ಲಾದರೂ ತಂದೆಯವರು ನೋಡಿದರೆ ?

ರಮಾ—ನೋಡಿದರೇನು ? ಚಿಂತಿಲ್ಲ !

ಜಾಲಪ—ನನಗೆ ನಾಚುಗೆಯಿಂದ ಕಾಲುಗಳೇ ಏಳಲಿಕ್ಕಿಲ್ಲ.

ರಮಾ—ಇದೀಗಲೇ ಆದರೆ ನನಗೂ ನಾಚಿಕೆಯಾದೀತು. ಆದರೆ ತಂದೆಯವರು ಈಕಡೆ ಬರುವುದು ಅಪ್ಪುರಲ್ಲಿಯೆ ಇದೆ ಬಿಡು.

ಹತ್ತೆಂಟು ದಿನಗಳಲ್ಲಿ ಜಾಲಪಳು ಹೊಸ ಮಹಿಳಾ ಸಮಾಜದಲ್ಲಿಯೂ ತನ್ನ ಪ್ರಭಾವವನ್ನು ಹಬ್ಬಿಸಿಬಿಟ್ಟಳು. ಒಬ್ಬ ಕುಶಲ ಭಾಷಣಕಾರನು ಮೊದ ಲನೆಯ ಸಲ ಪರಿಷತ್ತಿನ ವೇದಿಕೆಯಮೇಲೆ ಬರುವಂತೆ, ಅವಳು ಆ ಸಮಾಜವನ್ನು ಪ್ರವೇಶಿಸಿದಳು. ಪಂಡಿತರು ಅವನನ್ನು ಉಪೇಕ್ಷೆಮಾಡಬೇ ಕೆಂದು ಎಷ್ಟು ಯತ್ನಿಸಿದರೂ ಅವನ ಪ್ರತಿಭೆಯ ಮುಂದೆ ಅವರ ತಲೆ ತಗ್ಗು ವುದು ಜಾಲಪಳು ಕೂಡಾ ಹಾಗೆಯೇ—' ಬಂದಳು, ಕಂಡಳು, ಗೆದ್ದಳು ' ಕುಲೀನ ಮಹಿಳೆಯರ ಲಕ್ಷಣವೆಲ್ಲಾ ಆಕೆಯ ಸೌಂದರ್ಯದಲ್ಲಿದ್ದುವು. ಮೊದಲ ದಿನವೇ ಒಬ್ಬಳು ಮಹಿಳೆಯು ಜಾಲಪಳಿಗೆ ಉಪಾಹಾರಕ್ಕೆ ನಿಮಂತ್ರ ಣವನ್ನು ಕೊಟ್ಟಳು. ಜಾಲಪಳಿಗೆ ಮನಸ್ಸಿಲ್ಲದಿದ್ದರೂ, ಅದನ್ನು ಸ್ವೀಕರಿಸದಿ ರಲಾಗಲಿಲ್ಲ.

ಇಬ್ಬರೂ ಅಲ್ಲಿಂದ ಹೊರಟಾಗ ರಮಾನಾಥನು ಚಿಂತಿತಸ್ವರದಿಂದ ಹೇಳಿದನು—ಹಾಗ್ಗಾದರೆ ನಾಳೆ ಇವಳ ' ಟೀಪಾರ್ಟಿಗೂ ' ಹೋಗಬೇಕಾಗಿ ಬಂತಲ್ಲ ?

ಜಾಲಪ—ಏನು ಮಾಡಲಿ ? ಬರುವುದಿಲ್ಲವೆಂದು ಹೇಳಲಿಕ್ಕಾಗಲಿಲ್ಲ.

ರಮಾ—ಬೆಳಗ್ಗೆ ನಿನಗೊಂದು ಒಳ್ಳೆಯ ಸೀರೆಯನ್ನು ತಂದುಕೊಡುವೆನು.

ಜಾಲಪ—ಯಾಕೆ, ನನ್ನ ಹತ್ತಿರ ಸೀರೆಗಳಿಲ್ಲವೇನು ! ಒಂದು ಕ್ಷಣಕ್ಕಾಗಿ ಐವತ್ತು, ಅರುವತ್ತು ರೂಪಾಯಿ ನೀರಿಗೆ ಹಾಕುವುದು ಬೇಡ.

ರಮಾ—ನಿನ್ನ ಹತ್ತಿರ ಒಳ್ಳೆಯ ಸೀರೆ ಎಲ್ಲಿದೆ ? ಅವಳ ಸೀರೆಯನ್ನು ನೋಡಿದ್ದೀಯಾ ? ನಿನಗೂ ಅಂಥದ್ದೇ ತರುವೆನು.

ಜಾಲಪಳು—ವಿವಶತೆಯಿಂದ ಹೇಳಿದಳು—ನಾನಾಕೆಗೆ ಸಮಯವಿಲ್ಲವೆಂದು ಸ್ಪಷ್ಟವಾಗಿ ಹೇಳಬೇಕಿತ್ತು.

ರಮಾ— ಆಮೇಲೆ ಇವಳಿಗೂ ಸತ್ಕಾರ ಮಾಡಬೇಕು.

ಜಾಲಪ—ಹಾಗಾದರೆ ಇದೊಂದು ಹೊಸವಿಪತ್ತು ಕೊರಳಿಗೆ ಕಟ್ಟಿಕೊಂಡಂತಾಯಿತು.

ರಮಾ—ವಿಪತ್ತುಗಿಪತ್ತೇನೂ ಇಲ್ಲ. ನಮ್ಮ ಮನೆ ಮಾತ್ರ ಇದಕ್ಕನುಕೂಲವಾಗಿಲ್ಲ. ಕುರ್ಚಿ, ಮೇಜು 'ಚಾ-ಸೆಟ್' ಇವೆಲ್ಲವನ್ನು ರಮೇಶಬಾಬುಗಳಲ್ಲಿಂದ ತರಬಹುದು. ಆದರೆ ಮನೆಗೆ ಏನು ಮಾಡುವುದು ?

ಜಾಲಪ—ಯಾಕೆ ? ನಾವು ಸತ್ಕಾರ ಮಾಡಲೇ ಬೇಕೆ ?

ರಮಾನಾಥನು ಈ ಒರಟು ಮಾತಿಗೆ ಉತ್ತರವನ್ನೇ ಕೊಡಲಿಲ್ಲ. ಅವನಿಗೀಗ ಜಾಲಪಳಿಗೆ ಒಂದು ಸೀರೆ, ಒಂದು ಜತೆ ಚಪ್ಪಲಿ, ಮತ್ತು ಒಂದು ಕೈಗಡಿಯಾರವನ್ನು ತರುವ ಚಿಂತೆ ಹತ್ತಿತು. ದಿನ ಹೋದಹಾಗೆ ತನ್ನ ಖರ್ಚು ಹೆಚ್ಚುತ್ತಿದ್ದು ಗಂಗುವಿನ ಬಾಕಿಯಲ್ಲಿ ಒಂದು ಪೈ ಕೂಡಾ ಸಲ್ಲಿಸಲಿಕ್ಕಾಗದಿದ್ದರೂ, ಜಾಲಪಳನ್ನು ಸಾಧಾರಣ ವೇಷದಲ್ಲಿ ಟೀಪಾರ್ಟಿಗೆ ಕಳುಹಿಸುವುದೆಂದರೆ ಆತನಿಂದ ಆಗದ ಕೆಲಸವಾಗಿತ್ತು. ತನ್ನ ಪೂರ್ವ ಪುಣ್ಯದ ಪ್ರಭಾವದಿಂದ ಇಂತಹ ರೂಪವತಿಯು ತನಗೆ ಪತ್ನಿಯಾಗಿ ಸಿಕ್ಕಿರುವಳು. ತಿನ್ನುವ, ಉಡುವ ಕಾಲವಾದರೂ ಈಗಲೇ ಅಲ್ಲವೆ ? ಯೌವನದ ಸುಖವನ್ನು ಈಗ ಅನುಭವಿಸದಿದ್ದರೆ ಮುದುಕರಾದಮೇಲೆ ಅನುಭವಿಸಲಾಗುವುದೆ ? ಸೀರೆ ಮತ್ತು ಗಡಿಯಾರದ ಗೀಳು ಆತನನ್ನು ಹಿಡಿದು ಬಿಟ್ಟಿತ್ತು. ಮರುದಿನ ಅವೆರಡನ್ನು ತಂದೇ ಬಿಟ್ಟನು.

ಜಾಲಪಳು ಸಿಡಿಮಿಡಿಗೊಂಡು ಹೇಳಿದಳು—ಇವುಗಳು ಬೇಡವೆಂದು ನಾನು ನಿನ್ನೆಯೇ ನಿಮಗೆ ಹೇಳಿರಲಿಲ್ಲವೆ? ನೂರೈವತ್ತಕ್ಕೆ ಕಡಮೆಯಾಗದು.

ರಮಾ—ನೂರೈವತ್ತೇ? ಅಷ್ಟು ದರ್ಬಾರಿನವನಲ್ಲ ನಾನು.

ಜಾಲಪ—ನೂರೈವತ್ತಕ್ಕಿಂತ ಕಮ್ಮಿಗೆ ಬರಲಿಕ್ಕಿಲ್ಲವೆಂದು ನಾನು ಮತ್ತೊಮ್ಮೆ ಅನ್ನುತ್ತೇನೆ.

ಜಾಲಪಳು—ಕೈಗೆ ಗಡಿಯಾರವನ್ನು ಕಟ್ಟಿಕೊಂಡು, ಸೀರೆಯನ್ನು ಮಾತ್ರ ಮುಗ್ಧ ನೇತ್ರಗಳಿಂದ ನೋಡತೊಡಗಿದಳು—

ರಮಾ ನಿನ್ನ ಕೈಯಲ್ಲಿ ಈ ಗಡಿಯಾರವು ಹೇಗೆ ಒಪ್ಪುತ್ತಿದೆ? ನನ್ನ ರೂಪಾಯಿಗಳು ವಸೂಲಾದಂತೆಯೇ ಆಯಿತು.

ಜಾಲಪ—ನಿಜವಾಗಿ ಹೇಳಿರಿ ಎಷ್ಟು ತಾಗಿತು?

ರಮಾ—ಸತ್ಯ ಹೇಳಲಿ? ನೂರಪ್ಪತ್ತೈದು ರೂಪಾಯಿ. ೭೫ ರ ಸೀರೆ ಹತ್ತರ ಚಪ್ಪಲಿ, ಮತ್ತು ಐವತ್ತರ ಗಡಿಯಾರ.

ಜಾಲಪ—ಹೋ, ನೂರೈವತ್ತಕ್ಕೆ ಬಹಳ ದೂರವಿಲ್ಲ. ಆವಳು ನನ್ನನ್ನು ಯಾಕೆ ಆಮಂತ್ರಿಸಿದಳೋ? ನಾನಿನ್ನು ಹೊರಗೆ ಹೋಗುವುದೇ ಇಲ್ಲ.

ರಮಾನಾಥನು ಇದೇ ಚಿಂತೆಯಲ್ಲಿದ್ದನು. ಆದರೆ ತನ್ನ ಭಾವನೆಯನ್ನು ಪ್ರಕಟಿಸಿ ಜಾಲಪಳ ಆನಂದಕ್ಕೆ ಅಡ್ಡಿ ತರುವುದೆ? ಹೇಳಿದನು—ಹುಂ, ಎಲ್ಲಾ ಕೊಟ್ಟು ತೀರಿಸುವೆನು

ಜಾಲಪ—ಎಲ್ಲಿಂದ ತೀರಿಸುವಿರಿ? ಹೇಳಿ ಸ್ವಲ್ಪ ಒಂದು ಕಾಸೂ ಉಳಿವುದಿಲ್ಲ. ತೀರುವದಂತೆ. ತೀರುವುದು. ಮನೆಯ ಖರ್ಚು ತಂದೆಯವರು ನೋಡುವುದರಿಂದ ಎಲ್ಲಾ ಆಟಸಾಗುತ್ತದೆ. ಇಲ್ಲವಾದರೆ ಗೊತ್ತಾಗುತ್ತಿತ್ತು. ಆಭರಣ ಮತ್ತು ಸೀರೆಗಳಿಲ್ಲದಿದ್ದರೆ ನಾನು ಪ್ರಾಣತೆಗೆದುಕೊಳ್ಳುವೆನೆಂದು ಎಣಿಸಿದಿರಾ ಏನು? ಇವುಗಳನ್ನು ಹಿಂದೆ ಮಾಡಿ ಬನ್ನಿರಿ.

ರಮಾನಾಥನು ಪ್ರೇಮಪೂರ್ಣ ನೇತ್ರಗಳಿಂದ ಹೇಳಿದನು—ಇವುಗಳನ್ನು ಇಟ್ಟುಕೊ. ಇನ್ನು ಮೇಲೆ ನಿನ್ನನ್ನು ಕೇಳದೆ ಯಾವ ವಸ್ತುವನ್ನೂ ತರುವುದಿಲ್ಲ.

ಸಾಯಂಕಾಲ ಅವರಿಬ್ಬರೂ ಆ ಮಹಿಳೆಯ ಮನೆಯ ಕಡೆಗೆ ತೆರಳಿದರು. ಅವಳು ತನ್ನ ಬಂಗಲೆಯ ನಂಬರು ಮಾತ್ರ ಹೇಳಿದ್ದರೂ, ಮನೆಯನ್ನು ಹುಡುಕುವುದು ಕಷ್ಟವಾಗಲಿಲ್ಲ. ಬಾಗಿಲಲ್ಲೆ, "ಇಂದು ಭೂಷಣ, ಎಡ್ವೋಕೇಟ್, ಹೈಕೋರ್ಟು" ಎಂದು ಬರೆದ ಹಲಿಗೆಯು ಹಚ್ಚಿದ್ದಿತು. ಆ ಮಹಿಳೆಯು ಹೈಕೋರ್ಟಿನ ಹೆಸರಾಂತ ವಕೀಲರಾದ ಪಂಡಿತ ಇಂದ್ರ ಭೂಷಣರ ಪತ್ನಿಯೆಂದೂ ಈಗ ರಮಾನಾಥನಿಗೆ ಅರಿವಾಯಿತು. ಆರು ತಿಂಗಳ ಹಿಂದೆ ಅಂತಹ ಗಣ್ಯಮಾನ್ಯ ವ್ಯಕ್ತಿಗಳೊಡನೆ ತನಗೆ ಪರಿಚಯವಾದೀತೆಂಬ ಕಲ್ಪನೆಯಾದರೂ ರಮಾನಾಥನಿಗಿದ್ದಿತೆ ? ಹಾಗಾದರೆ ಇದೆಲ್ಲಾ ಯಾರದೆಸೆಯಿಂದ ? ಜಾಲಪನ ಕಾರಣವಾಗಿ, ಅವನು ಕಾಶಿಯ ಅತಿ ಪ್ರಖ್ಯಾತ ವಕೀಲರ ಅತಿಥಿಯಾದನು.

ತುಂಬಾ ಜನರು ಬಂದಿರಬಹುದೆಂದು ರಮಾನಾಥನು ಎಣಿಸಿದ್ದನು. ಆದರೆ ಅಲ್ಲಿ ವಕೀಲರ ಮತ್ತು ಅವರ ಪತ್ನಿ ರತನಳ ಹೊರತು ಬೇರಾರೂ ಇದ್ದಿಲ್ಲ. ರತನಳು ಇವರಿಬ್ಬರನ್ನು ನೋಡುತ್ತಲೇ, ಹಸ್ತಲಾಘವವನ್ನಿತ್ತು ಒಳಗೆ ಕರೆದುಕೊಂಡು ಹೋದಳು ತನ್ನ ಪತಿಗೆ ಇವರ ಪರಿಚಯುವನ್ನು ಮಾಡಿಸಿದಳು. ವಕೀಲರು ಆರಾಮುಕುರ್ಚಿಯಲ್ಲೇ ಕುಳಿತು, ಇಬ್ಬರು ಅತಿಥಿಗಳಿಗೂ ಹಸ್ತಲಾಘವಮಾಡಿ, ನಗುತ್ತಾ ಹೇಳಿದರು -- ಕ್ಷಮಿಸಬೇಕು ಸ್ವಾಮೀ, ನನ್ನ ಆರೋಗ್ಯ ಚೆನ್ನಾಗಿಲ್ಲ. ನೀವು ಇಲ್ಲಿ ಯಾವುದಾದರೂ ಆಫೀಸಿನಲ್ಲಿದ್ದೀರಾ ?

ರಮಾನಾಥನು ನಾಚಿಕೊಳ್ಳುತ್ತ ಹೇಳಿದನು—ಹೌದು, ಮುನಿಸಿಪಲ್ ಆಫೀಸಿನಲ್ಲಿದ್ದೇನೆ. ಇತ್ತೀಚೆಗೆ ಸೇರಿದ್ದು. ಲಾ ಕಲಿಯಲು ಹೋಗಬೇಕೆಂದು ಮನಸ್ಸಿತ್ತು. ಆದರೆ ಇಲ್ಲಿಯ ಹೊಸ ವಕೀಲರ ಸ್ಥಿತಿಯನ್ನು ನೋಡಿ ಧೈರ್ಯ ಬರಲಿಲ್ಲ.

ರಮಾನಾಥನು ತನ್ನ ಮಹತ್ವವನ್ನು ಹೆಚ್ಚಿಸಿಕೊಳ್ಳಲು ಒಂದು ಸ್ವಲ್ಪ ಸುಳ್ಳು ಹೇಳುವುದು ಅನುಚಿತವೆಂದು ಬಗೆಯಲಿಲ್ಲ ಇದ್ದುದನ್ನು ಇದ್ದ ಹಾಗೆ ತಾನು ೨೫ ರೂಪಾಯಿಗಳ ಕ್ಲಾರ್ಕನಾಗಿದ್ದೇನೆಂದು ಹೇಳಿದರೆ ವಕೀಲರು ಅವನ ಹತ್ತಿರ ಮಾತಾಡುವುದೂ ಅವಮಾನಕರವೆಂದು ತಿಳಿಯುತಿದ್ದರು. ಹೇಳಿದರು—ನಮ್ಮ ಮಾರ್ಗವನ್ನು ಹಿಡಿಯದಿದ್ದುದು ಒಳ್ಳೆಯದೇ

ಆಯಿತು. ಅಲ್ಲಾದರೆ ಇನ್ನೆರಡು ವರ್ಷಗಳಲ್ಲಿ ಏನಾದರೂ ಮೇಲಿನ ಕೆಲಸ ದೊರೆಯದಿರದು; ಇಲ್ಲಿ ಹತ್ತಾರು ವರುಷಗಳಾದರೂ, ಒಂದು 'ಕೇಸು' ಕೂಡಾ ದೊರೆಯದೆ ಹೋಗುವ ಸಂಭವವಿದೆ.

ಜಾಲಪಳಿಗೆ ರತನಳು ವಕೀಲರ ಮಗಳೇ ಅಥವಾ ಪತ್ನಿಯೇ ಎಂಬ ಸಂದೇಹವು ಇನ್ನೂ ತೊಲಗಲಿಲ್ಲ. ವಕೀಲರ ಪ್ರಾಯ ಆರುವತ್ತಕ್ಕೆ ಕಡಮೆ ಯಿರಲಿಕ್ಕಿಲ್ಲ. ಹಣೆಯ ನಿರಿಗೆಗಳೂ, ಜೋಲು ಬಿದ್ದ ಕೆನ್ನೆಗಳೂ, ಈ ಯಾತ್ರಿ ಕನು ಸಂಸಾರಯಾತ್ರೆಯಿಂದ ಬಳಲಿರುವನೆಂಬುದನ್ನು ಸೂಚಿಸುತ್ತಿದ್ದುವು. ಆರಾಮಕುರ್ಚಿಯಲ್ಲಿ ಮಲಗಿದ್ದ ಅವರನ್ನು ನೋಡುವಾಗ ಹಲವು ವರ್ಷಗ ಳಿಂದ ಹಾಸಿಗೆ ಹಿಡಿದುಬಿದ್ದಿರುವ ರೋಗಿಯಂತೆ ತೋರುತ್ತಿದ್ದರು. ಉದ್ದ ವಾದ ಮೂಗು, ಎತ್ತರವಾದ ಹಣೆ, ದೊಡ್ಡ ದೊಡ್ಡ ಕಣ್ಣು, ಇವುಗಳಿಂದ ಅಭಿಮಾನವು ಹೊರಹೊಮ್ಮುತ್ತಿತ್ತು. ಯಾರೊಡನೆಯೂ ಹೆಚ್ಚು ಮಾತನಾ ಡುವವರಲ್ಲವೆಂದು ಅವರ ಮುಖಚರ್ಯೆಯಿಂದ ಹೇಳಬಹುದಾಗಿತ್ತು. ಇದಕ್ಕೆ ವಿರೋಧವಾಗಿ ರತನಳು ಬಹಳ ನಿಗರ್ವಿಯಾಗಿದ್ದಳು. ಎಲ್ಲರೊಡನೆಯೂ ಮಾತಾಡಬೇಕು, ಎಲ್ಲರೊಡನೆಯೂ ನಗಬೇಕು, ಸೌಂದರ್ಯವು ಅಷ್ಟೊಂದು ಇಲ್ಲದಿದ್ದರೂ, ಉರುಟು ಮುಖವೂ, ಚಿಕ್ಕ ಚಿಕ್ಕ ಕಣ್ಣುಗಳೂ ಉಳ್ಳ ಆಕೆ ಯನ್ನು ನೋಡುವಾಗ ರಾಣಿಯಂತೆ ತೋರುತಿದ್ದಳು. ಜಾಲಪಳು ಅವಳ ಯೆದುರು ಗುಲಾಬಿಯ ಮುಂದೆ ಅರಳಿದ ಮಲ್ಲಿಗೆಯನ್ನಿಟ್ಟರೆ ಹೇಗೋ ಹಾಗೆ ಕಾಣುತಿದ್ದಳು.

ಅವರು ಚಾ ಕುಡಿದರು, ಹಣ್ಣು ತಿಂದರು; ಆದರೆ ವಕೀಲರೆದುರು ನಗುವುದಕ್ಕೂ, ಮಾತಾಡುವುದಕ್ಕೂ, ಅತಿಥಿಗಳಿಬ್ಬರಿಗೂ ಸಂಕೋಚವಾಗು ತಿತ್ತು. ಹೌದು, ವಿನೋದಪ್ರಿಯ ಮುದುಕನೆದುರಾಗಿದ್ದರೆ ಆನಂದಪಡ ಬಹುದಿತ್ತು. ಇಂತಹ ಅರಸಿಕ, ನಿರ್ಜೀವ ಮನುಷ್ಯರು ಯುವಕರಾದರೂ ಬೇರೆಯವರು ಅವರೆದುರು ಹೆಣವಾಗಬೇಕಾದೀತು. ಬಹಳ ಆಗ್ರಹ ಮಾಡಿದಮೇಲೆ ವಕೀಲರು ಎರಡು ಗುಟುಕು ಚಾ ಕುಡಿದರು. ದೂರದಲ್ಲಿ ಕೂತು ತಮಾಶೆ ನೋಡುತ್ತಿದ್ದರು. ಆದುದರಿಂದ ರತನಳು, "ತೋಟದ ಕಡೆಗೆ ಅಡ್ಡಾಡಿ ಬರೋಣ" ವೆಂದು ಜಾಲಪಳ ಹತ್ತಿರ ಹೇಳಿದಾಗ ಜಾಲ ಪಳಿಗೆ ಹೋದ ಜೀವ ಮರಳಿ ಬಂದಂತಾಯಿತು. ರಮಾನಾಥನಾದರೂ

ಪಂಜರದಲ್ಲಿ ಸಿಕ್ಕುಬಿದ್ದ ಹಕ್ಕಿಯಂತೆ ಇವರಿಬ್ಬರೂ ಕೋಣೆಯಿಂದ ಹೊರ ಹೋಗುವುದನ್ನು ಕಂಡು ನಿಟ್ಟುಸಿರು ಬಿಟ್ಟನು. ಈ ವಿಪತ್ತೊಂದು ಇಲ್ಲಿ ತನಗಾಗಿ ಕಾದಿತ್ತೆಂದು ಆತನಿಗೆ ತಿಳಿದಿದ್ದರೆ ಅವನು ಇಲ್ಲಿಗೆ ಬರುವ ಮಾತೆತ್ತುತ್ತಿರಲಿಲ್ಲ

ವಕೀಲ ು ತಮ್ಮ ದೇಹಸ್ಥಿತಿಯನ್ನು ವಿವರಿಸತೊಡಗಿದರು. ಜೀರ್ಣ ಶಕ್ತಿಯೇ ಕುಂದಿದೆ. ಹಾಲು ಕೂಡಾ ಜೀರ್ಣವಾಗುತ್ತಲಿಲ್ಲ. ಏನಾದರೂ ಜೀರ್ಣಕಾರಿ ಔಷಧವನ್ನು ಸೇವಿಸಬಾರದೆ?' ಎಂದು ರಮಾ ನಾಥನು ಕೇಳಿದಾಗ, ವಕೀಲರ ಬಾಯಿಯಿಂದ ಡಾಕ್ಟರುಗಳ ಮೇಲೆ ಕಟು ವಾದ ಟೀಕೆ ಹೊರಬಿದ್ದಿತು.

ಹೀಗೆ ಇಲ್ಲಿ ಆರೋಗ್ಯ ಶಾಸ್ತ್ರದ ಖಂಡನವಾಗುತಿದ್ದಾಗ, ಅತ್ತ ಇಬ್ಬರು ಮಹಿಳೆಯರ ನಡುವೆ ಗಾಢ ಸ್ನೇಹದ ಮಾತುಗಳು ನಡೆಯುತ್ತಿ ದ್ದುವು.

ರತನಳು ಮೆಲ್ಲಗೆ ನಗುತ್ತ ಕೇಳಿದಳು—ನನ್ನ ಪತಿದೇವನನ್ನು ಕಂಡು ನಿನಗೆ ಆಶ್ಚರ್ಯವಾಗಿರಬಹುದಲ್ಲವೆ?

ಜಾಲಪಳಿಗೆ ಆಶ್ಚರ್ಯಮಾತ್ರವಲ್ಲ, ಭ್ರಾಂತಿಯೂ ಆಗಿತ್ತು, ಹೇಳಿ ದಳು—ವಕೀಲರ ಎರಡನೆ ಮದುವೆಯಾಗಿರಬೇಕು?

ರತನ—ಹೌದು, ಈಗ್ಗೈದು ವರುಷಗಳಾದುವಷ್ಟೆ. ಇವರ ಮೊದಲ ಹೆಂಡತಿಯು ತೀರಿ ಇಪ್ಪತ್ತೈದು ವರುಷಗಳಾದುವು. ಆಗ ಯಾರು ಹೇಳಿ ದರೂ ಇವರು ಮದುವೆಯಾಗಲೊಪ್ಪಲಿಲ್ಲ. ಒಬ್ಬ ಮಗನಿದ್ದನು; ಈಗ ಐದು ವರುಷಗಳ ಹಿಂದೆ ಅವನೂ ತೀರಿ ಹೋದನು. ಆ ಮೇಲೆ ಮದುವೆ ಮಾಡಿ ಕೊಳ್ಳುವುದು ಅವಶ್ಯಕವಾಯಿತು. ನನ್ನ ಸೋದರ ಮಾವನವರು ನನ್ನನ್ನು ಸಾಕಿದ್ದರು. ಇವರಿಂದ ಏನು ಹಣ ತಕ್ಕೊಂಡೋ ಅಥವಾ ಇವರ ಸಜ್ಜನತೆ ಯನ್ನು ಕಂಡೋ, ನನ್ನನ್ನಿವರಿಗೆ ಕೊಟ್ಟುಬಿಟ್ಟರು. ನಾನಂತೂ ಇದು ದೈವೇಚ್ಛೆಯೆಂದೇ ತಿಳಿಯುತ್ತೇನೆ. ಏನೇ ಇರಲಿ, ನಾನು ಇಲ್ಲಿಗೆ ಬಂದಾಗಿ ನಿಂದ ದಪ್ಪ ಬೆಳೆಯುತ್ತಿದ್ದೇನೆ. ನನಗೆ ಸಂತಾನವಾಗುವುದಿಲ್ಲವೆಂದು ಡಾಕ್ಟ ರರ ಹೇಳಿಕೆ. ತಂಗೀ, ನನಗೇನೂ ಸಂತಾನಾಪೇಕ್ಷೆ ಇಲ್ಲ; ಆದರೆ ನನ್ನ

ಪತಿಯು ನನ್ನ ಅವಸ್ಥೆಯನ್ನು ಕಂಡು ಬಹಳ ದುಃಖಿತರಾಗಿರುತ್ತಾರೆ. ಅವರೆಲ್ಲ ರೋಗಗಳ ಮೂಲವೂ ನಾನೇ. ಇಂದು ನನಗೆ ದೇವರೊಂದು ಸಂತಾನವನ್ನು ದಯಪಾಲಿಸಿದರೆ, ಇವರ ರೋಗವೆಲ್ಲಾ ಹಾರಿ ಹೋಗುವುದು. ಸಪುರವಾಗಬೇಕೆಂದು ಎಷ್ಟೋ ಯತ್ನ ಮಾಡುತ್ತಿದ್ದೇನೆ, ಟಬ್‌ಸ್ನಾನ ಮಾಡುತ್ತಿದ್ದೇನೆ, ದಿನಾಲು ನಾಲ್ಕಾರು ಮೈಲು ನಡೆಯುತ್ತಿದ್ದೇನೆ, ಹಾಲು ತುಪ್ಪ ಮುಟ್ಟುವುದಿಲ್ಲ, ಅರೆ ಊಟ ಮಾಡುತ್ತೇನೆ. ಎಷ್ಟು ಕಷ್ಟ ಸಹಿಸಲಿಕ್ಕೆ ಸಾಧ್ಯವಿದೆಯೋ ಅಷ್ಟನ್ನೂ ಮಾಡುತ್ತೇನೆ. ಆದರೇನು ? ದಿನದಿಂದ ದಿನಕ್ಕೆ ಮತ್ತೂ ಮತ್ತೂ ತೋರಬೆಳೆಯುತ್ತಿದ್ದೇನೆ. ಏನು ಮಾಡುವುದೆಂದೇ ತಿಳಿಯುವುದಿಲ್ಲ ನೋಡು.

ಜಾಲಪ—ವಕೀಲರಿಗೆ ನಿನ್ನ ಮೇಲೆ ಸಿಟ್ಟಿರಬಹುದು.

ರತನ—ಇಲ್ಲ ತಂಗೀ ಇಲ್ಲ. ಮನೋವ್ಯಥೆಯನ್ನು ಪ್ರಕಟಿಸುವ ಒಂದು ಶಬ್ದವಾದರೂ ಅವರ ಬಾಯಿಯಿಂದ ಬರುವುದಿಲ್ಲ. ಆದರೆ ಈ ಚಿಂತೆಯೇ ಅವರನ್ನು ಕೊಲ್ಲುತ್ತಿದೆಯೆಂದು ನನಗೆ ಗೊತ್ತಿದೆ. ನಾನೇನು ಮಾಡಬಲ್ಲೆ, ಹೇಳು. ನಾನೆಷ್ಟು ಖರ್ಚು ಮಾಡಿದರೂ, ಹೇಗಿದ್ದರೂ ಅವರು ಚಾ, ಚೂ, ಎನ್ನುವುದಿಲ್ಲ. ಸಿಕ್ಕಿದುದನ್ನು ತಂದು ನನ್ನ ಕೈಯಲ್ಲಿ ಕೊಟ್ಟು ಬಿಡುತ್ತಾರೆ. ಎರಡು ಚಪಾತಿಯಿದ್ದರೆ ಊಟ ಮುಗಿಯಿತು. ಬಹಳ ಒತ್ತಾಯ ಮಾಡಿದರೆ ನಾಲ್ಕು ದ್ರಾಕ್ಷೆ ತಿನ್ನುತ್ತಾರೆ. ಅಷ್ಟೆ. ನನಗೆ ಅವರ ಮೇಲೆ ಕರುಣೆ ತೋರುತ್ತದೆ. ನನ್ನ ಕೈಯಿಂದ ಎಷ್ಟು ಸಾಧ್ಯವೋ, ಅಷ್ಟು ಮಟ್ಟಿಗೆ ಅವರ ಸೇವೆ ಮಾಡುತ್ತಿದ್ದೇನೆ.

ಜಾಲಪ—ಇಂತಹ ಪುರುಷನನ್ನು ದೇವತೆಯನ್ನಬೇಕು. ಮೂವತ್ತು ವರುಷ ಒಂಟಿಯಾಗಿರುವುದು, ಎಲ್ಲ ಗಂಡಸರಿಂದಾಗುವ ಕೆಲಸವಲ್ಲ. ಒಬ್ಬಳು ಸತ್ತರೆ, ಹತ್ತನೆಯದಿನವೇ ಎರಡನೆಯ ಹೆಂಡತಿ ಮನೆಗೆ ಬಂದಂತಾಯಿತು.

ರತನ—ಹೌದವ್ವಾ, ದೇವತೆಯೇನೋ ಹೌದು. ಈಗಲೂ ಆ ಹೆಂಡತಿಯ ಮಾತು ಬಂದರೆ ಅಳತೊಡಗುತ್ತಾರೆ. ನೋಡಲಿಕ್ಕೆ ಎಷ್ಟು ಕಠೋರರೆಂದು ತೋರುತ್ತಾರೋ, ಹೃದಯವು ಅಷ್ಟೇ ಕೋಮಲ. ಎಷ್ಟೋ ಅನಾಥರಿಗೆ, ವಿಧವೆಯರಿಗೆ, ಬಡವರಿಗೆ ಸಹಾಯಮಾಡುತ್ತಿರುತ್ತಾರೆ. ನಿನ್ನ ಈ ಬಳೆಗಳು ಬಹಳ ಚೆನ್ನಾಗಿವೆ.

ಜಾಲಪ—ಒಳ್ಳೆಯ ಕೆಲಸಗಾರನೊಬ್ಬನಿಂದ ಮಾಡಿಸಿದ್ದು.

ರತನ—ವಕೀಲರಿಗೆ ಈ ಆಭರಣಗಳ ಸಲುವಾಗಿ ತೊಂದರೆ ಕೊಡಲು ನನಗೆ ಇಷ್ಟವಿಲ್ಲ. ಒಳ್ಳೆಯ ಸೊನ್ನೆಗಾರರು ಯಾರೆಂದು ನನಗೆ ಗೊತ್ತೇ ಇಲ್ಲ. ರಮಾನಾಥ ಬಾಬುಗಳ ಹತ್ತಿರ ಹೇಳಿ ನನಗೂ ಇಂತಹ ಬಳೆಗಳನ್ನು ಮಾಡಿಸಿಕೊಡುವಂತೆ ಕೇಳುವೆಯಾ ?

ಜಾಲಪ—ಆಯಿತು, ಹೇಳುತ್ತೇನೆ.

ರತನ—ನೀನು ಬಂದುದು ಬಹಳ ಆನಂದವಾಯಿತು. ಇಲ್ಲಿ ಒಬ್ಬಳೇ ಕೂತು ಬೇಸರವಾಗುವುದು. ತಾಸರ್ಧತಾಸು ಇತ್ತ ಕಡೆ ಬಂದು ಹೋಗವ್ವಾ.

ಜಾಲಪ—ನನಗೆ ಇದಕ್ಕಿಂತ ಹೆಚ್ಚಿನದೇನು ಬೇಕು ?

ರತನ—ನಾನು ಮೋಟರು ಕಳುಹಿಸುತ್ತೇನೆ.

ಜಾಲಪ—ಏನೂ ಬೇಡ ಟಾಂಗಗಳು ಬಾಡಿಗೆಗೆ ಸಿಕ್ಕುತ್ತವೆ.

ರತನ—ಯಾಕೋ, ಏನೋ, ನಿನ್ನನ್ನು ಇಲ್ಲಿಂದ ಹೋಗಲಿಕ್ಕೆ ಬಿಡಬಾರದೆಂದೇ ಮನಸ್ಸು ನುಡಿಯುತ್ತಿದೆ. ರಮಾನಾಥ ಬಾಬುಗಳು ನಿನ್ನನ್ನು ಪಡೆದುದಕ್ಕೆ ತಮ್ಮ ಅದೃಷ್ಟವನ್ನು ಹೊಗುಳುತ್ತಿರಬೇಕು.

ಜಾಲಪ—ಹೊಗಳುವುದಂತಿರಲಿ. ಮಾತುಮಾತಿಗೆ ಗದರಿಸುತ್ತಾರೆ.

ರತನ—ಸತ್ಯವೆ ! ನಾನು ನಂಬುವುದಿಲ್ಲ. ಇದೋ, ರಮಾನಾಥ ಬಾಬುಗಳೇ ಬಂದರು. ಬಳೆಯ ವಿಷಯ ಅವರನ್ನು ಕೇಳಿಬಿಡು.

ಜಾಲಪ—(ರಮಾನಾಥನ ಹತ್ತಿರ) ಚರಣದಾಸನ ಹತ್ತಿರ ಹೇಳಿದರೆ ಈ ಬಳೆಯನ್ನು ಎಷ್ಟು ದಿನಕ್ಕೆ ಮಾಡಿಸಿಕೊಟ್ಟಾನು ? ರತನಕ್ಕನಿಗೂ ಇಂತಹುದೇ ಬೇಕಂತೆ.

ರಮಾನಾಥನು ತತ್ಪರತೆಯಿಂದ ಹೇಳಿದನು—ಹಾಂ, ಹಾಂ, ಏಕೆ ಮಾಡಿಸಬಾರದು ?

ರತನ—ಇದಕ್ಕೇನು ಬಿತ್ತು ?

ಜಾಲಪ—ಎಂಟು ನೂರು.

ರತನ—ಅದೇನು ದೊಡ್ಡ ಮಾತಲ್ಲ. ಇದರ ಹಾಗೆಯೇ ಆಗಬೇಕು.

ರಮಾ—ಆಯಿತು. ಹೇಳುತ್ತೇನೆ.

ರತನ—ಆದರೆ ಸದ್ಯ ನನ್ನ ಹತ್ತಿರ ಹಣವಿಲ್ಲ.

ರೂಪಾಯಿಯ ವಿಷಯವಾಗಿ ಗಂಡಸು ಹೆಂಗಸರೊಡನೆ ಏನನ್ನೂ ಹೇಳಲಾರನು. ತನ್ನ ಹತ್ತಿರ ಇಲ್ಲವೆಂದು ಹೇಳುವುದೆ? ಛೀ, ಎಂತಹ ನಾಚಿಕೆಗೇಡು ಅದಕ್ಕಿಂತ ಸಾಯುವುದೇ ಲೇಸು. ಜಾಲಪಳಿಗೆ ಪತಿಯ ಆರ್ಥಿಕ ದಶೆಯ ಜ್ಞಾನವು ಚೆನ್ನಾಗಿದ್ದರೂ, ರಮಾನಾಥನು ಈಗೆಲ್ಲಿಯಾದರೂ ನೆವ ಹೇಳಿ ತಪ್ಪಿಸುವನೋ ಎಂದು ಆಕೆ ಹೆದರಿದಳು. ರಮಾನಾಥನು ನಿಶ್ಚಿಂತೆಯಿಂದ—ಹಾಂ, ಹಾಂ, ರೂಪಾಯಿಯ ವಿಷಯ ಬಿಡಿ. ಎಂದು ಬೇಕೋ ಅಂದು ಕೊಡಿ—ಎಂದು ಹೇಳಿದಾಗ ಆಕೆಗೆ ಸಂತಸವಾಯಿತು

ರತನ—ಹಾಗಾದರೆ ಯಾವಾಗ ಸಿಕ್ಕೀತು ?

ರಮಾ—ಇವೊತ್ತೇ ಹೇಳುತ್ತೇನೆ. ಆದರೆ ಒಂದು ಹದಿನೈದು ದಿನಗಳಾದರೂ ಬೇಕಾದೀತು.

ಜಾಲಪ—ಬರುವ ಭಾನುವಾರ ನಮ್ಮಲ್ಲಿಯೇ ಚಾಕ್ಕೆ ಬಂದುಬಿಡಿ.

ರತನಳು ನಿಮಂತ್ರಣವನ್ನು ಆನಂದದಿಂದ ಸ್ವೀಕರಿಸಿದಳು. ಇವರಿಬ್ಬರೂ ಮನೆಗೆ ಬಂದು ಸೇರಿದಾಗ ಸಂಜೆಯಾಗಿತ್ತು; ರಮೇಶಬಾಬುಗಳು ಬಂದಿದ್ದರು. ಜಾಲಪಳು ನೇರವಾಗಿ ಒಳಗೆ ಹೋದಳು. ರಮಾನಾಥನು ರಮೇಶಬಾಬುಗಳ ಹತ್ತಿರ ಹೋಗಿ ಹೇಳಿದನು—ಬಂದು ಬಹಳ ಹೊತ್ತಾಯಿತೆ ?

ರಮೇಶ—ಇಲ್ಲ. ಈಗ ಬಂದೆನಷ್ಟೆ. ವಕೀಲರಲ್ಲಿಗೆ ಹೋಗಿದ್ದೆಯಾ ?

ರಮಾ—ಹೌದು. ಮೂರು ರೂಪಾಯಿ ಕೈಬಿಟ್ಟು ಹೋಯಿತು.

ರಮೇಶ—ತೊಂದರೆ ಇಲ್ಲ. ದೊಡ್ಡವರ ಹತ್ತಿರ ಹೋಗುತ್ತ ಬರುತ್ತ ಇರುವುದು ಕೆಟ್ಟುದಲ್ಲ. ಅದರಿಂದ ದೊಡ್ಡ ದೊಡ್ಡ ಕೆಲಸಗಳಾಗುತ್ತವೆ.

ರಮಾ— ನಾಡಿದ್ದು ಆದಿತ್ಯವಾರ ಇಲ್ಲಿ ಬರಲಿಕ್ಕೆ ಹೇಳಿಬಂದಿದ್ದೇನೆ

ರಮೇಶ—ಸರಿ, ಹಾಗಾದರೆ. ಬೇಕಾದರೆ ನಾನೂ ಬರುವೆನು. ನನ್ನ ಒಬ್ಬ ದೂರದ ಅಳಿಯ ಕೆಲಸವಿಲ್ಲದೆ ಸುಮ್ಮಗಿದ್ದಾನೆ. ಈ ವಕೀಲರ ಪರಿಚಯದಿಂದ ಏನಾದರೂ ಆಗುತ್ತದೋ ನೋಡುವ. ನೀನು ಅವರಿಗೆ ನನ್ನ 'ಇಂಟ್ರೊಡಕ್ಷನ್' (ಪರಿಚಯ) ಮಾಡಿಸಿ ಬಿಟ್ಟರೆ ಸಾಕು. ಮತ್ತೆಲ್ಲಾ ನಾನು ನೋಡಿಕೊಳ್ಳುತ್ತೇನೆ. ಟೀ-ಸೆಟ್, ಹೂವಿನ ಪಾತ್ರೆ, ಎಲ್ಲಾ ನಮ್ಮಲ್ಲಿವೆ. ಕುರ್ಚಿ, ಮೇಜು ಎಲ್ಲ ನಮ್ಮಿಂದಲೇ ತರಬಹುದು. ಹೊತ್ತು ತರಲು ಆ ಮೂಸಲಚಂದನಿಗೆ ಹೇಳುತ್ತೇನೆ. ಕೆಲಸ ಆಗಬೇಕೆಂದಿದ್ದರೆ ಎಲ್ಲಾ ಮಾಡಬೇಕು.

ರಮಾ—ಹಾಗಾದರೆ ಕೇಳಬೇಕೆ? ನನಗಂತೂ ಬಹಳ ಚಿಂತೆಯಿತ್ತು.

ರಮೇಶ— ಚಿಂತೆಯೆಲ್ಲಾ ಕಟ್ಟಿಡು. ಅದಿರಲಿ, ಅತಿಥಿಗಳೆಷ್ಟು ಜನ?

ರಮಾ –ವಕೀಲರ ಪತ್ನಿ, ಮತ್ತು ವಕೀಲರು ಬಂದರೆ ಅವರು–ಇಬ್ಬರಿಗಿಂತ ಹೆಚ್ಚಿಲ್ಲ.

ರಮೇಶ—ಅದು ಒಳ್ಳೆಯದೇ ಆಯಿತು. ನಮಗೆ ವಕೀಲರ ಪತ್ನಿ ಬಂದರೆ ಸಾಕು. ಅವರನ್ನು ಹಿಡಿದರೆ ಎಲ್ಲ ಕೆಲಸವಾಗುತ್ತದೆ.

ಇಬ್ಬರೂ ಟೀಪಾರ್ಟಿಗೆ ಬೇಕಾದ ಸಾಮಾನುಗಳ ಯಾದಿಯನ್ನು ತಯಾರು ಮಾಡಿದರು. ಮೂರನೆಯ ದಿನದಿಂದಲೇ ರಮೇಶಬಾಬುಗಳು ಸಾಮಾನುಗಳನ್ನು ಸಂಗ್ರಹಿಸಲು ಆರಂಭಿಸಿದರು. ದಯಾನಾಥರು ಸಹ ಇವರ ತಯಾರಿಯಲ್ಲಿ ಭಾಗಿಯಾಗುತಿದ್ದರು. ಬಂದು ಸಾಮಾನುಗಳನ್ನು ಸರಿಯಾಗಿ ಇಡುವುದು ಅವರ ಕೆಲಸ. ಆಫೀಸಿಗೆ ಹೋಗುವ ಮೊದಲು, ಬಂದ ಮೇಲೆ, ಈ ಮೂವರೊಳಗೂ ಯಾವ ಚಿತ್ರವನ್ನು ಎಲ್ಲಿ ತೂಗಿಸುವುದು, ಯಾವ ರತ್ನಗಂಬಳಿಯನ್ನು ಎಲ್ಲಿ ಹಾಸುವುದು, ಯಾವ ಹೂವಿನ ಪಾತ್ರೆಯನ್ನು ಎಲ್ಲಿ ಇಡುವುದು ಎಂಬ ವಿಷಯ ವಿವಾದ ನಡೆಯುತ್ತಿತ್ತು. ಒಂದು ದಿನ ಕೋಣೆಯೊಳಗೆ ಕನ್ನಡಿಯನ್ನು ಎಲ್ಲಿಡಬೇಕೆಂಬುದರ ಮೇಲೆ

ಚರ್ಚೆಗಾರಂಭವಾಯಿತು. ದಯಾನಾಥರು ಆ ಕೋಣೆಯಲ್ಲಿ ಕನ್ನಡಿಯ ಅಗತ್ಯವಿಲ್ಲವೆಂದೆನ್ನುತ್ತಿದ್ದರು. ಹಿಂದಿನ ಕೋಣೆಯಲ್ಲಿಡಬೇಕೆಂದು ಅವರ ಅಭಿಪ್ರಾಯ. ರಮೇಶಬಾಬುಗಳು ಅದನ್ನು ವಿರೋಧಿಸುತಿದ್ದರು. ರಮಾನಾಥನು ಉಭಯ ಸಂಕಟಕ್ಕೊಳಗಾಗಿ ಅವರ ನಡುವೆ ನಿಂತಿದ್ದನು. ಯಾರ ಪಕ್ಷವನ್ನು ವಹಿಸುವುದು ? ಯಾರನ್ನು ಬಿಡುವುದು ?

ದಯಾನಾಥನು—ನಾನು ಇಂಗ್ಲಿಷರ ಮನೆಯ ನೂರಾರುಡ್ರಾಯಿಂಗ್ ರೂಮುಗಳನ್ನು ನೋಡಿದ್ದುಂಟು. ಎಲ್ಲಿಯೂ ಕನ್ನಡಿಯನ್ನು ಕಾಣಲಿಲ್ಲ. ಕನ್ನಡಿಯಿರಬೇಕಾದುದು ಶೃಂಗಾರದ ಕೊಠಡಿಯಲ್ಲಿ. ಇಲ್ಲಿ ಕನ್ನಡಿಯನ್ನಿಡುವುದೆಂದರೆ ಅಸಂಗತವಾದ ಮಾತು.

ರಮೇಶ--ನಾನು ಇಂಗ್ಲಿಷರ ನೂರಾರು ಕೊಠಡಿಗಳನ್ನು ಕಂಡಿಲ್ಲವಾದರೂ, ನಾನು ನೋಡಿದ ನಾಕಾರು ಕೊಠಡಿಗಳಲ್ಲಿ ಕನ್ನಡಿಯಿದ್ದುದನ್ನು ಅವಶ್ಯವಾಗಿಯೂ ಕಂಡಿದ್ದೇನೆ. ಆದರೆ ಈ ಸಣ್ಣ ಸಣ್ಣ ವಿಷಯಗಳಲ್ಲಿಯೂ ನಾವು ಇಂಗ್ಲಿಷರ ಅನುಕರಣೆ ಮಾಡಬೇಕೆ ? ನಾವು ಇಂಗ್ಲಿಷರಲ್ಲ. ಹಿಂದೀಯರು ಹಿಂದುಸ್ಥಾನೀ ಶ್ರೀಮಂತರ ಕೋಠಡಿಗಳಲ್ಲಿ ದೊಡ್ಡ ದೊಡ್ಡ ನಿಲುಗನ್ನಡಿಗಳಿರುತ್ತವೆ, ನಿಜ. ಆದರೆ ಅದೆಲ್ಲಾ ಕೆಟ್ಟು ಹೋದ ಶ್ರೀಮಂತರ ಕತೆಯಾಯಿತು. ಅಂಥವರು ಶೃಂಗಾರದಲ್ಲಿ, ಮಾತಿನಲ್ಲಿ, ಚಾ-ಶರಾಬಿನಲ್ಲಿ ಪಿಂಗಾಣಿ ಪಾತ್ರೆಗಳಲ್ಲಿ-ಇಷ್ಟೇ ಏಕೆ ? ತೋರಿಕೆಯ ಎಲ್ಲಾ ವಿಷಯಗಳಲ್ಲಿ ಇಂಗ್ಲಿಷರೂ ನಾಚುವಂತೆ ಅವರನ್ನು ಅನುಕರಿಸುತ್ತಾರೆ. ಆದರೆ ಯಾವ ಗುಣಗಳು ಇಂಗ್ಲಿಷರನ್ನು ಇಂಗ್ಲಿಷರನ್ನಾಗಿ ಮಾಡಿವೆಯೋ, ಯಾವುದರ ದೆಸೆಯಿಂದ ಅವರು ಪ್ರಪಂಚವನ್ನು ಆಳುತ್ತಿದ್ದಾರೋ, ಆ ಗುಣಗಳ ಸೋಂಕು ಕೂಡಾ ಈ ಮೂರ್ಖರಿಗೆ ತಟ್ಟುವುದಿಲ್ಲ. ಏನು, ನಿಮಗೂ ಈ ಮುದಿಪ್ರಾಯದಲ್ಲಿ ಇಂಗ್ಲಿಷನಾಗುವ ಹುಚ್ಚು ಹಿಡಿಯಿತೆ ?

ದಯಾನಾಥರು ಇಂಗ್ಲಿಷರ ಅನುಕರಣೆಯನ್ನು ಸ್ವಲ್ಪವೂ ಮೆಚ್ಚುತ್ತಿದ್ದಿಲ್ಲ. ಈ ಟೀಪಾರ್ಟಿಯು ಕೂಡಾ ಅವರಿಗೆ ಹಿತವಿರಲಿಲ್ಲ. ನಾಲ್ಕು ಜನ ದೊಡ್ಡ ಮನುಷ್ಯರೊಡನೆ ಪರಿಚಯ ಬೆಳೆಯಿಸಬಹುದೆಂದಷ್ಟೆ, ಅವರಿಗೆ ಇದರಲ್ಲಿದ್ದ ಸಂತೋಷ. ಅವರ ಜೀವಮಾನದಲ್ಲಿ ಅವರೆಂದೂ ಕೋಟನ್ನು

ಧರಿಸಿದವರಲ್ಲ. ಆದರೆ ಈಗವರಿಗೆ ತನ್ನ ಪಕ್ಷವನ್ನು ಸಮರ್ಥಿಸಬೇಕಾಗಿ ಬಂತು—ಹಿಂದೀ ಶ್ರೀಮಂತರ ಮನೆಯಲ್ಲಿ ಮೇಜು, ಕುರ್ಚಿಗಳಿರುವುದಿಲ್ಲ; ನೆಲವಿರುವುದು. ಕುರ್ಚಿ ಮೇಜುಗಳನ್ನು ತಂದು ಹಾಕಿ, ಈ ಕೋಣೆ ಯನ್ನು ಇಂಗ್ಲಿಷ ಕೋಣೆಯನ್ನಾಗಿ ಮಾಡಿ, ಈಗ ನಿಲುಗನ್ನಡಿಯ ವಿಷಯ ದಲ್ಲಿ ಮಾತ್ರ ಹಿಂದಿಯರ ದೃಷ್ಟಾಂತ ಕೊಡುತ್ತಿದ್ದೀರಿ. ಒಂದೋ ಹಿಂದಿಯ ನಾಗಿರಿ, ಇಲ್ಲ ಆಂಗ್ಲರಾಗಿರಿ, ಅರ್ಧ ಅದು, ಅರ್ಧ ಇದು, ಹೀಗೆ ಮಾತ್ರ ಸಲ್ಲದು. ಕೋಟು ಪೆಂಟುಗಳ ಮೇಲೆ ಗಾಂಧೀ ಟೊಪ್ಪಿಯಿಡುವುದು ಅಷ್ಟೇನೂ ಸೊಗಯಿಸದು.

ರಮೇಶಬಾಬುಗಳು ತಮ್ಮ ತರ್ಕದೆದುರು ದಯಾನಾಥರ ಬಾಯಿಕಟ್ಟಿ ಹೋಗುವುದೆಂದೆಣಿಸಿದ್ದರು. ಆದರೆ ಈಗ ಅವರಲ್ಲಿ ವಿಪರೀತವೇ ಆಯಿತು. ಅಷ್ಟರಲ್ಲಿ ಹೊರಗಿನಿಂದ ಮೋಟರೊಂದು ಬಂದು ನಿಂತಿತು ರತನಬಾಯಿ ಯವರು ಕೆಳಗಿಳಿದರು. ಇದನ್ನು ಕಂಡೊಡನೆ ತಮ್ಮ ಗುಟ್ಟೆಲ್ಲಾ ಎಲ್ಲಿ ಬಯ ಲಾಗುವುದೋ ಎಂಬ ಭಯದಿಂದ ಮೂವರೂ ಬೇಗ ಬೇಗ ಹೊರಗೆ ಬಂದರು. ರಮಾನಾಥನು ಮುಂದೆ ಬಂದು ಹಸ್ತಲಾಘವವನ್ನೀಯುತ್ತಾ ಹೇಳಿದನು— ಬನ್ನಿರಿ, ರತನಬಾಯಿಯವರೇ, ಇವರು ನಮ್ಮ ತೀರ್ಥರೂಪರು, ಇವರು ನಮ್ಮ ಮಿತ್ರ ರಮೇಶಬಾಬುಗಳು—ರತನಳು ಇಬ್ಬರಿಗೂ ದೂರದಲ್ಲಿ ಕೈಮು ಗಿದು ರಮಾನಾಥನ ಹತ್ತಿರ ಹೇಳಿದಳು—ನನಗೆ ಹೆಚ್ಚು ಅವಕಾಶವಿಲ್ಲ. ನಿಮ್ಮ ಹತ್ತಿರ ಸ್ವಲ್ಪ ಮಾತಾಡಬೇಕಿತ್ತು.

ಹೀಗೆ ಹೇಳುತ್ತಾ ರಮಾನಾಥನೊಡನೆ ಮೋಟರಿನವರೆಗೆ ಬಂದು ಮೆಲ್ಲಗೆ ಹೇಳಿದಳು—ಸರಾಫನ ಹತ್ತಿರ ಹೇಳಿರುವಿರಲ್ಲವೆ ?

ರಮಾ—ಹೌದು ಆಗುತ್ತಾ ಇದೆ.

ರತನ—ಆದಿನ ನಿಮ್ಮ ಹತ್ತಿರ ರೂಪಾಯಿ ಸಿಗದೆಂದು ಹೇಳಿದ್ದೆನಲ್ಲವೆ? ಆದರೆ ನಿಮಗೆ ಕಷ್ಟವಾದೀತೆಂದೆಣಿಸಿ ಒಬ್ಬರ ಹತ್ತಿರ ತೆಗೆದುಕೊಂಡೆ. ಎಂಟು ನೂರು ಬೇಕಲ್ಲವೆ ?

ರಮಾನಾಥನು ಮನಸ್ಸು ಮಾಡಿದ್ದರೆ ಅಷ್ಟನ್ನೂ ತೆಗೆದುಕೊಳ್ಳಬಹು ದಿತ್ತು. ಆದರೆ ಸರಳತೆ ಮತ್ತು ವಿಶ್ವಾಸದ ಮೂರ್ತಿಯಾದ ರತನಳಿಗೆ

ಚರ್ಚೆಗಾರಂಭವಾಯಿತು. ದಯಾನಾಥರು ಆ ಕೋಣೆಯಲ್ಲಿ ಕನ್ನಡಿಯ ಅಗತ್ಯವಿಲ್ಲವೆಂದೆನ್ನುತ್ತಿದ್ದರು. ಹಿಂದಿನ ಕೋಣೆಯಲ್ಲಿಡಬೇಕೆಂದು ಅವರ ಅಭಿಪ್ರಾಯ. ರಮೇಶಬಾಬುಗಳು ಅದನ್ನು ವಿರೋಧಿಸುತಿದ್ದರು. ರಮಾನಾಥನು ಉಭಯ ಸಂಕಟಕ್ಕೊಳಗಾಗಿ ಅವರ ನಡುವೆ ನಿಂತಿದ್ದನು. ಯಾರ ಪಕ್ಷವನ್ನು ವಹಿಸುವುದು? ಯಾರನ್ನು ಬಿಡುವುದು?

ದಯಾನಾಥನು—ನಾನು ಇಂಗ್ಲಿಷರ ಮನೆಯ ನೂರಾರು ಡ್ರಾಯಿಂಗ್ ರೂಮುಗಳನ್ನು ನೋಡಿದ್ದುಂಟು. ಎಲ್ಲಿಯೂ ಕನ್ನಡಿಯನ್ನು ಕಾಣಲಿಲ್ಲ. ಕನ್ನಡಿಯಿರಬೇಕಾದುದು ಶೃಂಗಾರದ ಕೊಠಡಿಯಲ್ಲಿ. ಇಲ್ಲಿ ಕನ್ನಡಿಯನ್ನಿಡುವುದೆಂದರೆ ಅಸಂಗತವಾದ ಮಾತು.

ರಮೇಶ--ನಾನು ಇಂಗ್ಲಿಷರ ನೂರಾರು ಕೊಠಡಿಗಳನ್ನು ಕಂಡಿಲ್ಲವಾದರೂ, ನಾನು ನೋಡಿದ ನಾಕಾರು ಕೊಠಡಿಗಳಲ್ಲಿ ಕನ್ನಡಿಯಿದ್ದುದನ್ನು ಅವಶ್ಯವಾಗಿಯೂ ಕಂಡಿದ್ದೇನೆ. ಆದರೆ ಈ ಸಣ್ಣ ಸಣ್ಣ ವಿಷಯಗಳಲ್ಲಿಯೂ ನಾವು ಇಂಗ್ಲಿಷರ ಅನುಕರಣೆ ಮಾಡಬೇಕೆ? ನಾವು ಇಂಗ್ಲಿಷರಲ್ಲ. ಹಿಂದೀಯರು ಹಿಂದುಸ್ತಾನೀ ಶ್ರೀಮಂತರ ಕೋಠಡಿಗಳಲ್ಲಿ ದೊಡ್ಡ ದೊಡ್ಡ ನಿಲುಗನ್ನಡಿಗಳಿರುತ್ತವೆ, ನಿಜ. ಆದರೆ ಅದೆಲ್ಲಾ ಕೆಟ್ಟು ಹೋದ ಶ್ರೀಮಂತರ ಕತೆಯಾಯಿತು. ಅಂಥವರು ಶೃಂಗಾರದಲ್ಲಿ, ಮಾತಿನಲ್ಲಿ, ಚಾ-ಶರಾಬಿನಲ್ಲಿ ಪಿಂಗಾಣಿ ಪಾತ್ರೆಗಳಲ್ಲಿ-ಇಷ್ಟೇ ಏಕೆ? ತೋರಿಕೆಯ ಎಲ್ಲಾ ವಿಷಯಗಳಲ್ಲಿ ಇಂಗ್ಲಿಷರೂ ನಾಚುವಂತೆ ಅವರನ್ನು ಅನುಕರಿಸುತ್ತಾರೆ. ಆದರೆ ಯಾವ ಗುಣಗಳು ಇಂಗ್ಲಿಷರನ್ನು ಇಂಗ್ಲಿಷರನ್ನಾಗಿ ಮಾಡಿವೆಯೋ, ಯಾವುದರ ದೆಸೆಯಿಂದ ಅವರು ಪ್ರಪಂಚವನ್ನು ಆಳುತ್ತಿದ್ದಾರೋ, ಆ ಗುಣಗಳ ಸೋಂಕು ಕೂಡಾ ಈ ಮೂರ್ಖರಿಗೆ ತಟ್ಟುವುದಿಲ್ಲ. ಏನು, ನಿಮಗೂ ಈ ಮುದಿಪ್ರಾಯದಲ್ಲಿ ಇಂಗ್ಲಿಷನಾಗುವ ಹುಚ್ಚು ಹಿಡಿಯಿತೆ?

ದಯಾನಾಥರು ಇಂಗ್ಲಿಷರ ಅನುಕರಣೆಯನ್ನು ಸ್ವಲ್ಪವೂ ಮೆಚ್ಚುತ್ತಿದ್ದಿಲ್ಲ. ಈ ಟೀಪಾರ್ಟಿಯು ಕೂಡಾ ಅವರಿಗೆ ಹಿತವಿರಲಿಲ್ಲ. ನಾಲ್ಕು ಜನ ದೊಡ್ಡ ಮನುಷ್ಯರೊಡನೆ ಪರಿಚಯ ಬೆಳೆಯಿಸಬಹುದೆಂದಷ್ಟೆ, ಅವರಿಗೆ ಇದರಲ್ಲಿದ್ದ ಸಂತೋಷ. ಅವರ ಜೀವಮಾನದಲ್ಲಿ ಅವರೆಂದೂ ಕೋಟನ್ನು

ಧರಿಸಿದವರಲ್ಲ. ಆದರೆ ಈಗವರಿಗೆ ತನ್ನ ಪಕ್ಷವನ್ನು ಸಮರ್ಥಿಸಬೇಕಾಗಿ ಬಂತು—ಹಿಂದೀ ಶ್ರೀಮಂತರ ಮನೆಯಲ್ಲಿ ಮೇಜು, ಕುರ್ಚಿಗಳಿರುವುದಿಲ್ಲ; ನೆಲವಿರುವುದು. ಕುರ್ಚಿ ಮೇಜುಗಳನ್ನು ತಂದು ಹಾಕಿ, ಈ ಕೋಣೆಯನ್ನು ಇಂಗ್ಲಿಷ ಕೋಣೆಯನ್ನಾಗಿ ಮಾಡಿ, ಈಗ ನಿಲುಗನ್ನಡಿಯ ವಿಷಯದಲ್ಲಿ ಮಾತ್ರ ಹಿಂದಿಯರ ದೃಷ್ಟಾಂತ ಕೊಡುತ್ತಿದ್ದೀರಿ. ಒಂದೋ ಹಿಂದಿಯ್ರಾಗಿರಿ, ಇಲ್ಲ ಆಂಗ್ಲರಾಗಿರಿ, ಅರ್ಧ ಅದು, ಅರ್ಧ ಇದು, ಹೀಗೆ ಮಾತ್ರ ಸಲ್ಲದು. ಕೋಟು ಪೆಂಟುಗಳ ಮೇಲೆ ಗಾಂಧೀ ಟೊಪ್ಪಿಯಿಡುವುದು ಅಷ್ಟೇನೂ ಸೊಗಯಿಸದು.

ರಮೇಶಬಾಬುಗಳು ತಮ್ಮ ತರ್ಕದೆದುರು ದಯಾನಾಥರ ಬಾಯಿಕಟ್ಟಿ ಹೋಗುವುದೆಂದೆಣಿಸಿದ್ದರು. ಆದರೆ ಈಗ ಅವರಲ್ಲಿ ವಿಪರೀತವೇ ಆಯಿತು. ಅಷ್ಟರಲ್ಲಿ ಹೊರಗಿನಿಂದ ಮೋಟರೊಂದು ಬಂದು ನಿಂತಿತು ರತನಬಾಯಿಯವರು ಕೆಳಗಿಳಿದರು. ಇದನ್ನು ಕಂಡೊಡನೆ ತಮ್ಮ ಗುಟ್ಟೆಲ್ಲಾ ಎಲ್ಲಿ ಬಯಲಾಗುವುದೋ ಎಂಬ ಭಯದಿಂದ ಮೂವರೂ ಬೇಗ ಬೇಗ ಹೊರಗೆ ಬಂದರು. ರಮಾನಾಥನು ಮುಂದೆ ಬಂದು ಹಸ್ತಲಾಘವವನ್ನೀಯುತ್ತಾ ಹೇಳಿದನು—ಬನ್ನಿರಿ, ರತನಬಾಯಿಯವರೇ, ಇವರು ನಮ್ಮ ತೀರ್ಥರೂಪರು, ಇವರು ನಮ್ಮ ಮಿತ್ರ ರಮೇಶಬಾಬುಗಳು—ರತನಳು ಇಬ್ಬರಿಗೂ ದೂರದಲ್ಲಿ ಕೈಮುಗಿದು ರಮಾನಾಥನ ಹತ್ತಿರ ಹೇಳಿದಳು—ನನಗೆ ಹೆಚ್ಚು ಅವಕಾಶವಿಲ್ಲ. ನಿಮ್ಮ ಹತ್ತಿರ ಸ್ವಲ್ಪ ಮಾತಾಡಬೇಕಿತ್ತು.

ಹೀಗೆ ಹೇಳುತ್ತಾ ರಮಾನಾಥನೊಡನೆ ಮೋಟರಿನವರೆಗೆ ಬಂದು ಮೆಲ್ಲಗೆ ಹೇಳಿದಳು—ಸರಾಫನ ಹತ್ತಿರ ಹೇಳಿರುವಿರಲ್ಲವೆ ?

ರಮಾ—ಹೌದು ಆಗುತ್ತಾ ಇದೆ.

ರತನ—ಆದಿನ ನಿಮ್ಮ ಹತ್ತಿರ ರೂಪಾಯಿ ಸಿಗದೆಂದು ಹೇಳಿದ್ದೆನಲ್ಲವೆ? ಆದರೆ ನಿಮಗೆ ಕಷ್ಟವಾದೀತೆಂದೆಣಿಸಿ ಒಬ್ಬರ ಹತ್ತಿರ ತೆಗೆದುಕೊಂಡೆ. ಎಂಟು ನೂರು ಬೇಕಲ್ಲವೆ ?

ರಮಾನಾಥನು ಮನಸ್ಸು ಮಾಡಿದ್ದರೆ ಅಷ್ಟನ್ನೂ ತೆಗೆದುಕೊಳ್ಳಬಹುದಿತ್ತು. ಆದರೆ ಸರಳತೆ ಮತ್ತು ವಿಶ್ವಾಸದ ಮೂರ್ತಿಯಾದ ರತನಳಿಗೆ

ವಿಶ್ವಾಸಘಾತ ಮಾಡುವುದೆ ? ಈ ದೇವಿಯ ಹತ್ತಿರ ಕಪಟ ವ್ಯಾಪಾರ ಮಾಡುವವನು ಪಾಪಿಯಾದಾನು. ಸ್ವಲ್ಪ ಸಂಕೋಚಪಡುತ್ತಾ ಹೇಳಿದನು—ಜಾಲಪಳು ೮೦೦ ಎಂದು ಹೇಳಿದ್ದಾಳೆ. ಪ್ರಾಯಶ: ಅವಳಿಗೆ ನೆನಪು ಅವ ಳಿಗೆ ತಪ್ಪಿರಬೇಕು. ಅವಳ ಬಳಿ ೬೦೦ರದ್ದು. ನಿಮಗೆ ಬೇಕಾದರೆ ೮೦೦ ರದ್ದೆ ಮಾಡಿಸುವ.

ರತನ—ಬೇಡ, ಬೇಡ.

ಆವಳು ಮೋಟರಿನಿಂದ ತನ್ನ ಥೈಲಿಯನ್ನು ತೆಗೆದು ನೂರು-ನೂರರ ಆರು ನೋಟುಗಳನ್ನು ತೆಗೆದು ಕೊಟ್ಟಳು.

ರಮಾನಾಥನೆಂದನು—ಇಷ್ಟು ಅವಸರವಿರಲಿಲ್ಲ ಆಭರಣ ಸಿದ್ಧವಾದ ಬಳಿಕ ಕೊಟ್ಟರೆ ಸಾಕಿತ್ತು.

ರತನ—ಆಗಲಿ, ನನ್ನ ಹತ್ತಿರವಿದ್ದರೆ ಹಣ ಖರ್ಚಾಗಿ ಹೋಗುತ್ತಿತ್ತು. ಆದುದರಿಂದಲೇ ನಿಮ್ಮ ವಶ ಒಪ್ಪಿಸಿ ಬರೋಣವೆಂದು ಯೋಚಿಸಿದೆ. ಯಾವ ಕೆಲಸವನ್ನಾದರೂ ಶೀಘ್ರದಲ್ಲಿ ಮಾಡಿ ಮುಗಿಸುವುದು ನನ್ನ ಸ್ವಭಾವ. ತಡ ಮಾಡುವುದೆಂದರೆ ನನಗಾಗುವುದಿಲ್ಲ.

ಮೋಟರು ಹೊರಟು ಹೋಯಿತು. ರಮಾನಾಥನು ನೋಟುಗಳನ್ನಿಡಲು ಒಳಗೆ ಹೋದನು. ಆಗ ಇಬ್ಬರು ಮುದುಕರಲ್ಲಿ ಮಾತುಕತೆ ನಡೆಯಲು ಆರಂಭವಾಯಿತು.

ರಮೇಶ—ನೋಡಿದಿರಲ್ಲವೆ ?

ದಯಾ—ಹೌದು, ಕಣ್ಣುಗಳು ತೆರೆದೇ ಇದ್ದುವು. ಈಗ ನನ್ನ ಮನೆಯಲ್ಲೂ ಅದೇ ಗಾಳಿ ಬೀಸುತ್ತಿದೆ. ದೇವರೇ ಕಾಪಾಡಬೇಕು.

ರಮೇಶ—ಹಾಗೆಯೇ ಸರಿ, ಆದರೆ ಈಗ ಇಂತಹ ಹೆಂಗಸರದೇ ಕಾಲ. ಆಗತ್ಯಬಿದ್ದರೆ ಸಹಾಯ ಮಾಡುತ್ತಾರೆ, ರೋಗ ಬಂದರೆ ಡಾಕ್ಟರರನ್ನು ಕರೆಯಿಸುತ್ತಾರೆ. ಇಲ್ಲವಾದರೆ ನಾವು ಸತ್ತರೂ ನಮ್ಮ ಹೆಂಡಂದಿರು ಮನೆಯಿಂದ ಹೊರಗೆ ಕಾಲಿಡುವಂತಿತ್ತೇ ?

ದಯಾ—ಆದರೆ ನಮಗೆ ಈ ಇಂಗ್ಲಿಷ ಪದ್ಧತಿ ಎಂದರಾಗದು. ಏನು ಮಾಡಲಿ, ಸಂತಾನ ಪ್ರೇಮವಿಲ್ಲದಿರುತ್ತಿದ್ದರೆ 'ಹೋಗಿ ಬೇರೆ ಮನೆ ಮಾಡಿಕೊಂಡಿತು' ಎಂದು ಹೇಳುತ್ತಿದ್ದೆ. ಇವನಿಗೆ ಕಣ್ಣು ಹೋದರೆ ಪೀಡೆಯೂ ಹೋಗುವುದು. ಹೆಂಡಂದಿರನ್ನು ತಲೆಯ ಮೇಲೆ ಕರಿಸಿಕೊಳ್ಳುವ ಗಂಡಂದಿರನ್ನು ಕಂಡರೆ ನನ್ನ ಕೋಪವು ನೆತ್ತಿಗೇರುವುದು. ನೋಡಿ, ಒಂದು ದಿನ ಇವಳು ವಕೀಲರಿಗೆ ಮೋಸಕೊಡದಿರುವುದಿಲ್ಲ.

ರಮೇಶ—ಈ ಅಭಿಪ್ರಾಯಕ್ಕೆ ನಾನೊಪ್ಪಲಾರೆ. ಇವಳು ಕೆಟ್ಟ ಚಾಳಿಯವಳೆಂದು ಏಕೆ ಹೇಳಬೇಕು? ಏನೇ ಇರಲಿ. ರಮಾನಾಥನೆಂದರೆ ತುಂಬಾ ಗೌರವ. ರೂಪಾಯಿಗಳನ್ನೇಕೆ ಕೊಟ್ಟಿರಬಹುದು?

ದಯಾ—ನನಗಿದರಲ್ಲೇನೋ ರಹಸ್ಯವಿರುವಂತೆ ತೋರುವುದು. ರಮಾನಾಥನು ಇವಳಿಗೆ ಮೋಸ ಮಾಡುತ್ತಿಲ್ಲವಷ್ಟೆ?

ಅದೇ ಸಮಯ ರಮಾನಾಥನು ಒಳಗಿನಿಂದ ಬಂದನು. ಈ ಕೊನೆಯ ವಾಕ್ಯ ಅವನ ಕಿವಿಗೆ ಬಿತ್ತು. ಹುಬ್ಬುಗಂಟಿಕ್ಕಿ ಹೇಳಿದನು.—ಹೌದಪ್ಪಾ ಹೌದು ಮೋಸ ಹೂಡುತ್ತಿದ್ದೇನೆ. ಅವಳನ್ನು ಮೋಸಗೊಳಿಸಿ ರೂಪಾಯಿ ದೋಚುತಿದ್ದೇನೆ. ನನ್ನ ವೃತ್ತಿಯೇ ಅದು!

ದಯಾನಾಥನು ನಾಚುತ್ತ ಹೇಳಿದರು—ಆದರೆ ಇಷ್ಟು ಸಿಟ್ಟೇಕೆ? ನಾನು ಅಂತಹ ಮಾತನ್ನೇನೂ ಆಡಿಲ್ಲ.

ರಮಾ—ಒಂದನೆಯ ದರ್ಜೆಯ ದಗಾಖೋರನೆಂದು ಮಾಡಿ ಬಿಟ್ಟಿರಿ; ಮತ್ತೇನು ಹೇಳಬೇಕು? ನಿಮ್ಮ ಮನಸ್ಸಿನೊಳಗೇಕೆ ಈ ಸಂಶಯವು ಉಂಟಾಯಿತು? ನನ್ನ ಯಾವ ವರ್ತನೆಯನ್ನು ಕಂಡು ನೀವು ಹೀಗೆ ಯೋಚಿಸುತ್ತಿದ್ದಿರಿ? ಶುಚಿಯಾದ ಬಟ್ಟೆಯನ್ನು ಹಾಕುತ್ತೇನೆ, ಸ್ವಲ್ಪ ಹೊಸ ಕ್ರಮವನ್ನನುಸರಿಸುತ್ತೇನೆ; ಇವಲ್ಲದೆ ಬೇರಾವ ಕೆಟ್ಟ ಆಚರಣೆಯನ್ನು ಕಂಡು ಹೀಗೆ ಯೋಚಿಸಿದಿರಿ? ನಾನು ವೆಚ್ಚಮಾಡಿದ ಹಣವೆಲ್ಲಾ ಒಳ್ಳೆಯ ದಾರಿಯಿಂದಲೇ ಬಂದುದು. ಮೋಸ ಮತ್ತು ಕುಯುಕ್ತಿಗಳಿಗೆ ಕೈಗೊಟ್ಟ ದಿನವೇ ವಿಷಕುಡಿದು ಹೆಣವಾಗುವೆನು. ಹಾಂ, ಕೆಲವರಿಗೆ ವೆಚ್ಚ ಮಾಡಬೇಕೆಂದು ತೋರುತ್ತದೆ; ಕೆಲವರಿಗೆ ಹಾಗಿಲ್ಲ. ಇದು ನಮ್ಮ ನಮ್ಮ

ಸುಬುದ್ಧಿ ಇದನ್ನು ನೀವು ಮೋಸಗಾರಿಕೆಯೆಂದು ತಿಳಿಯುವದಾದಂ ತಿಳಿದುಕೊಳ್ಳಿರಿ. ನನ್ನದೇನೂ ಅಡ್ಡಿಯಿಲ್ಲ. ನೀವೇ ನನ್ನ ವಿಷಯ ಹೀಗ್ಗೆ ಯೋಚಿಸಿದ ಮೇಲೆ ನಾನು ಮೋರೆಗೆ ಮಸಿ ಬಳಿದುಕೊಂಡು ದೇಶಾಂತರಕ್ಕೆ ಹೊರಡುವುದು ಒಳ್ಳೆಯದು. ರಮೇಶಬಾಬುಗಳಿದ್ದಾರೆ, ಹೇಗೂ ನಮ್ಮೆದುರು ಅವರನ್ನೇ ಕೇಳಿರಿ. ಯಾವ ವಿಷಯವನ್ನು ಬೇಕಾದರೂ ಕೇಳಬಹುದು. ಅವರು ನನ್ನ ಹೆದರಿಕೆಯಿಂದ ಸುಳ್ಳು ಹೇಳಲಿಕ್ಕಿಲ್ಲ.

ಸತ್ಯದ ಮಿರುಗು ಹಾಕಿದ ಈ ಬಣ್ಣದ ಮಾತುಗಳಿಂದ ದಯಾನಾಥರಿಗೆ ಬೇಕಾದ ಆಶ್ವಾಸನೆ ದೊರೆಯಿತು. ಹೇಳಿದರು--ನೀನು ದುರ್ಮಾರ್ಗವನ್ನು ಹಿಡಿದಿರುವೆಯೆಂದು ನನಗೆ ಯಾವ ದಿನ ಗೊತ್ತಾಗುವುದೋ ಅದಕ್ಕೆ ಮೊದಲೇ ನಾನು ಮೋರೆಗೆ ಮಸಿ ಬಳಿದುಕೊಂಡು ಇಲ್ಲಿಂದ ಹೊರಟಾಗುವುದು. ದಿನದಿಂದ ದಿನಕ್ಕೆ ಬೆಳೆಯುವ ನಿಮ್ಮ ಖರ್ಚನ್ನು ನೋಡಿ, ನಾನು ಹೀಗೆ ಸಂದೇಹಪಟ್ಟೆ. ನಿನ್ನ ವರ್ತನ ಒಳ್ಳೆಯದಾಗಿದೆಯೆಂದು ನೀನೇ ಹೇಳಿದ ಬಳಿಕ ನನಗೆ ಸಂತೋಷವಾಯಿತು. ನನ್ನ ಮಗನು ಬಡವನಾಗಿದ್ದರೂ ಚಿಂತಿಲ್ಲ, ಆದರೆ ಅವನ ವರ್ತನೆಯು ಚೆನ್ನಾಗಿರಲಿ ಎಂದಿಷ್ಟೇ ನನ್ನ ಬಯಕೆ. ನಾನು ದೇವರನ್ನು ಕೋರಿಕೊಳ್ಳುವುದೂ ಇದೆ. "ನನ್ನ ಮಗ ನನ್ನು ಸನ್ಮಾರ್ಗದಲ್ಲೇ ಇರಿಸು" ಎಂದು ಅನುದಿನವೂ ಬೇಡಿಕೊಳ್ಳುತ್ತಿದ್ದೇನೆ.

ರಮೇಶಬಾಬುಗಳು ನಗುತ್ತ ಹೇಳಿದರು—ಇರಲಿ, ಈ ಕತೆ ಇಲ್ಲಿಗೆ ಮುಗಿಯಿತಲ್ಲ. ಈಗ ಹೇಳು ಆ ರೂಪಾಯಿಗಳು ಯಾವುದಕ್ಕೆಂದು? ನಾನು ಲೆಖ್ಖಮಾಡಿ ನೋಡಿದೆ. ಆರು ನೋಟುಗಳಿದ್ದುವು. ನೂರು ನೂರರದ್ದೇ ಇರಬೇಕು.

ರಮಾ—ಅವಳನ್ನು ಠಕ್ಕಿಸಿ ತಂದಿರುವೆನು.

ರಮೇಶ —ನನ್ನ ಹತ್ತಿರ ನಿನ್ನ ಪುರಾಣವನೆಲ್ಲಾ ಬಿಚ್ಚಿದರೆ ಬಡಿದು ಬಿಡುತ್ತೇನೆ. ನೀನು ಠಕ್ಕಿನಿಂದ ತಂದಿದ್ದರೂ ನಾನು ನಿನ್ನ ಬೆನ್ನು ಸವರಿ— 'ಮಗೂ, ನೂರು ವರ್ಷ ಬಾಳೆಂ' ದು ಹೇಳುತ್ತಿದ್ದೆ. ಬೇಕಾದಷ್ಟು ಮೋಸ ಮಾಡು. ಆದರೆ ಮರ್ಯಾದೆಗೆ ಹಾನಿ ಬರದಂತೆ ನೋಡಿಕೋ. ಗುಟ್ಟು ಯಾರ ಕಿವಿಗೂ ಬೀಳದಿರಲಿ. ನನಗೆ ದೇವರ ಹೆದರಿಕೆಯೇನೂ ಇರುವುದಿಲ್ಲ,

ಅವನು ಕೇಳಿದ್ದಕ್ಕೆ ಸರಿಯಾದ ಉತ್ತರ ಕೊಡಬಲ್ಲೆ. ಆದರೆ ನೋಡು ಈ ಮನುಷ್ಯರಿಗೆ ತುಂಬಾ ಹೆದರುತ್ತೇನೆ. ಈಗ ಹೇಳು ಆ ರೂಪಾಯಿಗಳ ಏತಕ್ಕೆಂದು? ಏನಾದರೂ ದಲಾಲಿಯ ಕೆಲಸವಾದರೆ ನನ್ನನ್ನು ಸೇರಿಸಿಕೊ ಮಾರಾಯಾ?

ರಮಾ—ಬಳೆಗಳನ್ನು ಮಾಡಿಸಬೇಕಂತೆ.

ರಮೇಶ—ಸರಿ, ನಡಿ ಹಾಗಾದರೆ ಯಾರಾದರೂ ಒಳ್ಳೆಯ ಸರಾ‌ಫ ನನ್ನು ಅರಿಸುವ ಅದರೆ ಸುಮ್ಮನೆ ಈ ರಗಳೆಯನ್ನು ಏತಕ್ಕೆ ಹಚ್ಚಿಕೊಂಡಿ ಸ್ತ್ರೀಸ್ವಭಾವ ನಿನಗೆ ಗೊತ್ತಿಲ್ಲ. ಅವರಿಗೆ ಯಾರ ಮೇಲೂ ನಂಬುಗೆಯಿಲ್ಲ ನೀನು ಬೇಕಾದರೆ ಸಾಲ್ಕಾರು ರೂಪಾಯಿಗಳನ್ನು ಕೈಯಿಂದಲೇ ಹಾಕು ಅವರು ನೀನು ಲಾಭ ಹೊಡೆದಿದ್ದೀಯೆಂದೇ ಗ್ರಹಿಸುವರು. ಒಳ್ಳೆಯ ಹೆಸರಿನ ಆಸೆ ಬಿಡು. ಕೆಟ್ಟ ಹೆಸರು ಬರುವುದಕ್ಕೆ ತೊಂದರೆ ಇಲ್ಲ.

ರಮಾ—ನೀವು ಮೂರ್ಖ ಹೆಂಗಸರ ಕತೆ ಹೇಳುತ್ತೀರಿ. ಶಿಕ್ಷಿತ ಸ್ತ್ರೀಯರು ಹಾಗಲ್ಲ. ಸ್ವಲ್ಪ ತಡೆದು ರಮಾನಾಥನು ಜಾಲಪಳ ಬಳಿ ಹೋಗಿ ಹೇಳಿದನು—ಈಗ ನಿನ್ನ ಗೆಳತಿ ರತನ ಬಂದು ಹೋದಳು

ಜಾಲಪ—ಆಹುದೆ? ಅಯ್ಯಯ್ಯೋ, ಇಲ್ಲಿ ಏನೂ ಸಿದ್ಧವಾಗಿರಲಿಲ್ಲ.

ರಮಾ—ಕೋಣೆಯೊಳಗೆ ಬಾರದ್ದರಿಂದ ಕ್ಷೇಮವಾಯಿತು. ಬಳೆಗಳ ಹಣವನ್ನು ಕೊಡಲು ಬಂದಿದ್ದಳು. ನೀನು ಅವಳ ಹತ್ತಿರ ಎಂಟು ನೂರೆಂದು ಹೇಳಿದ್ದಿಯೆಂದು ತೋರುತ್ತದೆ. ನಾನು ಆರು ನೂರೇ ತೆಗೆದುಕೊಂಡೆನು.

ಜಾಲಪಳು ನಾಚಿಕೊಂಡೇ ಹೇಳಿದಳು—ನಾನು ಹೀಗೆಯೇ ವಿನೋದಕ್ಕೆ ಹೇಳಿದ್ದು.

ಜಾಲಪಳು ಹೀಗೆ ತನ್ನ ಗಂಡನೆದುರು ಮಾನವನ್ನುಳಿಸಿಕೊಂಡರೂ, ತಾನು ಸುಳ್ಳನ್ನೇಕೆ ಹೇಳಿದೆನೆಂದು ಬಹು ಹೊತ್ತಿನವರೆಗೆ ಅವಳ ಮನಸ್ಸು ಪಶ್ಚಾತ್ತಾಪ ಬಡುತ್ತಿತ್ತು. ಇವರು ತನ್ನನ್ನೆಷ್ಟು ನೀಚರೆಂದು ಎಣಿಸಿರಬಹುದೊ! ರತನಳೂ ತನ್ನನ್ನೆಷ್ಟು ಮೋಸಗಾರಳೆಂದು ಬಗೆದಾಳು!

೧೭

ಟೀಪಾರ್ಟಿಯ ಸಮಯ ವಿಶೇಷ ಘಟನೆಗಳೇನೂ ಸಂಭವಿಸಲಿಲ್ಲ. ವಕೀಲರು ಚಿತ್ತೈಸಿರಲಿಲ್ಲ. ದಯಾನಾಥರು ಅಷ್ಟುಹೊತ್ತು ತಾನು ಹೋಗಿ

ಹ್ದರೇನೇ ಒಳಿತೆಂದು ಭಾವಿಸಿದರು. ರಮೇಶಬಾಬುಗಳು ಮಾತ್ರ ಜಗಲಿಯಲ್ಲೆ ನಿಂತುಕೊಂಡಿದ್ದರು. ರಮಾನಾಥನು ಎಷ್ಟುಬಾರಿ ಕೇಳಿಕೊಂಡರೂ ಇವರೊಡನೆ ಸೇರಿ ಬೆರೆಯುಲು ಅವರೊಪ್ಪಳ್ಳಿಲ್ಲ.

ಜಾಲಪಳು ತನ್ನ ಅತ್ತೆಯವರಿಗೆ ರತನಳ ಪರಿಚಯ ಮಾಡಿಸಿಕೊಟ್ಟಳು. ಅವರಿಗೆ ಅವಳು ಅಷ್ಟು ಮೆಚ್ಚುಗೆಯಾಗಲಿಲ್ಲ. ಬಡಬಡನೆಂದು ಸದ್ದುಮಾಡುತ್ತಾ ಮಹಡಿಯ ಮೇಲೇರುವುದು, ಮಾಳಿಗೆಯಮೇಲೆ ಧಡಧಡನೆಂದು ಓಡಾಡುವುದು, ಇವುಗಳೆಲ್ಲಾ ಅವರ ದೃಷ್ಟಿಯಲ್ಲಿ ಭಯಂಕರ ಉತ್ಪಾತದ ಚಿಹ್ನೆಗಳಾಗಿದ್ದುವು. ಹೆಣ್ಣುಮಕ್ಕಳಿಗೆ ನಾಚಿಕೆಯೊಂದಿಲ್ಲದಿದ್ದರೆ ಬೇರೆ ಏನಿದ್ದು ಏನು ಪ್ರಯೋಜನ ? ಜಾಲಪಳು ಸಹ ಅವಳೊಡನೆ ಸೇರಿಬಿಟ್ಟಿದ್ದು ಅವರಿಗೆ ಆಶ್ಚರ್ಯವನ್ನುಂಟು ಮಾಡಿತ್ತು. ಅಂದು ರತನಳು ಬಳೆಗಳ ಪ್ರಸ್ತಾಪವನ್ನೆ ಎತ್ತಲಿಲ್ಲ.

ಈ ಟೀಪಾರ್ಟಿಯ ಸಿದ್ಧತೆಗಳ ನಡುವೆ ರಮಾನಾಥನಿಗೆ ಗಂಗುವಿನ ಅಂಗಡಿಯವರೆಗೆ ಕಾಲುಹಾಕುವಷ್ಟೂ ಅವಕಾಶವಿದ್ದಿಲ್ಲ. ಆರುನೂರು ರೂಪಾಯಿಗಳನ್ನು ಕೊಟ್ಟರೆ ಗಂಗುವು ಹಿಂದಿನ ಲೆಖ್ಖಕ್ಕೆ ಹಾಕಿಕೊಳ್ಳುವನು. ಮತ್ತೆ ನೂರೈವತ್ತು ಮಾತ್ರ ಉಳಿಯುವುದು. ಈ ಹೊಸ ಲೆಖ್ಖದಲ್ಲಿ ಆರೂನೂರು ಮಾತ್ರ ಸೇರಿದರೆ ಪುನಃ ಎಂಟುನೂರು ಮಾತ್ರ ಬಾಕಿಯಾಗುವುದು. ಹೀಗೆ ತನ್ನ ದರ್ಪವನ್ನು ತೋರಿಸಬಹುದೆಂದು ಅವನು ಯೋಚಿಸಿದ್ದನು.

ಮರುದಿನ ಅವನು ಆನಂದದಿಂದ ಗಂಗುವಿನ ಅಂಗಡಿಯನ್ನು ತಲುಪಿ ದೊಡ್ಡಸ್ತಿಕೆಯನ್ನು ಪ್ರದರ್ಶಿಸುತ್ತ ಹೇಳಿದನು— ಹೇಗಿದೆ ರಾಯರ ಕಾರ್ಬಾರು ? ಏನಾದರೂ ಹೊಸ ಒಡವೆಗಳು ಆಗಿವೆಯೆ ?

ರಮಾನಾಥನ ಕಾಲಹರಣ ಬುದ್ಧಿಯದೆಸೆಯಿಂದ ಬಹಳ ವಿರಕ್ತನಾಗಿದ್ದ ಗಂಗುವು ಇವೊತ್ತು ಹಣ ಸಿಗುವ ಸಂಭವವಿದೆಯೆಂಬುದನ್ನರಿತರೂ, ಅಷ್ಟೊಂದು ಸಂತುಷ್ಟನಾಗಲಿಲ್ಲ. ದೂರಿಟ್ಟುಕೊಳ್ಳುವವನಂತೆ ಹೇಳಿದನು— ರಾಯರೇ, ಎಷ್ಟೋ ಒಡವೆಗಳನ್ನು ತಯಾರಿಸಿಯಾಯಿತು; ಮಾರಿಯೂ ಆಯಿತು. ನೀವಂತೂ ಅಂಗಡಿಕಡೆ ಮುಖ ತೋರಿಸುವುದಕ್ಕೂ ಮರೆತಂತೆ ಕಾಣುವುದು. ಇಂತಹ ಸಾಹುಕಾರಿಕೆ ನಮಗೆ ಬೇಡಪ್ಪಾ. ಎಂಟು ತಿಂಗಳಾಯಿತು. ನಿಮ್ಮಿಂದ ಒಂದು ಕಾಸೂ ಇಲ್ಲ.

ರಮಾ—ಹೌದು. ನೋಡಿ, ಬರಿಗೈಯಿಂದ ಅಂಗಡಿಗೆ ಬರುವುದೆಂದರೆ ನಾಚಿಕೆಯಾಗುತ್ತದೆ. ತಗಾದೆಗೊಳಗಾಗುವ ಜನರಲ್ಲ ನಾವು. ಇವೊತ್ತು ಈ ಆರುನೂರು ರೂಪಾಯಿಗಳನ್ನು ಜಮೆ ಮಾಡಿಕೊಂಡು, ಇನ್ನೊಂದು ಜತೆ ಒಳ್ಳೆಯ ಬಳೆಗಳನ್ನು ಮಾಡಿಕೊಡಿರಿ.

ಗಂಗುವು ರೂಪಾಯಿಗಳನ್ನು ಪೆಟ್ಟಿಗೆಯಲ್ಲಿರಿಸಿ ಹೇಳಿದನು—ಹಾಂ, ಮಾಡಿಕೊಡುವ. ಆದರೆ ಬಾಕಿ ರೂಪಾಯಿಗಳು ಯಾವಾಗ ?

ರಮಾ—ಬಹಳ ಬೇಗನೆ ಸಿಗುತ್ತವೆ.

ಗಂಗೂ—ಆದೀತು ಸ್ವಾಮೀ, ಶೀಘ್ರದಲ್ಲಿ ಹಿಂದಿನ ಬಾಕಿಯನ್ನು ಚುಕ್ತಾಮಾಡಿ ಬಿಡಿರಿ.

ಬಳೆಗಳನ್ನು ಬೇಗನೆ ಮಾಡಿಕೊಡುವೆನೆಂದು ಗಂಗುವು ಮಾತನ್ನೇನೋ ಕೊಟ್ಟಿದ್ದನು. ಆದರೆ ಒಂದು ಸಲ ವ್ಯಾಪಾರ ಮಾಡಿ ಅನುಭವವಿದ್ದ ಆತನಿಗೆ ಈ ಆಸಾಮಿಯಿಂದ ರೂಪಾಯಿ ಬೇಗನೆ ವಸೂಲಾಗುವ ಭರವಸೆಯಿಲ್ಲೆಂಬುದು ತಿಳಿದು ಹೋಗಿತ್ತು. ಇದರ ಪರಿಣಾಮವೇನೆಂದರೆ, ರಮಾನಾಥನು ತಗಾದೆಮಾಡಿದ ಹಾಗೆ, ಗಂಗುವು ನೆವವನ್ನೊಡ್ಡ ಹತ್ತಿದನು. ಇವತ್ತು ಕೆಲಸದವನಿಗೆ ಕಾಯಿಲೆ, ನಾಳೆ ಅವನ ಹೆಂಡತಿಯು ರೋಗಕ್ಕೆ ಮದ್ದು ತರಲು ಮಾವನ ಮನೆಗೆ ತೆರಳಿದ್ದಾನೆ. ನಾಡಿದ್ದು ಅವನ ಮಕ್ಕಳಿಗೆ ತೀವ್ರ ಕಾಯಿಲೆ. ಹೀಗೆ ಒಂದು ತಿಂಗಳಾದರೂ ಬಳೆಗಳ ಸುದ್ದಿಯಿಲ್ಲ ರತನಳು ತಗಾದೆಯೆಬ್ಬಿಸಬಹುದೆಂದು ರಮಾನಾಥನು ಪಾರ್ಕಿನತ್ತ ಹೋಗುವುದನ್ನೇ ತೊರೆದನು. ಆದರೇನು, ಅವಳಿಗೆ ಇವನ ಮನೆಯ ದಾರಿ ಗೊತ್ತಿಲ್ಲವೆ ? ಈ ಒಂದು ತಿಂಗಳಲ್ಲೆ ಹಲವು ಸಲ ಬಂದು ಪ್ರಸ್ತಾಪವನ್ನೆತ್ತಿದಳು. ಕೊನೆಗೆ ಶ್ರಾವಣಮಾಸದಲ್ಲೊಂದುದಿನ ಅವಳು ರಮಾನಾಥನೊಡನೆ ಹೇಳಿದಳು—ಆ ದುಷ್ಟನು ಮಾಡಿಕೊಡಲೊಲ್ಲನಾದರೆ, ಬೇರೆ ಕಡೆ ಕೊಡಬಾರದೆ ?

ರಮಾ—ಆ ನೀಚನ ಮೋಸವನ್ನೇನೆಂದುಹೇಳಲಿ ? ನಿತ್ಯವೂ—'ಇವೊತ್ತು, ನಾಳೆ,' ಇಷ್ಟೆ. ಮುಂಗಡವಾಗಿ ಹಣವನ್ನು ತೆತ್ತು, ನಾನು ದೊಡ್ಡ ತಪ್ಪು ಮಾಡಿದೆ. ಈಗ ಅವನ ಹತ್ತಿರ ರೂಪಾಯಿ ಹಿಂದೆ ಪಡೆಯುವುದೂ, ಕಷ್ಟಕರವಾಗಿ ಕಾಣುತ್ತಿದೆ.

ರತನ—ನೀವು ನನಗೆ ಅವನ ಅಂಗಡಿಯನ್ನೊಂದಷ್ಟು ತೋರಿಸಿರಿ. ನಾನವನಪ್ಪನ ಕೈಯಿಂದ ವಸೂಲು ಮಾಡುತ್ತೇನೆ. ಇಂತಹ ನೀಚನನ್ನು ಪೋಲೀಸರ ವಶ ಕೊಡಬೇಕು.

ಜಾಲಪಶೆಂದಳು—ಹೌದು, ಮತ್ತೇನು ? ಚಿನ್ನದ ಕೆಲಸ ಮಾಡುವ ವರೆಲ್ಲರೂ ತಡಮಾಡುವುದಿದೆ. ಆದರೆ ಈ ರೀತಿ ಹಣವನ್ನು ಇಸಕೊಂಡು ಒಡವೆಗೂ ತಿಂಗಳುಗಟ್ಟಲೆ ಕಾಯಿಸುವ ಹವ್ಯಾಸ ಯಾರೂ ಮಾಡಲಿಕ್ಕಿಲ್ಲ.

ರಮಾನಾಥನು ತಲೆ ಕೆರೆದುಕೊಳ್ಳುತ್ತ ಹೇಳಿದನು—ಇನ್ನು ಹತ್ತೇ ದಿನ ತಾಳಿಕೊಳ್ಳಿರಿ. ಅಷ್ಟರಲ್ಲಿ ನಾನವನಿಂದ ರೂಪಾಯಿ ವಸೂಲು ಮಾಡಿ ಬೇರೊಬ್ಬನಿಗೆ ಕೊಟ್ಟಿರುತ್ತೇನೆ.

ರತನ—ನೀವು ನನಗೆ ಆ ಬದ್ಮಾಶನ ಅಂಗಡಿಯಾವುದೆಂದು ತೋರಿಸಬಾರದೆ ?

ರಮಾ—ಹೇಳುತ್ತಿದ್ದೇನಲ್ಲ ನಾನು ಇನ್ನು ಹತ್ತೇ ದಿನಗಳಲ್ಲಿ ಬಳೆಗಳು ಸಿದ್ಧವೆಂದು.

ರತನ—ನೀವೇ ಸ್ವಲ್ಪ ಸಡಿಲು ಬಿಟ್ಟಂತೆ ತೋರುವುದು. ಎಲ್ಲೋ ಅವನ ಬಣ್ಣದ ಮಾತುಗಳಿಗೆ ಮರುಳಾಗಿದ್ದೀರಿ. ಒಂದು ಸಲ ಜೋರಾಗಿ ಹೇಳಿ ನೋಡಿ ಆಮೇಲೆ ಹೀಗೆ ನೆವವನ್ನು ಹೇಳುವ ಧೈರ್ಯ ಬಂದೀತೆ ಅವನಿಗೆ ?

ಅಂತೂ ಆದಿನ ಬಹು ಕಷ್ಟದಿಂದ ರತನಳು ಹೊರಟು ಹೋದಳು. ಅದೇ ದಿನ ಸಂಜೆ ಗಂಗುವು ನೇರವಾಗಿ ಹೇಳಿಬಿಟ್ಟನು. ಅರ್ಧ ಹಣಬರದ ಹೊರತು ಬಳೆಗಳು ತಯಾರಾಗುವುದಿಲ್ಲ. ಅಷ್ಟೇ ಅಲ್ಲ. ಹಿಂದಿನ ಬಾಕಿಯನ್ನು ಸಲ್ಲಿಸಬೇಕು.

ರಮಾನಾಥನ ಎದೆಗೆ ಗುಂಡು ತಾಗಿದಂತಾಯಿತು; ಅಳ್ಳೆಗೆ ಕೋಲಿರಿದಂತಾಯಿತು, ಹೇಳಿದನು—ಸ್ವಾಮೀ, ಇದು ಸುಜನರ ಲಕ್ಷಣವಲ್ಲ. ಒಬ್ಬ ಹೆಂಗಸಿನ ಒಡವೆ. ಅವರು ಮುಂಗಡ ರೂಪಾಯಿ ಕೊಟ್ಟಿದ್ದಾರೆ. ನಾನವರಿಗೆ ಹೇಗೆ ಮೊಗತೋರಿಸಲಿ ? ಸ್ವಲ್ಪ ಯೋಚಿಸಿ ನೋಡಿ ನನ್ನ ರೂಪಾಯಿಗಳ ಮಟ್ಟಿಗೆ ನೋಟು ಬರೆಯಿಸಿಕೊಳ್ಳಿ. ಏನೂ ಬೇಕಾದರೂ ಮಾಡಿರಿ.

ಗಂಗೆ:- ನೋಟಿಗೆ ಬೆಲ್ಲ ಹಚ್ಚಿ ನೆಕ್ಕಬೇಕೇನು ? ನಾವು ಎಂಟೆಂಟು ತಿಂಗಳಿಗೆ ಉದ್ರಿಕೊಡುವ ಕ್ರಮವಿಲ್ಲ. ಒಂದು ತಿಂಗಳು—ಹೆಚ್ಚೆಂದರೆ ಎರಡು. ಹೇಗೂ ನೀವು ಶ್ರೀಮಂತರು; ನಿಮಗೆ ಐನೂರು, ಆರುನೂರೆಂದರೆ ಯಾವ ಲೆಕ್ಕ ? ಬಳೆಗಳು ತಯಾರಾಗಿಯೇ ಇವೆ. ಎಂದಿಟ್ಟುಕೊಳ್ಳಿ.

ರಮಾನಾಥನು ಹಲ್ಲು ಕಡಿಯುತ್ತ ಹೇಳಿದನು....ಹೀಗಿದ್ದ ಪಕ್ಷಕ್ಕೆ ನನಗೆ ಮೊದಲೇ ತಿಳಿಸಬಾರದಿತ್ತೆ? ಇಷ್ಟರವರೆಗೆ ರೂಪಾಯಿಗಳಿಗೆ ಏನಾದರೊಂದು ವ್ಯವಸ್ಥೆ ಮಾಡುತ್ತಿದ್ದೆ.

ಗಂಗು—ನಿಮಗೆ ಇಷ್ಟೊಂದು ಸಣ್ಣ ವಿಷಯವೂ ಅರ್ಥವಾಗುವುದಿಲ್ಲ ವೆಂದು ನನಗೇನು ಗೊತ್ತು ಸ್ವಾಮೀ ?

ರಮಾನಾಥನು ನಿರಾಶನಾಗಿ ಮನೆಗೆ ಹಿಂತೆರಳಿದನು. ಅವನು ಈಗ ಲಾದರೂ ಜಾಲಪಳೊಡನೆ ತನ್ನ ವೃತ್ತಾಂತವನ್ನೆಲ್ಲಾ ಬಿಡಿಸಿ ಹೇಳುತ್ತಿದ್ದರೆ, ಅವಳಿಗೆ ದುಃಖವೆಷ್ಟಾಗುತ್ತಿದ್ದರೂ, ಅಲ್ಲಿಂದಲೆ ಬಳೆಗಳನ್ನು ಕಳಚಿಕೊಡು ತ್ತಿದ್ದಳು. ಆದರೆ ರಮಾನಾಥನಿಗೆ ಅಷ್ಟು ಸಾಹಸ ಬರಲಿಲ್ಲ. ತನ್ನ ಆರ್ಥಿಕ ದುಸ್ಥಿತಿಯ ಕಂತೆಯನ್ನು ಆಕೆಯ ಯೆದುರು ಬಿಚ್ಚಿ, ಅವಳ ಕೋಮಲ ಹೃದ ಯಕ್ಕೆ ಆಘಾತಗೈಯುವುದು ಅವನ ಮನಸ್ಸಿಗೆ ಸ್ವಲ್ಪವೂ ಸೇರದ ಸಂಗತಿ.

ರಮಾನಾಥನಿಗೆ ತಿಂಗಳೊಂದರ ನೂರು ರೂಪಾಯಿ ಸಿಗುತಿದ್ದು, ಅವನು ಮಿತದಿಂದ ಖರ್ಚು ಮಾಡುತ್ತಿದ್ದರೆ, ಸರಾಫನ ಬಾಕಿ ಸಲ್ಲಿಸಬಹುದಿ ತ್ತೆಂಬುದರಲ್ಲಿ ಸಂಶಯವೇನೂ ಇರಲಿಲ್ಲ. ಆದರೆ ಆದಾಯದಷ್ಟೆ ವ್ಯಯವೂ ಇರುತ್ತಿತ್ತು. ಕಾಸಿಗೆ ಕಾಸು ಗಂಟು ಹಾಕಿ ಹಣಗೂಡಿಸುವ ಉಪಾಯ ಗೊತ್ತಿರುವುದು ವ್ಯಾಪಾರಿಗಳಿಗೆ. ಬಾಬುಗಳಿಗೆ ರೂಪಾಯಿಯನ್ನು ಕಾಸಿ ಗಿಂತಲೂ ಕಡೆಗಣಿಸುವುದು ಮಾತ್ರ.

ರಮಾನಾಥನು ಒಂದು ದಿನ ರಾತ್ರಿ ಮತ್ತೊಮ್ಮೆ ಚಿನಿವಾರ ಕಟ್ಟೆಗೆ ಪ್ರದಕ್ಷಿಣೆ ಬಂದು ಯಾರನ್ನಾದರೂ ಬಲೆಗೆ ಹಾಕಲು ಹವಣಿಸಿದನು. ಆದರೆ ಎಲ್ಲಿಯೂ ಬೇಳೆ ಬೇಯಲಿಲ್ಲ. ಪೇಟೆಯಲ್ಲಿ ಸಮಾಚಾರಗಳು 'ವಾಯರಲೆಸ್' ಮೂಲಕ ಹರಿಯುತ್ತವೆ.

ರಮಾನಾಥನಿಗೆ ರಾತ್ರಿ ನಿದ್ದೆ ಬರಲಿಲ್ಲ. ಈಗ ಯಾರಾದರೂ ಅವನ ಹತ್ತಿರ ಒಂದು ಸಾವಿರಕ್ಕೆ ನೋಟು ಬರೆಸಿಕೊಂಡು ಐನೂರೇ ಕೊಟ್ಟಿದ್ದರೂ ಅವನ ಆನಂದವು ಮೇರೆ ಮೀರುತ್ತಿತ್ತು. ಆದರೆ ತನ್ನ ಗುರುತು ಪರಿಚಯದ ವರಲ್ಲಿ ಅಂಥವರು ಯಾರೂ ಇದ್ದಂತೆ ತೋರಲಿಲ್ಲ. ಇದ್ದರೂ ಅವರೊಡನೆ ತಾನು ಯಾವ ಮುಖದಿಂದ ಕೇಳಲಿ? ಗಂಗುವಿಗೆ ಸುಮ್ಮನೆ ಹಣಕೊಟ್ಟೆ ನಲ್ಲಾ! ಅವನು ವ್ಯಾಜ್ಯಕ್ಕೇನೂ ಹೋಗುತ್ತಿರಲಿಲ್ಲ. ರಮಾನಾಥನು ತನ ಗೊಂದು ಭಯಂಕರ ರೋಗವು ಅಂಟಿಕೊಂಡರೂ ಬಹಳ ಸಂತೋಷಪಡು ತಿದ್ದನು; ಆದರೆ ನಾವು ಕರೆದಾಗ ಸಾವು ಕೂಡಾ ನಮ್ಮ ಬಳಿ ಸಾರದು. ನಾವು ಸಿದ್ಧರಿಲ್ಲದಿರುವ ಸಮಯ ನೋಡಿಯೇ ಅದು ಮೇಲೆ ಹಾಯುವುದಷ್ಟೆ! ಹೀಗೆಲ್ಲಾ ಆಲೋಚನೆ ಮಾಡುತ್ತಾ ಹಾಸುಗೆಯಲ್ಲಿ ಹೊರಳುತ್ತಿದ್ದನು. ಜಾಲಪಳಿಗೆ ಎಚ್ಚರವಾಯಿತು. ರಮಾನಾಥನು ನಿದ್ದೆ ಹಿಡಿದವನಂತೆ ಮುಖಕ್ಕೆ ಹೊದಿಕೆಯನ್ನೆಳೆದುಕೊಂಡನು. ಜಾಲಪಳು ಮೆಲ್ಲಗೆ ಹೊದಿಕೆಯನ್ನು ಸರಿಸಿ ಅವನ ಮುಖವನ್ನು ನೋಡಿದಳು. ಅವನು ಕಣ್ಣು ಮುಚ್ಚಿ ಮಲಗಿ ದ್ದುದನ್ನು ಕಂಡು ಅದನ್ನೇ ದಿಟ್ಟಿಸಹತ್ತಿದಳು. ಜಾಗರಣೆಗೂ ನಿದ್ರೆಗೂ ಇರುವ ವ್ಯತ್ಯಾಸವು ಬಹಳ ಹೊತ್ತು ಅವಳಿಂದ ಮರೆಯಾಗಲಿಲ್ಲ. ಅವನ ಮೈಯನ್ನು ಮೆಲ್ಲಗೆ ಅಲುಗಿಸಿ ಕೇಳಿದಳು—ಏನು? ಇಷ್ಟರ ವರೆಗೂ ಜಾಗ ರಣವೆ?

ರಮಾ—ಏನೋ ಅಪ್ಪಾ, ನಿದ್ದೆಯೇ ಬೀಳಲೊಲ್ಲದು. ಹೀಗೆ ಬಿದ್ದು ಕೊಂಡು ಕೆಲಕಾಲ ಎಲ್ಲಾದರೂ ಪರಸ್ಥಳ ಸಂಚರಿಸಿ ಬರೋಣವೇ, ಎಂದು ಯೋಚಿಸುತ್ತಿದ್ದೆ. ಸ್ವಲ್ಪ ಏನಾದರೂ ಸಂಪಾದನೆಯಾಗುವುದೋ ನೋಡ ಬೇಕು.

ಜಾಲಪ—ನನ್ನನ್ನು ಕರೆದೊಯ್ಯುವಿರಲ್ಲವೆ?

ರಮಾ—ಪರದೇಶದಲ್ಲಿ ನಿನ್ನನ್ನು ಎಲ್ಲಿಗೆಂದು ಕಟ್ಟಿಕೊಂಡು ಹೋಗಲಿ?

ಜಾಲಪ—ಸರಿ ಹಾಗಾದರೆ ನಾನೊಬ್ಬಳೇ ಇಲ್ಲಿ ಇದ್ದಂತೆಯೇ ಎಂದೆಣಿ ಸಿ. ಒಂದು ಕ್ಷಣವೂ ಇಲ್ಲಿರಲಾರೆನು. ಅದಿರಲಿ, ನೀವು ಹೋಗುವುದಾದರೂ ಎಲ್ಲಿಗೆ?

ರಮಾ—ಇನ್ನೂ ನಿಶ್ಚಯಮಾಡಲಾಗಲಿಲ್ಲ.

ಜಾಲಪ—ಹಾಗಾದರೆ ನೀವು ನಿಜವಾಗಿಯೂ ನನ್ನನ್ನು ತೊರೆದು ಹೋಗುವಿರಾ? ನಾನಂತೂ ಒಂದು ದಿನವೂ ಇಲ್ಲಿರಲಾರೆ, ನನಗೆ ತಿಳಿಯಿತು. ನೀವು ನನ್ನನ್ನು ಪ್ರೀತಿಸುವುದಿಲ್ಲ. ಎಲ್ಲಾ ಬರಿ ನಟನೆ ಮಾತ್ರ.

ರಮಾ—ಪ್ರಿಯೇ ನಿನ್ನ ಪ್ರೇಮಪಾಶವೇ ನನ್ನನ್ನಿಲ್ಲಿ ಕಟ್ಟಿಟ್ಟಿರುವುದು. ಇಲ್ಲದೆ ಹೋಗಿದ್ದರೆ ಇಷ್ಟರ ವರೆಗೆ ನಾನೆಲ್ಲಿರುತ್ತಿದ್ದೆನೋ ಏನೊ?

ಜಾಲಪ— ಸುಳ್ಳು ಸುಳ್ಳೇ ಹೇಳುತ್ತಿದ್ದೀರಿ. ನನ್ನ ಮೇಲೆ ನಿಮಗೆ ನಿಜವಾದ ಪ್ರೇಮವಿದ್ದಿದ್ದರೆ ನೀವು ನನ್ನಲ್ಲಿ ಮುಚ್ಚು ಮರೆ ಮಾಡುತ್ತಿದ್ದಿರಾ? ನೀವು ನಿಮ್ಮ ಮನಸ್ಸಿನ ಆಳದಲ್ಲಿ ಅಡಗಿರುವ ಯಾವುದೋ ಒಂದು ವಿಷಯವನ್ನು ಬಹು ದಿನಗಳಿಂದ ನನ್ನ ಕಣ್ಣಿಗೆ ಬೀಳದಂತೆ ಅಡಗಿಸುವಂತೆ ತೋರುವುದು. ಬಹು ದಿನಗಳಿಂದ ನೀವು ಚಿಂತೆಯಲ್ಲಿ ಮುಳುಗಿರುವುದನ್ನು ನೋಡುತ್ತಿದ್ದೇನೆ. ನನ್ನೊಡನೆ ಹೇಳಬಾರದೆ? ನಂಬುಗೆಯಿಲ್ಲದಲ್ಲಿ ಪ್ರೇಮವಿರುವುದೆ?

ರಮಾ—ಇದು ನಿನ್ನ ಭ್ರಮೆ, ಜಾಲಪಾ, ನಿನ್ನಲ್ಲಿ ನಾನು ಮುಚ್ಚುಮರೆ ಮಾಡಲೇ ಇಲ್ಲವಲ್ಲಾ?

ಜಾಲಪ— ಹಾಗಾದರೆ ನೀವು ನನ್ನನ್ನು ಹೃದಯದಿಂದ ಪ್ರೀತಿಸುತ್ತಿರುವಿರಾ?

ರಮಾ—ಅದನ್ನು ಬಾಯಿಯಿಂದ ಹೇಳಬೇಕೆ?

ಜಾಲಪ—ಸರಿ, ಈಗ ನಾನೊಂದು ಪ್ರಶ್ನೆ ಕೇಳುತ್ತೇನೆ. ಜಾಗರೂಕರಾಗಿರಿ. ನೀವು ನನ್ನನ್ನು ಏಕೆ ಪ್ರೇಮಿಸುತ್ತಿರುವಿರಿ? ನನ್ನಾಣೆ, ಸತ್ಯ ಹೇಳಿ.

ರಮಾ—ನಿನ್ನ ಪ್ರಶ್ನೆಯು ವಿಚಿತ್ರವಾಗಿದೆ. ನಾನು ನಿನ್ನೊಡನೆ ಇದೇ ಪ್ರಶ್ನೆಯನ್ನು ಕೇಳಿದರೆ ನೀನೇನು ಉತ್ತರ ಕೊಡುವೆ?

ಜಾಲಪ—ಸರಿಯಾದ ಉತ್ತರವು ನನ್ನ ಬಳಿಯಿದೆ.

ರಮಾ—ಅದೇನು? ಹೇಳು.

ಜಾಲಪ—ನೀವು ಹೇಳಿದರೆ ನಾನೂ ಹೇಳುವೆನು.

ರಮಾ—ನನಗೆ ಗೊತ್ತೇ ಇಲ್ಲ. ನೀನು ನನ್ನ ರೋಮರೋಮಗಳಲ್ಲಿ ವ್ಯಾಪಿಸಿರುತ್ತಿ ಎಂಬುದು ನನಗೆ ಗೊತ್ತು.

ಜಾಲಪ—ಆಲೋಚಿಸಿ ಉತ್ತರ ಕೊಡಿ. ನಾನು ಆದರ್ಶ ಪತ್ನಿಯಲ್ಲವೆಂದು ನನಗೆ ಚೆನ್ನಾಗಿ ಗೊತ್ತಿದೆ. ಪತಿಸೇವೆಯೆಂಬುದನ್ನು ನಾನಿದುತನಕ ಹೆಸರಿಗಾದರೂ ಮಾಡಿಲ್ಲ. ದೇವರ ದಯೆಯಿಂದ ನಿಮಗಿದುವರೆಗೆ ಕಷ್ಟಗಳನ್ನು ಸಹಿಸುವ ಆಗತ್ಯವೇ ಬೀಳಲಿಲ್ಲ. ಮನೆವಾರ್ತೆಯು ಯಾವ ಕೆಲಸವನ್ನು ನಾನರಿಯೆ. ನಾನು ಕಲಿತುದೇನಿದೆಯೋ ಅದೆಲ್ಲಾ ಇಲ್ಲಿಯೇ ಸರಿ. ಅಂದಮೇಲೆ ನಿಮಗೆ ನನ್ನ ಮೇಲೆ ಏಕೆ ಪ್ರೇಮವಿದ್ದೀತು? ಮಾತುಕತೆಯಲ್ಲಿ ನಿಪುಣಳಲ್ಲ; ರೂಪ—ಬರೆಹಗಳಲ್ಲಿಯೂ ಹೇಳಿಕೊಳ್ಳುವಷ್ಟೇನೂ ನನ್ನಲ್ಲಿಲ್ಲ. ನಾನು ಹೀಗೇಕೆ ಪ್ರಶ್ನಿಸುತ್ತಿರುವೆನೆಂಬುದರ ಕಾರಣವೇನೆಂದು ನಿಮಗೆ ಗೊತ್ತಿದೆಯೋ?

ರಮಾ—ನನಗೇನೂ ತಿಳಿಯದು

ಜಾಲಪ—ನಿಮ್ಮ ಪ್ರೇಮವನ್ನು ಸ್ಥಾಯಿಯಾಗಿ ಮಾಡಲೆಂದೇ ಇವೆಲ್ಲಾ ಪ್ರಶ್ನೆಗಳನ್ನು ಕೇಳುತ್ತಿರುವೆನು.

ರಮಾ—ಸಹಜವಾಗಿ ಹೇಳುತ್ತೇನೆ, ಜಾಲಪಾ ನನಗೇನೂ ಅರಿಯದು. ನಿನ್ನಲ್ಲಿ ಏನಾದರೂ ಕೊರತೆಯಿದೆ, ದೋಷವಿದೆ ಎಂಬ ಮಾತು ನನ್ನ ತಿಳಿವಿಗೆ ಇಂದಿನ ವರೆಗೂ ಬರಲಿಲ್ಲ; ಆದರೆ ನೀನು ನನ್ನಲ್ಲಿ ಯಾವ ವಿಷಯವನ್ನು ಕಂಡಿರುವೆ ಹೇಳು. ನನ್ನ ಹತ್ತಿರ ಹಣವಿಲ್ಲ. ರೂಪವಿಲ್ಲ. ವಿದ್ಯೆಯಿಲ್ಲ. ಏನೇನೂ ಇಲ್ಲ.

ಜಾಲಪ—ಹೇಳಿಬಿಡಲೆ? ನಾನು ನಿಮ್ಮ ಸಜ್ಜನತೆಯ ಮೇಲೆ ಮೋಹಿತಳಾಗಿದ್ದೇನೆ ಇನ್ನು ನಿಮ್ಮ ಹತ್ತಿರ ಏನನ್ನು ಬಚ್ಚಿಡಲಿ? ನಾನು ಇಲ್ಲಿಗೆ ಬಂದ ಮೊದಲಲ್ಲಿ ಯಾವುದಾದರೂ ಕೆಲಸ ಮಾಡುವಾಗ ನಿಮಗದು ಇಷ್ಟವಾಗುತ್ತದೆಯೆ ಇಲ್ಲವೇ, ಎಂದು ಯೋಚಿಸುತ್ತಿದ್ದೆ. ನಿಮ್ಮ ಬದಲು ಬೇರೆ ಯಾರನ್ನಾದರೂ ವಿವಾಹವಾಗಿದ್ದರೂ ಅವನಲ್ಲಿ ಹೀಗೆಯೆ ವರ್ತಿಸುತ್ತಿದೆ.

ಇದು ಪತಿ-ಪತ್ನಿಯರ ಕ್ರಮಾಗತ ಸಂಬಂಧ. ಆದರೆ ಈಗ ನಾನು ನಿಮ್ಮನ್ನು ಸಾಕ್ಷಾತ್ ಗೋಪಿಯರ ಕೃಷ್ಣನೊಡನೆಯೂ ಬದಲಿಸಲಾರೆನು. ಆದರೆ ನಿಮ್ಮ ಹೃದಯದಲ್ಲಿ ಈಗಲೂ ಕಳ್ಳನಿದ್ದಾನೆ ಆದರೆ ಈಗಲೂ ನೀವು ನನಗೆ ಗೊತ್ತಾಗಬಾರದೆಂದು ಹಲಕೆಲವು ವಿಷಯಗಳನ್ನು ಮರೆಮಾಜುತ್ತಿದ್ದೀರಿ.

ರಮಾ—ಇದು ಸಮ್ಮನೆ ನಿನ್ನ ಸಂದೇಹವು ಮಾತ್ರ ಜಾಲಪಾ, ನಾನು ನನ್ನ ಗೆಳೆಯರೊಡನೆಯೂ ಕಠಿನತೆಯಿಂದ ವರ್ತಿಸುವುದಿಲ್ಲ. ನೀನಂತೂ ನನ್ನ ಹೃದಯೇಶ್ವರಿ.

ಜಾಲಪ—ನನ್ನ ಮುಖ ನೋಡಿ ಹೇಳಿರಿ. ನೆಲನೋಡಿ ಹೇಳುವುದು ಗಂಡಸರಿಗೆ ತಕ್ಕುದಲ್ಲ.

ರಮಾನಾಥನಿಗೆ ಒಂದು ಬಾರಿ ತನ್ನ ಕತೆಯನ್ನೆಲ್ಲಾ ಇವಳೊಡನೆ ಹೇಳಿಬಿಡಲೇ, ಎಂದು ತೋರಿತು; ಆದರೆ ವಿದ್ಯಾಗೌರವವು ಅವನ ನಾಲಿಗೆ ಯನ್ನು ಬಿಗಿಹಿಡಿಯಿತು.

ಜಾಲಪಳು ಸರಾಫನ ಹಣ ಸಲ್ಲಿಸುತ್ತಿದ್ದೀರಲ್ಲಾ, ಎಂದು ಕೇಳಿದಾಗ ರಮಾನಾಥನು ಅಲ್ಪ ಸ್ವಲ್ಪ ಪ್ರತಿತಿಂಗಳು ಕೊಡುತ್ತಾ ಬರುತ್ತಿದ್ದೇನೆಂದು ಹೇಳುತ್ತಿದ್ದನು; ಆದರೆ ಇಂದು ರಮಾನಾಥನ ದುರ್ಬಲತೆಯನ್ನು ಕಂಡು ಆಕೆಯ ಮನಸ್ಸಿನಲ್ಲಿ ಸಂದೆಹ ಉಂಟಾಯಿತು. ಆ ಸಂದೇಹವನ್ನು ಅವಳು ನಾಶಗೊಳಿಸಲೆಂದಿದ್ದಳು. ತುಸು ಹೊತ್ತಿನಲ್ಲಿ ಕೇಳಿದಳು—ಸರಾಫನ ಹಣ ವೆಲ್ಲಾ ಇಷ್ಟು ಹೊತ್ತಿನಲ್ಲಿ ತೀರಿರಲಿಕ್ಕಿಲ್ಲ.

ರಮಾ—ಸ್ವಲ್ಪ ಏನೋ ಬಾಕಿಯಿದೆ. ಅಷ್ಟೆ.

ಜಾಲಪ—ಎಷ್ಟಿರಬಹುದು? ಅದಕ್ಕೇನಾದರೂ ಲಕ್ಷ್ಯ, ಪಕ್ಷ ಇಟ್ಟಿ ದ್ದೀರಾ?

ರಮಾ—ಹಾಂ, ಮತ್ತೆ ಇಡದೆ? ಏಳೂನೂರಕ್ಕೆ ಕಡಮೆಯೇ ಆದೀತು.

ಜಾಲಪ—ಅದು ಹೌದಾದರೆ ಒಂದು ದೊಡ್ಡ ಹೊರೆಯೇ ಇಳಿದಂತಾ ಯಿತು. ನೀವು ಎಲ್ಲಾದರೂ ರತನಳ ಹಣವನ್ನು ಕೊಟ್ಟಿಲ್ಲವಷ್ಟೆ?

ಜಾಲಪಳು ಆ ಪ್ರಶ್ನೆಯನ್ನೆಲ್ಲಿ ಕೇಳಿ ಬಿಡುವಳೋ, ಎಂದು ರಮಾ ನಾಥನ ಎದೆಯು ನಡುಗುತ್ತಿತ್ತು. ಅಂತೂ ಅವಳ ಬಾಯಿಯಿಂದ ಅದು

ಬಂತೇ ಬಂತು. ಆಗಲಾದರೂ ರಮಾನಾಥನು ಎದೆಗಾರಿಕೆಯಿಂದ ನಿಜವಾದ ಸಂಗತಿಯನ್ನೊಪ್ಪಿಕೊಂಡಿದ್ದರೆ, ಅವನ ಸಂಕಟಗಳೆಲ್ಲಾ ಬಲುಮಟ್ಟಿಗೆ ನಿವಾರಣೆಯಾಗುತ್ತಿದ್ದುವು. ಜಾಲಪಳು ಒಂದು ಕ್ಷಣ ಸ್ತಬ್ಧಳಾಗಿ ಬಿಡುತ್ತಿದ್ದಳು ನಿಜ. ಕ್ರೋಧ ನಿರಾಶೆಗಳ ಆವೇಶದಲ್ಲಿ, ನಾಲ್ಕೆಂಟು ಕಟುಶಬ್ದಗಳನ್ನು ಹೇಳುತ್ತಿದ್ದಳು. ಆದರೆ ಆಮೇಲೆ ಶಾಂತಳಾಗದಿರುತ್ತಿದ್ದಳೆ ? ಮತ್ತೆ ಇಬ್ಬರೂ ಸೇರಿ ಏನಾದರೊಂದು ದಾರಿಯನ್ನು ಹುಡುಕಬಹುದಿತ್ತು. ರತನಳ ಹತ್ತಿರ ಜಾಲಪಳು ಈ ಗುಟ್ಟನ್ನು ಹೇಳಿದರೆ ಅವಳೂ ಒಪ್ಪದಿರುತ್ತಿದ್ದಿಲ್ಲ. ಆದರೆ ಅಯ್ಯೋ, ಆತ್ಮಗೌರವವವೆ ! ಜಾಲಪಳ ಮಾತುಗಳು ತನ್ನ ಮೇಲೆ ನಿಷ್ಠುರ ಪ್ರವಾಹ ಮಾಡಿದುವೆಂಬಂತೆ ರಮಾನಾಥನು ತನ್ನ ಮುಖವನ್ನು ಸೊಟ್ಟ ಮಾಡಿಕೊಂಡು ಹೇಳಿದನು— ರತನಳ ರೂಪಾಯಿಯನ್ನೇಕೆ ಕೊಡಬೇಕು ? ಬೇಕೆಂದಿದ್ದರೆ, ಇಲ್ಲೆ ನಿಂತಲ್ಲಿಯೆ ಎರಡು, ಮೂರು ಸಾವಿರ ರೂಪಾಯಿಗಳ ಒಡವೆಗಳನ್ನು ತರಿಸಬಲ್ಲೆನು. ಆ ಸೊನ್ನೆಗಾರರ ಸ್ವಭಾವವೇ ತಡಮಾಡುವಂತಹದು. ಇಷ್ಟೇ ಅಲ್ಲದೆ ಬೇರೇನೂ ಅಲ್ಲ. ಹತ್ತು ದಿನಗಳಲ್ಲಿ ಒಂದೇ ಬಳೆಗಳನ್ನು ಇಲ್ಲವೇ ರೂಪಾಯಿಗಳನ್ನು ತಂದೇ ತರುವೆ. ಆದರೆ ನಿನಗೀ ಸಂದೇಹವು ಏತಕ್ಕಾಗಿ ಉಂಟಾಯಿತು ? ಅವಳು ಕೊಟ್ಟ ಹಣವನ್ನು ನಾನು ನನ್ನ ಖರ್ಚಿಗೆ ಉಪಯೋಗಿಸುವೆನೆ ?

ಜಾಲಪ— ಹಾಗೇನೂ ಇಲ್ಲ. ಸುಮ್ಮನೆ ಕೇಳಿದೆನು, ಅಷ್ಟೆ.

ಜಾಲಪಳಿಗೆ ತುಸು ಹೊತ್ತಿನಲ್ಲಿ ನಿದ್ದೆ ಹತ್ತಿತು; ಆದರೆ ರಮಾನಾಥನ ತಲೆಯಲ್ಲಿ ರೂಪಾಯಿಗಳನ್ನೆಲ್ಲಿಂದ ತರುವುದೆಂಬ ವಿಚಾರವು ಸುಳಿಯುತ್ತಲೇ ಇತ್ತು. ರಮೇಶಬಾಬುಗಳ ಹತ್ತಿರ ಪ್ರಸ್ತಾಪಿಸಿದರೆ ಯಾರಕಡೆಯಿಂದಲಾದರೂ ತೆಗೆಸಿ ಕೊಟ್ಟಾರು. ಆದರೆ ಅವರ ಹತ್ತಿರ ಹೇಳುವ ಧೈರ್ಯ ಯಾರಿಗಿದೆ ?

ಅವನು ಮುಂಜಾನೆ ಉಪಹಾರವನ್ನು ಮುಗಿಸಿ ಆಫೀಸಿಗೆ ಹೊರಟನು. ಅಲ್ಲಿ ಏನಾದರೂ ಏರ್ಪಾಡಾದೀತೆಂದವನ ಎಣಿಕೆ. ಯಾರು ಏರ್ಪಾಡು ಮಾಡುವವರು ಎಂಬ ಯೋಚನೆ ಅವನಿಗಿಲ್ಲ. ವೈದ್ಯನ ಬಳಿಗೆ ಹೋಗುವ ರೋಗಿಗೆ ತಾನು ಸ್ವಸ್ಥವಾಗುವೆನೋ ಇಲ್ಲವೋ ಎಂಬುದು ತಿಳಿದಿರುವುದೆ ? ರಮಾನಾಥನು ಲೆಕ್ಕದ ಪಟ್ಟಿಯನ್ನು ತೆರೆದು ನೋಡಿದನು ಬಹಳ ದಿನ

ಗಳಿಂದ ಲೆಕ್ಕವನ್ನೊಪ್ಪಿಸಿರಲಿಲ್ಲ. ಕೂಡಿಸಿ ನೋಡಿದನು. ಎರಡೂವರೆ ಸಾವಿರ. ಎರಡೂವರೆಯ ಬದಲು ಎರಡೆಂದೇ ಬರೆದರೇನಾಗುವುದೆಂದು ಒಮ್ಮೆ ತೋಚಿತು. ರಶೀದಿಯನ್ನೆಲ್ಲಾ ಪರೀಕ್ಷಿಸಿ ಯಾರು ನೋಡುತ್ತಾರೆ? ಕಳವು ಪತ್ತೆಯಾದರೂ ಲೆಕ್ಕದಲ್ಲಿ ಹೆಚ್ಚು ಕಡಿಮೆಯಾಯಿತೆಂದು ಹೇಳಬಹುದು. ಆದರೆ ಅವನು ಈ ವಿಚಾರವನ್ನು ಬಹಳ ಹೊತ್ತು ತಲೆಯಲ್ಲಿ ಇರಗೊಡಲಿಲ್ಲ. ಬುದ್ಧಿಯು ಚಂಚಲವಾಗಬಹುದೆಂಬ ಭೀತಿಯಿಂದ ಆ ಅಂಕಿಗಳನ್ನು ಶಾಯಿಯಿಂದ ತಿದ್ದಿ, ಪುಸ್ತಕವನ್ನು ಪೆಟ್ಟಿಗೆಯೊಳಗಿರಿಸಿದನು.

ಅಲ್ಲೊಂದು ಇಲ್ಲೊಂದು ಗಾಡಿಗಳು ಬರಲಾರಂಭಿಸಿದುವು. ಇವೊತ್ತು ಬಾಬುಗಳು ಅಲ್ಲೇ ಇರುವುದನ್ನು ಕಂಡು ಗಾಡಿಯವರು ಬೇಗಬೇಗನೆ ತಮ್ಮ ಸುಂಕವನ್ನೊಪ್ಪಿಸಿ ಹೋಗಬೇಕೆಂದು ನಿಶ್ಚಯಿಸಿದರು ರಮಾನಾಥನು ತಾನು ತೋರಿಸಿದ ಕೃಪೆಗಾಗಿ, ಅವರಿಂದ, ಎಂದಿಗಿಂತ ಇಮ್ಮಡಿ ದಸ್ತೂರಿಯನ್ನೇ ವಸೂಲು ಮಾಡಿದನು. ಗಾಡಿಯವರಿಗೂ ಅದನ್ನು ಕೊಡುವುದಕ್ಕೆ ಆಕ್ಷೇಪವಿರಲಿಲ್ಲ. ಇಲ್ಲಿ ಕಾಡುತ್ತಾ ಕೂತರೆ ಅಲ್ಲಿ ಅಂಗಡಿಗಳು ಹತ್ತು-ಹನ್ನೊಂದು ಗಂಟೆಗೇ ಮುಚ್ಚುವುವು. ಮತ್ತೆ ಮೂರನೆಯ ದಿನದ ವರೆಗೆ ಕಾಲಕ್ಷೇಪ ಮಾಡಬೇಕಲ್ಲವೆ? ಆದುದರಿಂದ ಎಂಟು-ಹತ್ತು ರೂಪಾಯಿಗಳನಷ್ಟಕ್ಕೆ ಅವರು ಸೊಪ್ಪು ಹಾಕುತ್ತಿದ್ದಿಲ್ಲ. ರಮಾನಾಥನಿಗೆ ಇಂದು ಹೊಸತೊಂದು ವಿಷಯದ ಅರಿವಾಯಿತು. ಮನೆಯಲ್ಲಿ ಸುಮ್ಮನೆ ಕಾಲಹರಣ ಮಾಡುವುದಕ್ಕಿಂತ ಇಲ್ಲಿಗೆ ಸ್ವಲ್ಪ ಬೇಗ ಬಂದು, ದಿನವೂ ಹತ್ತಿಪ್ಪತ್ತು ರೂಪಾಯಿಗಳನ್ನು ಸಂಪಾದಿಸಬಹುದೆಂದು ಅವನ ಮನಸ್ಸು ಹಿಗ್ಗಿತು ದಿನಂಪ್ರತಿ ಹೀಗೆ ಹತ್ತು-ಹದಿನೈದು ಸಿಗದಿದ್ದರೂ, ಐದು-ಆರಕ್ಕೆ ಮೋಸವಿಲ್ಲ. ಐದಾರೇ ಸಿಕ್ಕಿದರೂ ಇನ್ನು ಐದಾರು ತಿಂಗಳಲ್ಲಿ ಸಾಲವೆಲ್ಲ 'ಫೈಸಲ್'! ಪೆಟ್ಟಿಗೆಯನ್ನು ತೆರೆದು ಈ ಹೊಸ ರಕಮನ್ನು ರಿಜಿಸ್ಟ್ರಿಯಲ್ಲಿ ಬರೆದಿಟ್ಟನು. ಈಗವನಿಗೆ ರಿಜಿಸ್ಟ್ರಿಯಲ್ಲಿ ಹೆಚ್ಚುಕಡಿಮೆ ಮಾಡುವುದು ಭಯಂಕರವೆಂದು ತೋರಲಿಲ್ಲ. ಸೈನ್ಯಕ್ಕೆ ಸೇರಿದಾತನು ಬಂದೂಕಿನ ಸಪ್ಪಳವನ್ನು ಕೇಳಿದೊಡನೆ ಬೆದರುತ್ತಿದ್ದರೂ. ಕೆಲಸಮಯಕಳೆದರೆ ಗುಂಡಿನ ಸುರಿಮಳೆಗೂ ಅವನು ಭಯಪಡುವುದಿಲ್ಲ.

ರಮಾನಾಥನು ಊಟಕ್ಕೆ ಹೊರಡುವ ಹೊತ್ತಿಗೆ ಸರಿಯಾಗಿ ವ್ಯಾಪಾರಿಯೊಬ್ಬನು ತನ್ನ ಸಾಮಾನು ಸಮೇತನಾಗಿ ಬಂದನು. ಊಟ ಮಾಡಿ ಬಂದ

ಮೇಲೆ ಎಲ್ಲ ಕೆಲಸವನ್ನು ಮಾಡುವೆನೆಂದು ರಮಾನಾಥನು ಹೇಳಿದನು. ವ್ಯಾಪಾರಿಯು ಒಪ್ಪಿಗೆಯನ್ನು ಮಾಡಹತ್ತಿದನು, ಅಂತೂ ಕಡೆಗೆ ಹತ್ತು ರೂಪಾಯಿಯೆಂದು ನಿಶ್ಚಯವಾಯಿತು. ರಮಾನಾಥನು ಸುಂಕ ತೆಗೆದುಕೊಂಡು ತನಗೆ ಸಲ್ಲತಕ್ಕ ಹತ್ತು ರೂಪಾಯಿಗಳ ಕಾಣಿಕೆಯನ್ನು ಕಿಸೆಗೆ ಹಾಕಿಕೊಂಡು ಮನೆಗೆ ಹೊರಟನು. ಎರಡು-ಎರಡೂವರೆ ತಾಸುಗಳಲ್ಲಿ ಇಪ್ಪತ್ತೈದು ರೂಪಾಯಿಗಳನ್ನು ಸಂಪಾದಿಸಿದಂತಾಯಿತು. ಇದೇ ಸರಾಸರಿ ಒಂದು ತಿಂಗಳವರೆಗೆ ನಿಂತಿತೆಂದರೆ, ದುಸ್ತರವಾದ ನದಿಯನ್ನು ದಾಟಿಯಾಗುವುದು. ಹತ್ತು ದಿನಗಳ ಮಟ್ಟಿಗೆ ಇದೇ ತೇಜಿಯು ನಿಂತರೆ ಸಾಕು; ರತನಳಿಂದ ಮುಖಮರೆಯಿಸಿಕೊಳ್ಳುವ ಪ್ರಸಂಗವು ತೊಲಗಿ ಹೋಗುವುದು.

## ೧೭

ಒಂಬತ್ತು ದಿನಗಳು ಸರಿದವು, ರಮಾನಾಥನು ದಿನಾಲೂ ಬೆಳಿಗ್ಗೆ ಎದ್ದು ಹೊರಟು ಹೋದವನು, ದೀಪಹಚ್ಚಿದ ಮೇಲೆಯೇ ಮನೆಗೆ ಮರಳುವನು. ಮಧ್ಯಾಹ್ನ ಊಟಕ್ಕೂ ಮನೆಗೆ ಮರಳುತ್ತಿದ್ದಿಲ್ಲ. ದಿನವೂ ಏನಾದರೊಂದು ದೊಡ್ಡ ಬೇಟೆಯು ಸಿಗುವುದೆಂಬ ಆಸೆಯನ್ನಿಟ್ಟುಕೊಂಡು ಕುಳ್ಳಿರುತ್ತಿದ್ದನು. ಆದರೂ ಅವನು ನೂರು ರೂಪಾಯಿಗಳನ್ನು ಈ ಒಂಬತ್ತು ದಿನಗಳಲ್ಲಿ ಗಳಿಸಿದ್ದು ಕಡಿಮೆ ಕೀರ್ತಿಯ ಮಾತಲ್ಲವಷ್ಟೆ! ನಾಳೆ ರತನಳು ಬಂದು ಬಳೆ ಕೇಳುವಳು. ಆಗವಳಿಗೆ ಉತ್ತರವೇನೆಂದು ಕೊಡಲಿ? ಇನ್ನೊಂದು ತಿಂಗಳು ಅವಳು ತಡೆಯುಲಾರಳೆ? ಅಷ್ಟುಕಾಲ ಅವಳು ಸುಮ್ಮಗಿದ್ದರೆ, ಅವನು ಋಣಮುಕ್ತನಾಗುವನು. ಏನಾದರೂ ನುಣ್ಣನೆಯ ಬಣ್ಣದ ಮಾತುಗಳನ್ನಾಡಿ ಅವಳನ್ನು ಒಪ್ಪಿಸುವೆನೆಂದು ಅವನು ನಿರ್ಧರಿಸಿದನು. ಆದಕ್ಕೂ ಕೇಳದಿದ್ದರೆ ಸರಾಫನು ರೂಪಾಯಿ ಹಿಂದೆ ಕೊಡಲೊಪ್ಪುವುದಿಲ್ಲದೆಂದು ಹೇಳಿದರಾಯಿತು.

ಶ್ರಾವಣದ ದಿನಗಳವು. ಕತ್ತಲಾಗಿದ್ದಿತು. ಅಷ್ಟರಲ್ಲಿ ರತನಳು ಬಂದುಬಿಟ್ಟಳು. ಅವಳ ಮುಖ ಮುದ್ರೆಯು ಜಗಳಕ್ಕೆ ಸಿದ್ಧಳಾಗಿಯೇ ಬಂದವಳಂತಿತ್ತು.

ಜಾಲಪಳು ಹೇಳಿದಳು—ನೀನು ಬಂದುದು ಚೆನ್ನಾಯಿತು. ಇಂದು ನಾನೂ ನಿನ್ನೊಡನೆ ಆಡ್ಡಾಡಲು ಬರುವೆನು. ಇವರಿಗೆ ಈಗ ಕೆಲಸದ

ಹೊರೆಯ ದೆಸೆಯಿಂದ ಕಳೆಯುತ್ತಿರುವುದಕ್ಕೂ ಅವಕಾಶವಿಲ್ಲ

ರತನಳು ನಿಷ್ಠುರತೆಯಿಂದ ಹೇಳಿದಳು—ನನಗೆ ಇವೊತ್ತು ಬೇಗನೇ ಮನೆಗೆ ಹೋಗಬೇಕಾಗಿದೆ. ಇವರಿಗೆ ಮೊನ್ನೆಯ ನೆನಪು ಹುಟ್ಟಿಸುವುದ ಕ್ಕೆಂದು ಬಂದಿರುವೆನು.

ರಮಾನಾಥನು ಆಕೆಯ ಇಳಿಮೋರೆಯನ್ನು ಕಂಡು ಬಹಳ ಬೆದರಿ ದನು. ಹೇಗಾದರೂ ಅವಳನ್ನು ಸಂತೋಷಪಡಿಸಬೇಕೆಂದೆಣಿಸಿ ಬಹಳ ತತ್ಪ ರತೆಯಿಂದ ಹೇಳಿದನು—ಹೌದವ್ವಾ, ನೆನಪಿದೆ. ಚೆನ್ನಾಗಿ ನೆನಪಿದೆ. ಈಗ ಆ ಸರಾಫನ ಅಂಗಡಿಯಿಂದಲೇ ಬರುತ್ತಿದ್ದೇನೆ. ದಿನಾಲೂ ಬೆಳಗ್ಗೆ-ಸಂಜೆ ಅವನ ಅಂಗಡಿಯಲ್ಲಿ ಹಾಜರು ಒಪ್ಪಿಸಿ ಬರುತ್ತಿದ್ದೇನೆ. ಆದರೆ ಈ ಒಡವೆಗಳಿಗೆ ಎಷ್ಟು ಸಮಯ ತಾಗುತ್ತದಂತೀರಿ? ನಾವು ಕೊಡುವ ಹಣ ಆದರ ಕೆಲಸಕ್ಕೆ ಸಾಲದು ಇಬ್ಬರು ಹಿಡಿದಿದ್ದಾರೆ. ಇನ್ನೊಂದು ತಿಂಗಳಲ್ಲಿ ತಯಾರಾಗುವುದು ನೀವು ಏನು ಬೇಕಾದರೂ ಹೇಳಿ, ಕೆಲಸ ಬಹಳ ನಾಜೂಕು

ಆದರೆ ರತನಳು ಸ್ವಲ್ಪವೂ ಕರಗಲಿಲ್ಲ. ಸಿಡುಕಿನಿಂದ ಹೇಳಿದಳು— ಚೆನ್ನಾಯಿತು! ಇನ್ನು ಒಂದು ತಿಂಗಳು ಬೇಕೆ? ಮೂರು ತಿಂಗಳಲ್ಲೂ ಮುಗಿಯದ ಕೆಲಸವೇ? ನೀವು ಅವನೊಡನೆ ನನ್ನ ರೂಪಾಯಿ ಹಿಂದೆ ಕೊಡುವಂತೆ ಹೇಳಿರಿ. ಆಶೆಯ ಬಳೆಗಳನ್ನು ಅಪ್ಸರೆಯರು ಕೊಡುತ್ತಿರ ಬಹುದು. ನಮಗದು ಬೇಡ.

ರಮಾ—ಒಂದು ತಿಂಗಳಲ್ಲಿ, ಅದಕ್ಕೂ ಶೀಘ್ರದಲ್ಲಿ ಮಾಡಿಸಿಕೊಡು ವೆನು. ಒಂದು ತಿಂಗಳೆಂದು ಹೀಗೆ ಅಂದಾಜಿಗೆ ಹೇಳಿದೆನಷ್ಟೆ.

ರತನ—ನನಗೆ ಬಳೆಯೇ ಬೇಡವೆಂದೆನಲ್ಲ? ನನ್ನ ರೂಪಾಯಿಗ ಳನ್ನು ಹಿಂದೆ ತನ್ನಿರಿ. ನಾನು ಕೂಡಾ ಚಿನ್ನದ ಕೆಲಸದವರನ್ನು ಕಂಡಿದ್ದೇನೆ. ನಿಮ್ಮ ದಯೆಯಿದ್ದರೆ ಈಗಲೂ ನನ್ನ ಹತ್ತಿರ ಮೂರು ಜತೆ ಬಳೆಗಳು ಬಿದ್ದುಕೊಂಡಿರುವುದನ್ನು ತೋರಿಸಬಲ್ಲೆ. ಇಂತಹ ವಂಚನೆಯನ್ನು ಮಾತ್ರ ಎಲ್ಲಿಯೂ ನೋಡಲಿಲ್ಲ.

ವಂಚನೆಯೆಂಬ ಶಬ್ದವನ್ನು ಕೇಳಿ ರಮಾನಾಥನಿಗೆ ಮರ್ಮಘಾತವಾ ದಂತಾಯಿತು. ಹೇಳಿದನು—ವಂಚನೆಯಲ್ಲ. ನನ್ನ ಮೂರ್ಖತನವೆನ್ನಿರಿ

ಹೀಗಾಗುವುದೆಂದು ಗೊತ್ತಿದ್ದರೆ ನನ್ನ ಪ್ರಾಣವನ್ನು ಸಂಕಟಕ್ಕೆ ಒಡ್ಡುತ್ತಿದ್ದೆನೆ ? ಅವನು ಸಂತೋಷಪಟ್ಟು ಒಡವೆಗಳನ್ನು ಆದಷ್ಟು ಬೇಗನೆ ಮಾಡಿಕೊಟ್ಟಾನೆಂದು ಬಗೆದು ಹಣವನ್ನು ಮುಂಗಡತೆತ್ತೆನು. ನೀವು ಈಗ ರೂಪಾಯಿ ಬೇಕೆನ್ನುತ್ತೀರಿ. ಅವನು ಕೊಡಲು ಒಪ್ಪುವುದಿಲ್ಲ.

ರತನಳು ತೀವ್ರ ನೇತ್ರಗಳಿಂದ ಹೇಳಿದಳು—ಏನು, ರೂಪಾಯಿಗಳನ್ನು ಹಿಂದೆ ಕೊಡಲೊಪ್ಪುವುದಿಲ್ಲವೆ ? ಕಾರಣ ?

ರಮಾ -ನಿಮಗಾಗಿ ಮಾಡಿದ ವಸ್ತುವನ್ನು ಅವನು ಎಲ್ಲಿಗೆಂದು ಮಾರುತ್ತಾ ತಿರುಗಬೇಕು ? ಅದು ಮಾರಿ ಹೋಗಬೇಕಾದರೆ ಒಂದು ವರ್ಷ ತಗಲಿದರೂ ತಗಲೀತು. ಒಬ್ಬರು ಮೆಚ್ಚಿದುದು ಎಲ್ಲರ ಮನಸ್ಸಿಗೂ ಹಿಡಿಯಬೇಕೆಂದೇನೂ ಇಲ್ಲವಷ್ಟೆ ?

ರತನಳು ಹುಬ್ಬುಗಂಟಿಕ್ಕಿ ಹೇಳಿದಳು—ಅದು ನನಗೆ ಗೊತ್ತಿಲ್ಲ. ತಡ ಮಾಡಿದವನು ಅವನೇ ದಂಡವನ್ನು ಭೋಗಿಸಲಿ. ನಾಳೆ ನನಗೆ ಒಂದೇ ಬಳೆಗಳನ್ನು, ಇಲ್ಲವೇ ರೂಪಾಯಿಗಳನ್ನು ತಂದು ಕೊಡಿರಿ. ನಿಮಗೂ ಸರಾಫನಿಗೂ ಗೆಳೆತನವಿರುವುದರಿಂದ ಅವನ ಹತ್ತಿರ ಸ್ಪಷ್ಟವಾಗಿ ಕೇಳಲಿಕ್ಕೆ ಮನಸ್ಸು ಬರುವುದಿಲ್ಲವಾದರೆ, ನನಗೆ ಅವನ ಅಂಗಡಿಯನ್ನು ತೋರಿಸಿ. ಬೇಡ, ನಿಮಗೆ ಅಷ್ಟು ಮಾಡುವುದಕ್ಕೂ ನಾಚಿಕೆ ಬಿಡದಲ್ಲವೆ ? ಅವನ ಹೆಸರನ್ನಾದರೂ ಹೇಳಿ, ನಾನು ಪತ್ತೆ ಹಚ್ಚುತ್ತೇನೆ ಒಳ್ಳೆಯ ತಮಾಷೆಯಾಯಿತಲ್ಲ ಇದು ! ಅಂಗಡಿಯನ್ನು ಲಿಲಾಂ ಮಾಡಿಸುತ್ತೇನೆ, ಜೈಲಿಗೆ ಅಟ್ಟುತ್ತೇನೆ. ಈ ಸೀಜರ ಹತ್ತಿರ ಜಗಳವಾಡದೆ ಕೆಲಸವಾಗುವಂತೆಯೆ ಇಲ್ಲ.

ರಮಾನಾಥನು ಅಪ್ರತಿಭನಾಗಿ ನೆಲವನ್ನು ನೋಡತೊಡಗಿದನು. ಎಂತಹ ವಿಷಗಳಿಗೆಯಲ್ಲಿ ಅವನು ರತನಳ ರೂಪಾಯಿಯನ್ನು ತೆಗೆದುಕೊಂಡನೊ ! ಬೇಕೆಂದೇ ವಿಪತ್ತೊಂದನ್ನು ತಲೆಯಮೇಲೆ ಹೊರಿಸಿಕೊಂಡಂತಾಯಿತು.

ಜಾಲಪಳು ಹೇಳಿದಳು—ಇವಳನ್ನು ಸರಾಫನ ಅಂಗಡಿಗೆ ಕರೆದುಕೊಂಡು ಹೋಗಬಾರದೆ ? ಒಡವೆಯನ್ನು ಕಣ್ಣಿಂದ ನೋಡಿದರಾದರೂ ಇವಳಿಗೆ ಸಂತೋಷವಾಗದಿರದು.

ರತ್ನನ—ನನಗೆ ಆ ಒಡವೆ ಬೇಡವೇ ಬೇಡ.

ರಮಾನಾಥನು ನಡುಗುತ್ತ ಹೇಳಿದನು—ಸರಿ ನಿಮ್ಮ ಹಣವು ನಾಳೆಗೇ ಸಿಗುವುದೆಂದೆಣಿಸಿರಿ.

ರತನ—ನಾಳೆ ಯಾವ ಹೊತ್ತಿಗೆ ?

ರಮಾ—ಆಫೀಸಿನಿಂದ ಮರಳುವಾಗ ತರುವೆನು.

ರತನ—ಪೂರಾ ಹಣ ವಸೂಲು ಮಾಡ ವತ್ತೆ, ನೂರಿನ್ನೂರು ರೂಪಾಯಿ ಮಾತ್ರ ಕೊಟ್ಟು ನಿಮ್ಮನ್ನು ನಿವಾರಿಸಿ ಬಿಟ್ಟಾನು.

ರಮಾ—ನಾಳೆ ನಿಮ್ಮ ಎಲ್ಲಾ ಹಣವೂ ನಿಮಗೆ ಹಿಂದೆ ದೊರೆಯುವುದು.

ಈ ಮಾತನ್ನು ಹೇಳುತ್ತಾ ರಮಾನಾಥನು ಗಂಡಸರ ಕೊಠಡಿಗೆ ಬಂದನು. ಒಂದು ಚೀಟಿಯನ್ನು ಬರೆದು, ಗೋಪಿಯ ಹತ್ತಿರ ಕೊಟ್ಟು ರಮೇಶಬಾಬುಗಳಿಗೆ ಇದನ್ನು ತೋರಿಸಿ ಉತ್ತರ ತರಬೇಕೆಂದು ಹೇಳಿದನು. ಇನ್ನೊಂದು ಚೀಟಿಯನ್ನು ಬರೆದು ವಿಶ್ವಂಭರನ ಹತ್ತಿರ ಕೊಟ್ಟು ಮಾಣಿಕ ದಾಸರಿಗೆ ಇದನ್ನು ತೋರಿಸಿ ಉತ್ತರ ತರಬೇಕೆಂದು ಹೇಳಿ ಕಳುಹಿದನು.

ವಿಶ್ವಂಭರನೆಂದನು—ಮಳೆ ಬರುತ್ತಿದೆ.

ರಮಾ—ಮಳೆ ಬಂದರೇನು ? ಲೋಕ ಮುಳುಗಿ ಹೋದೀತೆ ? ಬೇಗ ಓಡಿಹೋಗು.

ವಿಶ್ವಂಭರ—ಅವರು ಮನೆಯಲ್ಲಿಲ್ಲದಿದ್ದರೆ ?

ರಮಾ—ಇದ್ದೇ ಇರುತ್ತಾರೆ.

ಗೆಳೆಯರೊಡನೆ ರಮಾನಾಥನು ಹಣಬೇಡಿದುದು ಇದೇ ಮೊದಲು. ಇದು ಅವನ ಹೊಸ ಅನುಭವ. ಅಂತಹ ಕಾಗದಗಳು ಅವನಿಗೂ ಬರುತ್ತಿದ್ದುವು. ಅವನ್ನು ಕಂಡು ಅವನ ಹೃದಯವು ಕರಗುತ್ತಿತ್ತು. ಆದರೆ ಉಪಾಯ ಗಾಣದೆ ಅವನು ಎಷ್ಟೋ ಸಲ ನೆವ ಹೇಳಿದ್ದನು. ರಮೇಶಬಾಬುಗಳೂ ಹಾಗೆ ನೆವವನ್ನೊಡ್ಡಿಯಾರೆ ? ಅವನು ಬಾಗಿಲಬಳಿಯೆ ಸುತ್ತಾಡಹತ್ತಿದನು. ರತನಳ ಮೋಟರು ಅದುತನಕವೂ ನಿಂತಿತ್ತು. ಅವಳು ಹೊರಗೆ ಬಂದಳು. ರಮಾನಾಥನನ್ನು ನೋಡಿದರೂ ಮಾತಾಡಿಸದೆ ಮೋಟರಿನಲ್ಲಿ ಕೂತು ಹೋಗಿಬಿಟ್ಟಳು.

ಇಬ್ಬರೂ ಎಲ್ಲಿ ಹೋದರೋ ? ಎಲ್ಲಾ ವನೂ ಅತುತ್ತ ನಿಂತಿರುವರೋ ಏನೊ ? ರಮೇಶಬಾಬುಗಳು ರೂಪಾಯಿ ಕೊಟ್ಟರೆ ಹೇಳುವುದೇನು ? ಸುಮ್ಮನೆ ಇನ್ನೂರು ಕೇಳಿದೆ. ಅವರ ಹತ್ತಿರ ಅಷ್ಟು ಇದೆಯೋ ಇಲ್ಲವೋ ? ಈ ಮಾಣಿಕದಾಸನು ಮನಸ್ಸು ಮಾಡಿದರೆ ಇನ್ನೂರೇಕೆ, ಸಾವಿರ ರೂಪಾಯಿ ಗಳನ್ನಾದರೂ ಕೊಡಬಲ್ಲನು. ಇವತ್ತು ನೋಡಬೇಕು. ಇವನ ಗೆಳೆತನದ ಪರೀಕ್ಷೆಯಾಗುವುದು ಇವರಿಬ್ಬರೂ ಇವೊತ್ತು ರೂಪಾಯಿ ಕೊಡದಿದ್ದರೆ ಮತ್ತೆ ಇವರ ಹತ್ತಿರ ಮಾತಾಡುವುದೂ ಇಲ್ಲ. ಆಗ ಏನಾದರೂ ಸಣ್ಣ ಸದ್ದಾದರೂ ರಮಾನಾಥನ ಎದೆಯು ಜೋರಾಗಿ ಬಡಕೊಳ್ಳುವುದು. ಕೊನೆಗೆ ವಿಶ್ವಂಭರನು ಬಂದನು. ಮಾಣಿಕನು ಬರೆದಿದ್ದನು—' ಈಗ ಸಾಧ್ಯ ವಿಲ್ಲ. ನಾನೇ ನಿನ್ನನ್ನು ಕೇಳಬೇಕೆಂದಿದ್ದೆ ' ಎಂದು.

ರಮಾನಾಥನು ಆ ಪತ್ರವನ್ನು ಹರಿದೊಗೆದನು. ' ಸಬ್ ಇನಸ್ಪೆಕ್ಟ ರರು ಕೇಳಿರುತ್ತಿದ್ದರೆ ಚೀಟಿ ಕಂಡೊಡನೆ ರೂಪಾಯಿ ಹಿಡಿದುಕೊಂಡು ಓಡಿ ಬರುತ್ತಿದ್ದನು. ಇರಲಿ, ನೋಡುವ. ಸುಂಕಕ್ಕೆ ಮಾಲು ತರುವಾಗ ಬುದ್ಧಿ ಕಲಿಸದೆ ಬಿಡುತ್ತೇನೆಯೆ ?

ಅಷ್ಟರಲ್ಲಿ ಗೋಪಿಯೂ ಬಂದನು. ರಮೇಶಬಾಬುಗಳು ಬರೆದಿದ್ದರು— ನಾನು ನನ್ನ ಜೀವನದಲ್ಲೆ ಕೆಲವು ನಿಯಮಗಳನ್ನು ಅನುಸರಿಸುತ್ತಿದ್ದೇನೆ. ಬಹಳ ಕಠೋರತೆಯಿಂದ ಅವುಗಳನ್ನು ಪಾಲಿಸುತ್ತಾ ಬಂದಿದ್ದೇನೆ. ಅವುಗ ಳಲ್ಲಿ ಮಿತ್ರರೊಡನೆ ಕೊಡುಕೊಳೆಯನ್ನು ನಡೆಯಿಸುವುದಿಲ್ಲವೆಂಬುದೂ ಒಂದಾಗಿದೆ. ಇದೀಗ ನಿನಗದರ ಅನುಭವವಿಲ್ಲ. ಆದರೆ ಇನ್ನು ಕೆಲವು ದಿನ ಗಳಲ್ಲಿ ನಿನಗೇ ತಿಳಿಯುವುದು. ಮಿತ್ರರಲ್ಲಿ ಕೊಡುಕೊಳೆ ಆರಂಭವಾದ ಮೇಲೆ ಪರಸ್ಪರ ಮನಸ್ಸು ಮುರಿಯುವುದಕ್ಕೆ ಮತ್ತೆ ಹೆಚ್ಚು ಕಾಲ ಹಿಡಿಯು ವುದಿಲ್ಲ. ನೀನು ನನ್ನ ಒಲವಿನ ಗೆಳೆಯನು, ನಿನ್ನ ಹತ್ತಿರ ನಾನು ಹಗೆ ಕಟ್ಟಿಕೊಳ್ಳಲಾರೆ. ಆದುದರಿಂದ ನನ್ನನ್ನು ಕ್ಷಮಿಸು. '

ರಮಾನಾಥನು ಆ ಪತ್ರವನ್ನು ಹರಿದು ಬಿಸುಟು, ಕುರ್ಚಿಯಲ್ಲಿ ಕೂತು ದೀಪವನ್ನು ನೆಟ್ಟದಿಟ್ಟಿಯಿಂದ ನೋಡತೊಡಗಿದನು. ಆವನ ಕಣ್ಣುಗಳಿಗೆ ದೀಪವು ಕಾಣಬರುತ್ತಿತ್ತೆಂದು ಖಂಡಿತವಾಗಿ ಹೇಳಬರುತ್ತಿದ್ದಿಲ್ಲ. ಈ ಏಕಾ

ಗ್ರತೆಯಿಂದವನು ಕದಾಚಿತ್ ಆಗಸದ ಕರಿ ಮೋಡಗಳನ್ನು ನಿಟ್ಟಿಸ ಬಹುದಿತ್ತು.

ಮನಸ್ಸಿನ ಸ್ಥಿತಿ ಒಮ್ಮೊಮ್ಮೆ ಹೀಗೂ ಆಗುವುದುಂಟು—ಕಣ್ಣುಗಳು ತೆರೆದಿದ್ದರೂ ಏನೂ ಕಾಣಿಸದು; ಕಿವಿಗಳು ಅರಳಿಕೊಂಡಿದ್ದರೂ ದನಿ ಕೇಳಿಸದು.

## ೧೮

ಸಂಜೆಯಾಗಿತ್ತು. ಮುನಿಸಿಪಾಲಿಟಿಯ ಆಪಾರದಲ್ಲಿ ಮೌನವು ನೆಲಸಿತ್ತು. ರಮಾನಾಥನು ಕುರ್ಚಿಯಲ್ಲಿ ಕುಳಿತು, ಮರ್ಯಾದೆಯನ್ನು ಉಳಿಸಿಕೊಳ್ಳುವ ಬಗೆ ಯಾವುದೆಂದು ಚಿಂತಿಸುತ್ತಿದ್ದನು ಕಡೆಗೆ ರತನಳ ಕಣ್ಣಿಗೆ ಮಣ್ಣೆರಚಿಯಾದರೂ ಕೆಲಸ ಸಾಧಿಸಬೇಕೆಂದು ನಿರ್ಧರಿಸಿದನು. ತಾನವಳ ರೂಪಾಯಿಯನ್ನು ತಿಂದು ಹಾಕಿರುವೆನೋ ಎಂಬ ಭಯದಿಂದ ಅವಳು ಈ ರೀತಿ ಅಧೀರಳಾಗಿರುವಳೆಂದು ಅವನಿಗೆ ಚೆನ್ನಾಗಿ ತಿಳಿದಿತ್ತು. ರೂಪಾಯಿ ತುಂಬಿದ ಚೀಲವನ್ನು ತೋರಿಸಿದಾಗ ಅವಳು ಶಾಂತಳಾಗುವುದರಲ್ಲಿ ಸಂದೇಹವಿಲ್ಲ ರಮಾನಾಥನು ಖಜಾಂಚಿಯವರು ಹೊರಟು ಹೋಗುವ ಸಮಯವನ್ನು ನಿರೀಕ್ಷಿಸುತ್ತಿದ್ದನು. ಬೇಕೆಂದೇ ತಡಮಾಡುತ್ತಿದ್ದನು. ಇವೊತ್ತು ಜಮೆಯಾದ ಎಂಟುನೂರು ರೂಪಾಯಿಗಳು ಅವನ ಹತ್ತಿರವೇ ಇದ್ದುವು. ಅವನ್ನು ತನ್ನ ಮನೆಗೆ ಒಯ್ದು ಬಿಡುವುದೆಂದು ಯೋಚಿಸಿದನು. ನಾಲ್ಕು ಗಂಟೆಯ ಹೊತ್ತಿಗೆ ಖಜಾಂಚಿಯವರು ಎದ್ದು ಹೊರಟು ಹೋದರು. ಅವರು ಸ್ವಲ್ಪ ದೂರ ಹೋಗಿರಬಹುದೆಂದು ಖಚಿತವಾದ ಮೇಲೆ, ರಮಾನಾಥನು ರಿಜಿಸ್ಟ್ರಿಯನ್ನು ಮುಚ್ಚಿ, ಪೇದೆಯೊಡನೆ ಹೇಳಿದನು—ದುಡ್ಡಿನ ಚೀಲ ಹಿಡಿದುಕೋ. ಖಜಾಂಚಿಯವರ ಕಡೆ ಹೋಗುವ.

ಪೇದೆ ಹೇಳಿದನು— ಅವರು ಹೊರಟು ಹೋಗಿಯಾಯಿತು !

ರಮಾನಾಥನು ಕಣ್ಣು ದೊಡ್ಡದು ಮಾಡಿಕೊಂಡು ಹೇಳಿದನು—ಏನು ಹೋಗಿಯಾಯಿತೆ ? ನೀನು ನನಗೇಕೆ ತಿಳಿಸಲಿಲ್ಲ ?

ಪೇದೆ—ಅಪ್ಪಣೆಯಾದರೆ ಕರೆತರುವೆನು.

ರಮಾ—ಬೇಡ ಬಿಡು, ಇಷ್ಟರವರೆಗೆ ಹೇಳಲಿಲ್ಲ ಈಗ ನಡು ದಾರಿಯಲ್ಲಿ ಅವರನ್ನು ಅಡ್ಡಗಟ್ಟಿ ಹಿಂದೆ ಬರಮಾಡುವುದೆ ? ನೀನು ಶುದ್ಧ

ಮೂರ್ಖನು. ಇರಲಿ. ಈ ರೂಪಾಯಿಯನ್ನು ಇಲ್ಲೇ ಪೆಟ್ಟಿಗೆಯಲ್ಲಿಡುತ್ತೇನೆ. ನಿನ್ನ ಜವಾಬ್ದಾರಿಯಲ್ಲಿರಲಿ.

ಪೇದೆ—ಬೇಡ ಬೇಡ, ನನಗೆ ಆ ಹೊಣೆಗಾರಿಕೆ ಬೇಡಪ್ಪಾ. ಎಲ್ಲಾದರೂ ರೂಪಾಯಿಗಳು ಕಳವಾದರೆ ನನ್ನ ಕುತ್ತಿಗೆಗೆ ಬರುವುದು. ಇನ್ನು ಒಂದು ಗಟ್ಟಿ ಬೀಗವಾದರೂ ಇದೆಯೆ ? ಅದೂ ಇಲ್ಲ.

ರಮಾ—ಹಾಗಾದರೆ ಇದನ್ನು ಎಲ್ಲಿಡಲಿ ?

ಪೇದೆ—ನಿಮ್ಮ ಜತೆಯಲ್ಲೆ ಒಯ್ಯಿರಿ.

ರಮಾನಾಥನಿಗೆ ಬೇಕಾಗಿದ್ದುದೂ ಇಷ್ಟೆ. ಕುದುರೆಬಂಡಿಯಮೇಲೆ ಥೈಲಿಯನ್ನಿರಿಸಿ ಮನೆಗೆ ಹೊರಟನು. ಈ ರೂಪಾಯಿಯನ್ನು ನೋಡಿ ರತನಳು ನನ್ನನ್ನು ನಂಬುವಳು. ಮೂರು ನಾಲ್ಕು ದಿನಗಳಲ್ಲಿ ಕೆಲಸವು ಪೂರ್ತಿಯಾಗುವುದೆಂದು ಹೇಳುವೆನು. ಕಣ್ಣೆದುರು ಈ ಚೀಲವನ್ನು ಕಂಡು ಅವಳಿಗೂ ವಿಶ್ವಾಸಉಂಟಾಗದಿರದು.

ಮನೆಗೆ ತಲುಪಿದೊಡನೆ ಜಾಲಪಳು ಬಳೆಯವಿಷಯ ಏನಾಯಿತೆಂದು ಕೇಳಿದಳು. ರಮಾನಾಥನು ಸರಾಫನು ಇನ್ನೂ ಕೊಟ್ಟಿಲ್ಲವೆಂದನು. 'ರತನಬಾಯಿಯವರು ಬರಲಿಲ್ಲವೆ ?' ಎಂದು ಕೇಳಿದನು. ಜಾಲಪಳು 'ಇಲ್ಲ' ವೆಂದಳು.

ಇದನ್ನು ಕೇಳಿ ರಮಾನಾಥನು ಆಕೆ ಇನ್ನೂ ಬರಲಿಕ್ಕಿಲ್ಲವೆಂದೆಣಿಸಿ ದೀಪ ಹಚ್ಚುವ ಹೊತ್ತಿಗೆ ಹೊರಗೆ ಅಡ್ಡಾಡಲು ಹೋದನು. ಅವನು ಹೋಗಿ ಹತ್ತು ನಿಮಿಷಗಳಲ್ಲಿ ರತನಳು ಬಂದು ತಲುಪಿದಳು. ಮೆಟ್ಟಲು ಮೇಲೇರುತ್ತಿದ್ದಂತೆಯೇ ಕೇಳಿದಳು—ಬಳೆಗಳು ಬಂದಿವೆಯಷ್ಟೆ ?

ಜಾಲಪ—ಹಾಂ, ಬಂದಿವೆ. ತೊಟ್ಟುಕೊಳ್ಳುವುದು ಮಾತ್ರ ಬಾಕಿ ಇನ್ನು. ಪಾಪ, ಎಷ್ಟೋ ಸಲ ಹೋಗಿ ಕೇಳಿದರಂತೆ. ಆ ದುರ್ಭಾಗ್ಯನು ಮಾತ್ರ ನೆವ ಹೇಳುವುದರಲ್ಲಿದ್ದಾನಲ್ಲದೆ ಕೊಡುವ ಆಲೋಚನೆಯಲ್ಲೇ ಇಲ್ಲವಂತೆ.

ರತನ—ಎಂತಹ ಸರಾಫನೋ ಅವನು ! ಈ ರೀತಿಯಾಗಿ ರೂಪಾಯಿಗೆ ತೊಂದರೆ ಬರುವದೆಂದೆಣಿಸಿದ್ದರೆ ನಾನು ಕೊಡುತ್ತಲೆ ಇರಲಿಲ್ಲ. ರೂಪಾಯಿಯೂ ಇಲ್ಲ, ಬಳೆಯೂ ಇಲ್ಲ.

ರತನಳ ಈ ಅವಿಶ್ವಾಸದ ಮಾತು ಜಾಲಪಳ ಹೃದಯವನ್ನು ಕದಡಿತು. ಆಕೆ ಉರಿದೆದ್ದಳು—ನಿಮ್ಮ ರೂಪಾಯಿಗಳು ಬಂದಿವೆ. ತೆಗೆದುಕೊಂಡು ಹೋಗಿರಿ. ಈ ಸಂಗತಿ ನಮ್ಮ ಅಧೀನದ್ದಾದರೆ ಸರಿ. ಸರಾಫನು ಕೊಟ್ಟಾಗ ತರಬಹುದಲ್ಲದೆ ಬಲಾತ್ಕಾರದಿಂದ ಕೆಲಸವಾಗುವುದಿದೆಯೆ ?

ರತನ—ಅಂದರೆ ಇದರರ್ಥ ಅವನು ಬಳೆ ಮಾಡಿಸಿ ಕೊಡುವುದಿಲ್ಲವೆಂದೆ ?

ಜಾಲಪ—ಏನು ಬೇಕಾದರೂ ತಿಳಿಯಿರಿ.

ರತನ—ಹಾಗಾದರೆ ನನ್ನ ರೂಪಾಯಿಯನ್ನು ತಾ. ಇಂತಹ ಬಳೆಯ ಸೋಂಕುಸಹ ನಮಗೆ ಸಲ್ಲದು

ಜಾಲಪಳು ಹಣದ ಚೀಲವನ್ನು ಕಪಾಟಿನಿಂದ ತೆಗೆದು ಜಂಭದಿಂದ ಬಂದು ಆಕೆಯ ಎದುರಿನಲ್ಲಿ ಒಗೆದು ಹೇಳಿದಳು—ಇದೋ ನಿಮ್ಮ ರೂಪಾಯಿಗಳು, ಒಯ್ಯಿರಿ.

ನಿಜವಾಗಿ ನೋಡಿದರೆ ರತನಳ ಅಧೀರತೆಗೆ ಕಾರಣ ರಮಾನಾಥನು ಯೋಚಿಸಿದುದೇ ಆಗಿದ್ದಿತು. ರೂಪಾಯಿಗಳನ್ನು ಕಂಡು ಆಕೆಯ ಭ್ರಮೆ ದೂರವಾಯಿತು. ಸ್ವಲ್ಪ ಲಜ್ಜಿತಳಾಗಿ ಹೇಳಿದಳು—ನಾಲ್ಕಾರು ದಿನಗಳಲ್ಲಿ ಅವನು ಬಳೆಗಳನ್ನು ಕೊಡುವ ಭರವಸೆ ಇದ್ದರೆ ರೂಪಾಯಿಗಳಿಲ್ಲೇ ಇರಲಿ.

ಜಾಲಪ—ಇಲ್ಲಿರಿಸಿಕೊಳ್ಳಲು ನನಗೆ ಧೈರ್ಯ ಸಾಲದು. ಬೇಕಾದಾಗ ತರಿಸ್ಕಿಕೊಳ್ಳುತ್ತೇನೆ.

ರತನ—ಅಷ್ಟರವರೆಗೆ ನನ್ನ ಹತ್ತಿರ ಉಳಿಯುವುದೋ ಇಲ್ಲವೋ ಯಾರಿಗೆ ಗೊತ್ತು ? ನಿಮ್ಮ ಹತ್ತಿರ ಇದ್ದರೇನು ಹಾನಿ ?

ಜಾಲಪ—ನಮ್ಮ ಹತ್ತಿರವೂ ಇದೇ ಗತಿ. ಅಲ್ಲದೆ ಬೇರೆಯವರ ಹಣವನ್ನಿಟ್ಟುಕೊಳ್ಳುವುದೂ ಅಪಾಯದ ಸಂಗತಿ. ನನ್ನ ಮದುವೆಯು ನಾಲ್ಕ

ನೆಯ ದಿನ ಹತ್ತು ಸಾವಿರ ರೂಪಾಯಿ ಬೆಲೆಬಾಳುವ ನನ್ನ ಒಡವೆಗಳೆಲ್ಲಾ ಕಳ್ಳರ ಪಾಲಾದವು. ಇದೇ ಮನೆಯಲ್ಲಿ. ಎಲ್ಲಿಯಾದರೂ ಅಂತಹ ದುರ್ಘಟನೆ ಪುನಃ ಸಂಭವಿಸಿತೆಂದರೆ ನಮ್ಮ ಗತಿ ತೀರಿದಂತೆಯೆ.

ರತನ—ಸರಿ ಹಾಗಾದರೆ ನಾನು ರೂಪಾಯಿಗಳನ್ನು ಒಯ್ಯುತ್ತೇನೆ. ಆದರೆ ಸರಾಫನ ಬೆನ್ನು ಬಿಡಬಾರದೆಂದು ರಮಾನಾಥಬಾಬುಗಳಿಗೆ ಹೇಳುವುದನ್ನು ಮಾತ್ರ ಮರೆಯಬೇಡ.

ರಮಾನಾಥನು ಮರಳಿ ಬಂದಾಗ ಜಾಲಪಳು ರತನಳಿಗೆ ರೂಪಾಯಿಗಳನ್ನು ಕೊಟ್ಟ ಸಂಗತಿಯನ್ನೆಲ್ಲಾ ತಿಳಿಸಿದಳು. ರಮಾನಾಥನ ಕಾಲುಗಳಡಿಯಿಂದ ನೆಲವು ತಪ್ಪಿ ಹೋದಂತಾಯಿತು.

ಹೇಳಿದನು—ಜಾಲಪಾ, ದೇವರಾಣೆಯಾಗಿ ನನ್ನ ಹತ್ತಿರ ವಿಚಾರಿಸದೆ ಇನ್ನು ಇಂತಹ ಕೆಲಸ ಮಾಡಬೇಡ.

ರಮಾನಾಥನಲ್ಲಿ ಅವಳಮೇಲೆ ಸಿಟ್ಟಾಗುವಷ್ಟು ಶಕ್ತಿಯೂ ಉಳಿದಿರಲಿಲ್ಲ ಅಳು ಬರುವಂತೆ ತೋರಿತು, ಕೆಳಗೆ ಹೋಗಿ ತನ್ನ ಸ್ಥಿತಿಯನ್ನು ವಿಚಾರಿಸತೊಡಗಿದನು. ಜಾಲಪಳಿಗೆ ಅವನು ರತನಳಿಗೆ ಕೊಡುವುದಕ್ಕೆಂದೇ ಹಣ ತಂದಿರುವೆನೆಂದು ಹೇಳಿದ್ದನು. ತಾನು ಬಾರದೆ ಕೊಡಲಾಗದೆಂದೇನೂ ಹೇಳಿರಲಿಲ್ಲವಾದುದರಿಂದ ಅವಳ ಅಪರಾಧವೇನು ?

ಅವನು ಯೋಚಿಸಿದನು—ಈಗ ಶಾಂತಚಿತ್ತದಿಂದ ಆಲೋಚಿಸುವುದು ಅವಶ್ಯವಿದೆ. ರತನಳ ರೂಪಾಯಿ ತರದೆ ಬೇರೆ ಮಾರ್ಗವಿಲ್ಲ. ನಾನೇಕೆ ಅಡ್ಡಾಡಲು ಹೋದೆನೋ ? ಒಂದು ಹತ್ತು ನಿಮಿಷದಲ್ಲಿ ಮಾಡಿದ್ದೆಲ್ಲಾ ಮಸಣವಾಯಿತು. ನಾನಿರುತ್ತಿದ್ದರೆ ಎಲ್ಲಾ ಎಷ್ಟು ಸುಸೂತ್ರವಾಗಿ ಸಾಗುತ್ತಿತ್ತು ? ಇಲ್ಲ, ಯಾವುದೋ ಗುಪ್ತ ಶಕ್ತಿಯು ನನ್ನ ಅನಿಷ್ಟಸಾಧನೆಯ ಯತ್ನದಲ್ಲಿದೆ. ಜಾಲಪಳು ತುಸು ತಿಳುವಳಿಕೆಯಿಂದ ನಡೆಯುತ್ತಿದ್ದರೆ ಈ ಸ್ಥಿತಿಯಾಗುತ್ತಿರಲಿಲ್ಲ. ಆದರೆ ಈಗ ಸಂಭವಿಸಿದ ಕಾರ್ಯಕ್ಕೆ ಚಿಂತಿಸುತ್ತಾ ಕೂತರೆ ಪ್ರಯೋಜನವಿಲ್ಲ. ರತನಳಿಂದ ರೂಪಾಯಿಗಳನ್ನು ಮರಳಿ ಪಡೆಯುವುದು ಹೇಗೆಂಬುದೇ ದೊಡ್ಡ ಸಮಸ್ಯೆ. ಏನೇ ಇರಲಿ, ಈಗ ಹೋಗಿ ಅವಳನ್ನು ನೋಡಬೇಕು.

ಹೀಗೆಂದು ನಿಶ್ಚಯಮಾಡಿ ಅವನು ಗಡಿಯಾರದ ಕಡೆಗೆ ನೋಡಿದನು. ಎಂಟೂವರೆ ಗಂಟೆಯಾಗಿತ್ತು. ಸೈಕಲನ್ನು ಹಿಡಿದುಕೊಂಡು ರತನಳ ಮನೆ ಯತ್ತ ಧಾವಿಸಿದನು.

ರತನಳ ಬಂಗಲೆ ಇಂದು ದೇವಕಳೆಯಿಂದ ತುಂಬಿ ತುಳುಕುತ್ತಿತ್ತು. ಮಕ್ಕಳ ಕೂಟ ಸೇರಿತ್ತು. ಆನಂದದಿಂದ ಮಕ್ಕಳೆಲ್ಲ ಮಾವಿನ ಮರವೊಂದಕ್ಕೆ ಕಟ್ಟಿದ ಉಯ್ಯಾಲೆಯಲ್ಲಿ ಉಯ್ಯಾಲೆಯಾಡುತ್ತಿದ್ದರು. ರತನಳು ಕೂಗುತ್ತಿದ್ದಳು. ವಕೀಲಮಹಾಶಯರು ಅಂತಹ ಸೆಕೆಯಲ್ಲಿಯೂ ಉಣ್ಣೆಯ ನಿಲುವಂಗಿಯನ್ನು ಕೊಟ್ಟು ಹೊರಜಗಲಿಯಲ್ಲಿ ಕುಳಿತಿದ್ದರು. ರಮಾನಾಥನನ್ನು ಕಂಡೊಡನೆ ಕೈ ಮುಂದಕ್ಕೆ ನೀಡಿ ಹೇಳಿದರು—ಬನ್ನಿ, ರಮಾನಾಥ ಬಾಬುಗಳೇ ನಿಮ್ಮ ಮುನ್ಸಿಪಲ್ ಬೋರ್ಡಿನ ಸಮಾಚಾರವೇನಾದರೂ ಇದ್ದರೆ ಹೇಳಿ ನೋಡುವ.

ರಮಾನಾಥನು ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಾ ಹೇಳಿದನು.— ಸಮಾಚಾರವೇನು ? ಹೊಸದೇನೂ ಕಾಣುವುದಿಲ್ಲ.

ವಕೀಲ—ನೀವು ಬೋರ್ಡಿನಲ್ಲಿ ಬಾಲಿಕೆಯರಿಗಾಗಿ ಕಡ್ಡಾಯ ಶಿಕ್ಷಣದ ಪ್ರಸ್ತಾವವು ಯಾವಾಗ ಪಾಸಾಗುತ್ತದೊ ? ಸ್ತ್ರೀ ಶಿಕ್ಷಣ ಇಲ್ಲದೆ ನಮ್ಮ ಉದ್ಧಾರವಾಗದು. ನೀವು ಯುರೋಪಿಗೆ ಹೋಗಿರಲಿಕ್ಕಿಲ್ಲ. ಓ! ಎಂಥ ಸ್ವತಂತ್ರತೆ, ಎಷ್ಟು ಐಶ್ವರ್ಯ, ಏನು ಜೀವನ, ಎಂತಹ ಉತ್ಸಾಹ ! ಹೆಚ್ಚೇನು ಹೇಳಲಿ ? ಇದೇ ಸ್ವರ್ಗವೋ ಎಂದು ತೋರಬೇಕು. ಸ್ತ್ರೀಯರೂ ಹಾಗೆಯೇ. ಎಷ್ಟು ನಗೆಮುಖ, ಎಷ್ಟು ಸ್ವಚ್ಛಂದ ! ಇದು ಸ್ತ್ರೀಶಿಕ್ಷಣದ ಪ್ರಸಾದವಲ್ಲದೆ ಮತ್ತೇನು ?

ರಮಾನಾಥನು ಸಮಾಚಾರ ಪತ್ರಗಳಲ್ಲಿ ತಾನು ಓದಿದ ಕೆಲವು ವಿಷಯಗಳ ಆಧಾರದಿಂದ ಹೇಳಿದನು—ಅಲ್ಲಿನ ಸ್ತ್ರೀಯರ ನಡತೆ ಬಹಳ ಒಳ್ಳೆಯದೆಂದು ಹೇಳಬರುವಂತಿಲ್ಲ.

ವಕೀಲ—ನಾನ್ಸೆನ್ಸ್ ! ಅದು ಆಯಾ ದೇಶದ ಪದ್ಧತಿ. ಒಬ್ಬ ಯುವತಿಯೊಡನೆ ತಿರುಗಾಡುವುದನ್ನು ನೋಡಿದರೆ ಸರಿ, ಬೊಟ್ಟು ಕಚ್ಚತೊಡಗುವಿರಿ; ಸ್ತ್ರೀ-ಪುರುಷರು ಒಂದು ಕಡೆಗೆ ಕಲೆತಿರುವುದನ್ನು ಕಂಡು ನಿಮಗೆ

ಸಂದೇಹ ಬಾರದೆ ಇರಲು ಶಕ್ಯವೇ ಇಲ್ಲ. ನಿಮ್ಮ ಅಂತಃಕರಣವು ಅಷ್ಟೇ ಮಲಿನವಾಗಿದೆಯೆಂದು ಹೇಳಬೇಕು. ಆದರೆ ಬಾಲಕ ಬಾಲಿಕಿಯರು ಒಂದೇ ಸ್ಥಳದಲ್ಲಿ ಶಿಕ್ಷಣವನ್ನು ಪಡೆಯುತ್ತಿರುವಾಗ ಈ ಜಾತಿಭೇದಕ್ಕೆ ಮಹತ್ವವೆಲ್ಲಿಯದು ? ಪರಸ್ಪರ ಸ್ನೇಹ ಸಹಾನುಭೂತಿಯ ಹಲವಾರು ಸಂದರ್ಭಗಳು ಉತ್ಪನ್ನವಾಗಿ ಕಾಮುಕತೆಯ ಅಂಶ ಬಹಳ ಕಡಮೆಯಾಗುವುದು. ಯಾವ ದೇಶದಲ್ಲಿ ಸ್ತ್ರೀಯರಿಗೆ ಹೆಚ್ಚು ಸ್ವಾತಂತ್ರ್ಯವಿದೆಯೋ, ಆ ದೇಶವು ಅಷ್ಟು ಮಟ್ಟಿಗೆ ಮುಂದುವರಿದಿದೆಯೆಂದು ತಿಳಿಯಿರಿ. ಸ್ತ್ರೀಯರನ್ನು ಸೆರೆಯಲ್ಲಿ ಪರ್ದೆಯೊಳಗೆ, ಪುರಷರಿಗಿಂತ ನೂರು ಮೈಲು ದೂರದಲ್ಲಿರಿಸುವುದರ ಅರ್ಥ, ನಿಮ್ಮ ಜನತೆಯು ಸ್ತ್ರೀಯರ ಅಪಮಾನ ಮಾಡಿಯೂ ಸಂಕೋಚಪಡದಷ್ಟು ಆಚಾರಭ್ರಷ್ಟವಾಗಿದೆಯೆಂದೇ ಆಗುವುದಿಲ್ಲವೆ? ರಾಜನೀತಿ, ಧರ್ಮ, ಲಲಿತಕಲೆ, ಸಾಹಿತ್ಯ, ದರ್ಶನ ಶಾಸ್ತ್ರ, ಇತಿಹಾಸ, ವಿಜ್ಞಾನ ಮುಂತಾದ ಸಾವಿರ ವಿಷಯಗಳ ಆಧಾರವನ್ನಿಟ್ಟುಕೊಂಡು ಯುವಕರು, ಯುವತಿಯರೊಡನೆ ಆಳವಾದ ಸ್ನೇಹದಿಂದಿರಲು ಶಕ್ಯವಿದೆ. ಎಲ್ಲಿ ಜನರ ಮನೋವೃತ್ತಿಯು ಸಂಕುಚಿತವಾಗಿರುತ್ತದೋ ಅಲ್ಲಿನ ಜನರಿಗೆ ಕಾಮಲಿಪ್ಸೆಯು ಆಕರ್ಷಣೆಯು ಪ್ರಧಾನ ವಿಷಯವಾಗಬಲ್ಲುದು. ನಾನು ಯುರೋಪು, ಅಮೇರಿಕಗಳನ್ನು ಸಂಚರಿಸಿ ಬಂದಿರುವೆನು. ಎಷ್ಟೋ ಮಂದಿ ಸುಂದರಿಯರೊಡನೆ ಆಡಿರುವೆನು. 'ಡಾನ್ಸ್' ಗೆ ಇಳಿದಿರುವೆನು, ಆದರೆ ಅವರು ಲಜ್ಜೆಯಿಂದ ತಲೆ ತಗ್ಗಿಸುವಂತಹ ಯಾವ ಶಬ್ದವನ್ನೂ ನಾನು ಬಾಯಿಯಿಂದ ಉಚ್ಚರಿಸಲಿಲ್ಲ. ಗೊತ್ತೇ? ಇನ್ನು ಒಳ್ಳೆಯವರು ಕೆಟ್ಟವರು ಇಲ್ಲದ ದೇಶಯಾವದು ?

ರಮಾನಾಥನಿಗೆ ಈಗ ಈ ವಿಷಯದಲ್ಲಿ ಏನು ಆನಂದವೂ ಬರುವಂತಿರಲಿಲ್ಲ. ಅವನ ಚಿಂತೆಯು ಬೇರೆಯೇ ಆಗಿತ್ತು.

ವಕೀಲರು ಮತ್ತೆ ಹೇಳಿದರು —ಎಂದಿನ ವರೆಗೆ ನಾವು ಸ್ತ್ರೀಯರಿಗೆ ಅಬಾಧರೂಪದಿಂದ ತಂತಮ್ಮ ಮನೋವಿಕಾಸವನ್ನು ಮಾಡಿಕೊಳ್ಳುವುದಕ್ಕೆ ಬಿಡುವುದಿಲ್ಲವೋ, ಅಂದಿನವರೆಗೆ ನಮ್ಮ ಉನ್ನತಿಯಾಗದು. ಸಮಾಜದ ಕಾಲುಗಳನ್ನು ಬಂಧನಗಳಿಂದ ಕಟ್ಟಿರಿಸಿ ಕುತ್ತಿಗೆಗೆ ಕೈದಿಗಳ ಸರಪಳಿಯನ್ನು ತೊಡಿಸಿದರೆ ಸಮಾಜೋದ್ಧಾರವಾಗುವುದೆಂದು ಎಣಿಸಿದಿರಾ ?

ರಮಾನಾಥನ ಮನಸ್ಸೆಲ್ಲಾ ಉಯ್ಯಾಲೆಯ ಕಡೆಗಿದ್ದಿತು. ಆದರೆ ನಡುವೇ ಎದ್ದು ಅಲ್ಲಿಗೆ ಹೋಗುವುದು ಶಿಷ್ಟಾಚಾರಕ್ಕೆ ವಿರುದ್ಧವಾಗಿದ್ದಿತು.

ಒಂದು ಕ್ಷಣ ಕಳೆದ ಮೇಲೆ ಅವನು ಹೇಳಿದನು—ಇಷ್ಟು ಮಂದಿ ಮಕ್ಕಳು ಎಲ್ಲಿಂದ ಒಟ್ಟುಗೂಡಿದರೋ ?

ವಕೀಲ—ರತನಳಿಗೆ ಮಕ್ಕಳೆಂದರೆ ಬಲು ಮಮತೆ. ಎಲ್ಲಿಂದಲೋ ಏನೋ, ಈ ಮಕ್ಕಳು ಬಂದು ಸೇರುತ್ತವೆ. ನಿಮಗೂ ಮಕ್ಕಳೆಂದರೆ ಸಂತೋಷವೆಂದು ಕಾಣುತ್ತದೆ ಅಚೆ ಹೋಗಿ ಬನ್ನಿ.

ರಮಾನಾಥನಿಗೆ ಬಯಸಿದ ವರವು ದೊರಕಿತಲ್ಲದೇ ತಡ, ಅಲ್ಲಿಂದೆದ್ದು ಹೋದನು ರತನಳು ಅವನನ್ನು ಕಂಡೊಡನೆ ಮುಗುಳ್ನಗುತ್ತ ಹೇಳಿದಳು—ಈ ಮಕ್ಕಳ ದೆಸೆಯಿಂದ ಆಗುವುದಿಲ್ಲವಪ್ಪ, ಉಯ್ಯಾಲೆಯಲ್ಲಿ ಕೂತು ಇವರ ಆಶೆ ಪೂರೈಸುವಂತೆಯೇ ಇಲ್ಲ. ಬನ್ನಿ, ನೀವೂ ಸ್ವಲ್ಪ ಬಿಟ್ಟಿಯ ಕೆಲಸ ಮಾಡಿ ತೀರಿಸಿ, ನನಗಂತೂ ಬಹಳ ಆಯಾಸವಾಗಿದೆ, ಹೀಗೆನ್ನುತ್ತಾ ಅವಳು ಕಟ್ಟೆಯ ಮೇಲೆ ಕುಳಿತುಬಿಟ್ಟಳು ರಮಾನಾಥನು ಉಯ್ಯಾಲೆಯನ್ನು ತೂಗಲಾರಂಭಿಸಿದನು. ಹೊಸಬನನ್ನು ನೋಡಿ ಮಕ್ಕಳೆಲ್ಲರೂ ತಾನು ತಾನೆಂದು ಉಯ್ಯಾಲೆಯ ಮೇಲೆ ಮುಗಿಬಿದ್ದರು. ಇಬ್ಬರು ಎದ್ದರೆ ನಾಲ್ವರು ನುಗ್ಗುತ್ತಿದ್ದರು. ರಮಾನಾಥನಿಗೆ ಮಕ್ಕಳೆಂದರೆ ಎಳ್ಳಷ್ಟೂ ಒಗ್ಗುತ್ತಿದ್ದಿಲ್ಲ. ಆದರೆ ಈಗ ಸಿಕ್ಕು ಬಿದ್ದು ನಿರುಪಾಯನಾಗಿದ್ದನು.

ಅರ್ಧ ತಾಸು ಕಳೆಯುವಷ್ಟರಲ್ಲಿ ಅವನಿಗೆ ಬೇಸರ ಬಂದುಬಿಟ್ಟಿತು. ಗಡಿಯಾರದಲ್ಲಿ ಒಂಬತ್ತೂವರೆಯಾಗಿತ್ತು. ತಾನು ಬಂದ ಕೆಲಸವನ್ನು ತೀರಿಸುವುದು ಹೇಗೆಂಬ ಚಿಂತೆ ಮುಖ್ಯ. ಆದರೆ ರತನಳು ಮಾತ್ರ ಜೋಕಾಲಿಯಾಡುವುದರಲ್ಲಿ ಎಷ್ಟು ತಲ್ಲೀನಳಾಗಿದ್ದಳೆಂದರೆ ಅವಳಿಗೆ ರೂಪಾಯಿಗಳ ವಿಷಯ ಮರೆತೇ ಹೋಗಿತ್ತು.

ಸಹಸಾ ರತನಳು ಉಯ್ಯಾಲೆಯ ಬಳಿಬಂದು ಹೇಳಿದಳು—ಬಾಬೂಜಿ, ನಾನು ಕುಳಿತುಕೊಳ್ಳುತ್ತೇನೆ. ನನ್ನನ್ನು ತೂಗಿರಿ. ಆದರೆ ಕೆಳಗಿನಿಂದಲ್ಲ. ಉಯ್ಯಾಲೆಯ ಮೇಲೆ ನಿಂತು ಜಗ್ಗುವಿರಂತೆ.

ಉಯ್ಯಾಲೆಯಲ್ಲಿ ಕುಳಿತುಕೊಳ್ಳುವುದೆಂದರೆ ರಮಾನಾಥನಿಗೆ ಚಿಕ್ಕಂದಿನಿಂದಲೂ ಭಯ, ಒಮ್ಮೆ ಗೆಳೆಯರೆಲ್ಲಾ ಕೂಡಿ ಇವನನ್ನು ಕುಳ್ಳಿರಿಸಿದಾಗ ಇವನಿಗೆ ಕಣ್ಣುಕತ್ತಲೆ ಬಂದಿತ್ತು; ಆದರೆ ಈಗಿನ ಈ ಅನುರೋಧವನ್ನು

ಆತನು ಅಲ್ಲಗಳೆವಂತಿಲ್ಲ. ತನ್ನ ಅಯೋಗ್ಯತೆಯನ್ನು ಪ್ರಕಟಿಸಿಕೊಳ್ಳುವುದೆ? ರತನಳು ಎರಡು ಮಕ್ಕಳನ್ನು ಕಟ್ಟಿಕೊಂಡು ಕೂತು ಈ ಹಾಡನ್ನು ಹೇಳ ತೊಡಗಿದಳು.

ಕದಮ್ ಕೀಡರಿಯಾ ಝೂಲಾ ಪಡ್‌ಗಯೋರೀ

ರಾಧಾರಾನೀ ಝೂಲನ್ ಆಯಿ—

ರಮಾನಾಥನು ಉಯ್ಯಾಲೆಯ ಮೇಲೇರಿ ಜಗ್ಗ ಹತ್ತಿದನು; ಆದರೆ ಅವನ ಕಾಲುಗಳು ನಡುಗುತ್ತಿದ್ದುವು; ಧೈರ್ಯವು ಹಿಮ್ಮೆಟ್ಟುತ್ತಿತ್ತು. ಉಯ್ಯಾಲೆಯು ಮೇಲಿಂದ ಕೆಳಗಿಳಿವಾಗ ಆತನ ಎದೆಗೆ ಸೂಜಿ ಚುಚ್ಚಿದಂತೆ ಏನೋ ಒಂದು ತರದ ನೋವಾಗುತ್ತಿತ್ತು. ಇತ್ತ ರತನಳು ಮಕ್ಕಳೊಡನೆ ಹಾಡುತ್ತಿದ್ದಳು.

ಕದಮ್ ಕೀಡರಿಯಾ ಝೂಲಾಪಡ್‌ಗಯೋರೀ

ರಾಧಾರಾನೀ ಝೂಲನ್‌ಆಯೀರೀ!

ಒಂದು ಕ್ಷಣದ ಮೇಲೆ ರತನಳು ಹೇಳಿದಳು—ಇದೇನು ಉಯ್ಯಾಲೆಯು ಜೋರನಿಂದ ತೂಗುತ್ತಿಲ್ಲ. ನಿಮಗೆ ತೂಗುವುದಕ್ಕೆ ಚೆನ್ನಾಗಿ ಗೊತ್ತಿಲ್ಲ ಇಳಿಯಿರಿ. ಈ ಮಕ್ಕಳನ್ನು ಹಿಡಿದುಕೊಳ್ಳಿರಿ. ನಾನು ತೂಗುತ್ತೇನೆ, ನೋಡುವಿರಂತೆ.

ರಮಾನಾಥನ ಪ್ರಾಣವು ಒಣಗಿಹೋಯಿತು. ಅವನೆಂದನು—ಬಹಳ ಹೊತ್ತಾಯಿತು. ಇನ್ನೊಮ್ಮೆ ಎಂದಾದರೂ ಬರುವೆನು.

ರತನ—ಛೇ, ಛೇ, ಹೊತ್ತೆಲ್ಲಿಯದು? ರಾತ್ರಿ ಇನ್ನೂ ಬಹಳ ಇದೆ. ಹತ್ತು ಗಂಟೆಯೂ ಆಗಿಲ್ಲ. ಒಮ್ಮೆ ಚೆನ್ನಾಗಿ ತೂಗಿಸಿಕೊಂಡು ಹೋಗಿ ನಾಳೆ ಜಾಲಪನನ್ನು ಕರೆತನ್ನಿ.

ರಮಾನಾಥನು ಉಯ್ಯಾಲೆಯಿಂದ ಇಳಿದಾಗ ಅವನ ಮುಖವು ಕಳೆಗುಂದಿತ್ತು. ಈಗ ಬೀಳುವನೋ, ಮತ್ತೆ ಬೀಳುವನೋ ಎಂದು ತೋರುತ್ತಿತ್ತು. ಎಡವುತ್ತ ತಡವುತ್ತ, ಸೈಕಲಿದ್ದೆಡೆ ಹೋಗಿ, ಹತ್ತಿ ಹಾರಿಬಿಟ್ಟನು ಸ್ವಲ್ಪ ದೂರದ ವರೆಗೆ ಅವನಿಗೆ ಪ್ರಜ್ಞೆ ಇರಲಿಲ್ಲ. ಕಾಲುಗಳು ತಮ್ಮಿಂದ ತಾವೇ ಪೆಡಲ್ ಹಾಕುತ್ತಿದ್ದುವು. ಸುಮಾರು ಅರ್ಧದೂರ ಕಳೆದ ಮೇಲೆ ಅವನಿಗೆ ಎಚ್ಚರವಾಯಿತು. ಸೈಕಲನ್ನು ತಿರುಗಿಸಿ ಸ್ವಲ್ಪ ದೂರ ಬಂದು

ಮತ್ತೆ ಯೋಚಿಸತೊಡಗಿದನು—ಇವೊತ್ತು ಸಂಕೋಚದದೆಸೆಯಿಂದ ಎಂತಹ ಸಂದರ್ಭವನ್ನು ಕಳೆದುಕೊಂಡೆನು? ಅಲ್ಲಿಂದ ಹೋದ ಹಾಗೆಯೇ ಹಿಂದೆ ಬಂದೆನಲ್ಲ! ನನ್ನ ಬಾಯಿಯಿಂದ ಶಬ್ದಗಳೇಕೆ ಹೊರಡಲಿಲ್ಲ? ತನ್ನನ್ನು ನುಂಗಿ ಹಾಕುವುದಕ್ಕೆ ಅವಳೇನು ದೆವ್ವವೆ? ಥಕ್ಕನೆ ಅವನಿಗೆ ನೆನಪಾಯಿತು. ಚೀಲದಲ್ಲಿದ್ದ ರೂಪಾಯಿಗಳು ಎಂಟು ನೂರು. ಜಾಲಪಳು ಇಡೀ ಚೀಲವನ್ನು ಕೊಟ್ಟಿರಬಹುದು. ಇವಳಾದರೂ ಲೆಕ್ಕಮಾಡಿ ನೋಡಿರಲಿಕ್ಕಿಲ್ಲ. ಮನೆಗೆ ಹೋಗಿ ಎಲ್ಲಾದರೂ ತನ್ನ ಬೇರೆ ರೂಪಾಯಿಗಳೊಡನೆ ಸೇರಿಸಿದರೆ ಉಳಿಗಾಲವೇ ಇಲ್ಲ. ಈಗಲೇ ಹೋಗಿ ಕೇಳಿದರೆ ಒಳ್ಳೆಯದು ಆಗರೆ ರಾತ್ರಿ ಬಹಳವಾಗಿದೆ ಹೇಗೂ ಬೆಳಗ್ಗೆ ಬರಲೇಬೇಕಾಯಿತು.

ಆದರೆ ಈ ಇನ್ನೂರು ರೂಪಾಯಿಗಳು ದೊರೆತರೂ ಉಳಿದ ಐನೂರಕ್ಕೆ ಗತಿಯೇನು? ದೇವರೇ ಏನಾದರೂ ಸಹಾಯ ಮಾಡಿ ಮಾನ ಉಳಿಸಬೇಕು. ನಾಳೆ ಹಣದ ಏರ್ಪಾಡು ಆಗದೆ ಹೋದರೆ? ಈ ಯೋಚನೆ ಬಂದೊಡನೆ ಅವನೊಮ್ಮೆ ನಡುಗಿ ಬಿಟ್ಟನು.

ನಮ್ಮ ಜೀವನದಲ್ಲಿ ನಿರಾಶೆಯ ಘೋರಾಂಧಕಾರದ ನಡುವೆಯೂ ಆಶೆಯ ಕಿರಣವಿರುವಂತಹ ಪ್ರಸಂಗ ಬರುವುದುಂಟು. ಗಂಗುವಿನ ಅಂಗಡಿಗೆ ಹೋಗಿ ಅವನ ಕೈ ಕಾಲು ಕಟ್ಟಿಯಾದರೂ, ಮನಸ್ಸನ್ನು ಕರಗಿಸಿ ಕೆಲಸ ಸಾಧಿಸಬಹುದೆಂದು ಯೋಚಿಸಿ, ರಮಾನಾಥನು ಅತ್ತಕಡೆಗೆ ಸೈಕಲು ನಡೆಸಿದನು. ಆದರೆ ಗಂಗುವಿನ ಅಂಗಡಿಯು ಮುಚ್ಚಿದ್ದಿತು. ಅವನು ಅಲ್ಲಿಂದ ಹಿಂತಿರುಗುವಾಗ ಚರಣದಾಸನು ಭೆಟ್ಟಿಯಾದನು ತನ್ನ ಹಣವನ್ನು ನಾಳೆಯೇ ಸಲ್ಲಿಸಬೇಕೆಂದೂ, ಇಲ್ಲದೆ ಹೋದರೆ ತಾನು ಹಿರೇ ಮುನ್ಶಿ (ದಯಾನಾಥ) ಯವರ ಹತ್ತಿರ ದೂರಿಡುವುದಾಗಿಯೂ ಹೇಳಿದನು. ರಮಾನಾಥನು ಅವನಿಂದ ಒಡವೆಯನ್ನು ಕೊಂಡಿರುವುದು ತಾನಾದುದರಿಂದ ಹಣಕ್ಕೆ ಹೊಣೆ ತಾನಲ್ಲದೆ ದಯಾನಾಥರಲ್ಲವೆಂದನು ಆಗ ಚರಣ ದಾಸನು—ಏನೇ ಇರಲಿ. ನಾಳೆ ಬರುತ್ತೇನೆ. ರೂಪಾಯಿಯ ವ್ಯವಸ್ಥೆ ಮಾಡಿಟ್ಟಿರಿ. ನಾಳೆ ನಾನು ನಿಮ್ಮಲ್ಲಿಂದ ಬರಿಗೈಯಿಂದ ಹೊರಡುವಂತಿಲ್ಲ—ಎಂದು ಹೇಳಿದನು.

ರಮಾನಾಥನು ಅವನಿಗೆ ಉತ್ತರವನ್ನು ಹೇಳದೆಯೇ ಮುಂದುವರಿದನು. ಕೆಲಸವಾಗುವುದರ ಬದಲು ಹೊಸತೊಂದು ತಗಾದೆ ಗಂಟುಬಿತ್ತು. ಈ

ನೀಚನು ಎಲ್ಲಿಯಾದರೂ ತಂದೆಯವರ ಹತ್ತಿರ ಹೇಳಿಬಿಟ್ಟರೆ? ಅವರು ಬೆಂಕಿಯಾದಾರು ಬೆಂಕಿ! ಜಾಲಪಳೂ ಏನೆಂದುಕೊಂಡಾಳು ?

ಈ ಸಮಯ ರಮಾನಾಥನ ಕಣ್ಣುಗಳಿಂದ ನೀರು ಹರಿಯುತ್ತಿರಲಿಲ್ಲ ವಾದರೂ ಅವನ ಒಂದೊಂದು ರೋಮವೂ ಅಳುತ್ತಿತ್ತು. ನಿಜಸ್ಥಿತಿಯನ್ನು ಜಾಲಪಳಿಗೆ ತಿಳಿಸದೆ ಅವನು ಸಹ ತಪ್ಪು ಮಾಡಿದಂತಾಯಿತು. ತಿಳುವಳಿಕೆಯುಳ್ಳ ಆಕೆಯು ತಾನು ಒಡವೆಗಳನ್ನು ಉದ್ದರಿಯಾಗಿ ಪಡೆಯುತ್ತಿದ್ದುದನ್ನು ಅರಿತಿದ್ದರೆ ನನ್ನನ್ನು ಕೊಳ್ಳಲು ಬಿಡುತಿದ್ದಳೆ? ನಾನೇ ನನ್ನ ದರ್ಪವನ್ನು ತೋರಿಸುವುದಕ್ಕೋಸ್ಕರ ಇಷ್ಟೆಲ್ಲಾ ಮಾಡಿದೆನು ಇಷ್ಟು ದೊಡ್ಡ ಹೊರೆಯನ್ನು ತಲೆಯ ಮೇಲೆ ಹೊತ್ತಿದ್ದೂ ಮಿತವ್ಯಯ ಮಾಡಬೇಕೆಂದು ನನ್ನ ಬುದ್ಧಿಗೇಕೆ ಹೊಳೆಯಲಿಲ್ಲ? ಹಾಗೆ ಮಾಡಿದ್ದರೆ ಒಂದು ವರ್ಷದಲ್ಲಿ ಸಾವಿರ ರೂಪಾಯಿ ಮಾಡಬಹುದಿತ್ತು. ಹೇಗೂ ಈ ಇಬ್ಬರು ಸಾಲಗಾರರ ಹಣದ ಅರ್ಧಾಂಶವನ್ನಾದರೂ ಸಲ್ಲಿಸಬಹುದಾಗಿತ್ತು. ಆದರೆ ನನಗೆ ತಲೆಗೆ ಮತ್ತೇರಿತ್ತು. ನೂರಾರು ರೂಪಾಯಿಗಳನ್ನು ಬರೀ ಟಾಂಗದವರು ತಿಂದಿರಬಹುದು ಇಡೀ ಪೇಟೆಗೆ ಗೊತ್ತು ಆಸಾಮಿ ಲಫಂಗನೆಂದು. ಅವನ ಹೆಂಡತಿಗೆ ಮಾತ್ರ ಅದು ತಿಳಿಯಬಾರದು. ಭೇಷ್ ನನ್ನ ಬುದ್ಧಿಯೆ. ಬಾಗಿಲಿಗೆ ಪರದೇ ಏಕೆ ಬೇಕಿತ್ತು? ಎರಡು ಲೆಂಪುಗಳೇಕೆ? ಹೊಸ ಮಂಚವು ಅಗತ್ಯವಿತ್ತೆ? ಹೀಗೆ ಅವನು ದಾರಿಯಲ್ಲಿ ತನ್ನ ಮಿಟ್ಟದ ಮನುಷ್ಯನಿಗೆ ಅನಗತ್ಯವಾದ ವಸ್ತುಗಳ ಯಾದಿಯನ್ನು ತಯಾರಿಸಿದನ. ಮನುಷ್ಯನಿಗೆ ತಾನು ಆರೋಗ್ಯದಲ್ಲಿರುವ ವರೆಗೆ ತಾನು ಏನು ತಿನ್ನುತ್ತೇನೆ, ಎಷ್ಟು ತಿನ್ನುತ್ತೇನೆ ಎಂಬುದರ ಚಿಂತೆಯೇ ಇರುವುದಿಲ್ಲ. ಆದರೆ ಏನಾದರೂ ರೋಗಬಂದಾಗ ಅವನಿಗೆ ತಾನು ಇಂತಿಂತಹದನ್ನು ತಿಂದಿದ್ದೇನೆ ಎಂದು ನೆನಪಿಗೆ ಬರುತ್ತವೆ, ವಿಜಯವು ಬಹಿರ್ಮುಖಿ; ಪರಾಜಯವು ಅಂತರ್ಮುಖಿ.

ಜಾಲಪಳು ಕೇಳಿದಳು—ಎಲ್ಲಿಗೆ ಹೋಗಿದ್ದಿರಿ?

ರಮಾ—ನಿನ್ನ ದೆಸೆಯಿಂದ ರತನಳಲ್ಲಿಗೆ ಹೋಗಬೇಕಾಯಿತು ನೀನು ಎಲ್ಲ ರೂಪಾಯಿಯನ್ನು ಎತ್ತಿಕೊಟ್ಟು ಬಿಟ್ಟೆ. ಅದರಲ್ಲಿ ನನ್ನ ಇನ್ನೂರು ರೂಪಾಯಿಗಳೂ ಇದ್ದುವು.

ಜಾಲಪ—ಅದು ನನಗೆ ಹೇಳದೆ ಹೇಗೆ ಗೊತ್ತಾಗಬೇಕು ? ನೀವು ಹೇಳಲೂ ಇಲ್ಲ. ಆವಳ ಹತ್ತಿರ ಇದ್ದರೆ ಎಲ್ಲಿಯೂ ಹೋಗಲಿಕ್ಕಿಲ್ಲ. ಆವಳೇ ನಿಮಗೆ ಕಳಿಸಿಯಾಳು.

ರಮಾ—ಒಪ್ಪಿದೆ. ಆದರೆ ಅದು ಸರ್ಕಾರಿ ಹಣ. ನಾಳೆಯೇ ಕೊಡ ಬೇಕಲ್ಲ ?

ಜಾಲಪ—ನಾನು ಇನ್ನೂರು ರೂಪಾಯಿ ಕೊಡುತ್ತೇನೆ. ತೆಗೆದು ಕೊಂಡು ಹೋಗಿರಿ.

ರಮಾನಾಥನಿಗೆ ಆಕೆಯ ಮಾತಿನ ಮೇಲೆ ನಂಬುಗೆಯಾಗಲಿಲ್ಲ— ನಿನ್ನ ಹತ್ತಿರ ಇದ್ದರಲ್ಲವೆ ಕೊಡುವುದು ?

ಅದೆಲ್ಲಾ ನಿಮಗೇಕೆ ? ನಾನು ಕೊಟ್ಟರಾಯಿತಲ್ಲವೆ ?

ರಮಾನಾಥನ ಮುಖವು ಅರಳಿತು ಇನ್ನು ಮುನ್ನೂರು ರೂಪಾಯಿ ಗಳಾದರೆ ಸರಿ. ಆದರೆ ಅಷ್ಟಾದರೂ ತರುವುದೆಲ್ಲಿಂದ ? ಅವನ ಕಣ್ಣಿಗೆ ಅಷ್ಟು ಹಣವನ್ನು ಕೊಡುವ ದಯಾಳುಗಳಾರೂ ಬೀಳುತ್ತಿದ್ದಿಲ್ಲ.

ಅವನು ಊಟಮಾಡಿ ಮಲಗಿಕೊಂಡಾಗ ಜಾಲಪಳು ಕೇಳಿದಳು— ಇವೊತ್ತು ಯಾವ ಚಿಂತೆಯಲ್ಲಿರುವಿರಿ ?

ರಮಾ—ಚಿಂತೆ ಯಾತರದು ? ಏನು, ನಾನು ಬೇಸರದಲ್ಲಿರುವೆನೆ ?

ಜಾಲಪ—ಹೌದು, ಭಾರೀ ಚಿಂತೆಯಲ್ಲಿ ಮುಳುಗಿರುವಿರೆಂಬುದು ಖಂಡಿತ. ನನ್ನ ಹತ್ತಿರ ಹೇಳುವುದಿಲ್ಲವೆ ?

ರಮಾ—ಅಂತಹ ವಿಷಯವಾದರೆ ನಿನ್ನ ಹತ್ತಿರ ಹೇಳದಿರುತಿದ್ದೆನೆ ?

ಜಾಲಪ—ಅಬ್ಬಾ, ನೀವು ನಿಮ್ಮ ಹೃದಯದ ಮಾತನ್ನು ನನ್ನ ಹತ್ತಿರ ಉಸಿರುವಿರೆ ? ಹಾಗೆ ಮಾಡಲು ಋಷಿಗಳು ಅಪ್ಪಣೆಯನ್ನು ಕೊಟ್ಟಿಲ್ಲ.

ರಮಾ—ನಾನು ಆ ಋಷಿಗಳ ಭಕ್ತರಲ್ಲೊಬ್ಬನಲ್ಲ.

ಜಾಲಪ—ನಿಮ್ಮ ಹೃದಯದೊಳಗಿಳಿದು ನೋಡುವಂತಿದ್ದರೆ ಆಗ ನನಗೆ ಆ ಸಂಗತಿಯ ನಿಜತ್ವವು ತಿಳಿಯುತ್ತಿತ್ತು.

ರಮಾ—ಅಲ್ಲಿ ನಿನಗೆ ನಿನ್ನ ಪ್ರತಿಮೆಯೇ ಕಾಣಸಿಗುತ್ತಿತ್ತು.

ರಾತ್ರಿ ಜಾಲಪಳಿಗೊಂದು ಭಯಂಕರ ಕನಸು ಬಿದ್ದಿತು. ಅವಳು ಚೀರಿದಳು. ರಮಾನಾಥನು ಬೆಚ್ಚಿ ಬಿದ್ದು ಕೇಳಿದನು—ಜಾಲಪ ಏನಾಯಿತು? ಕನಸು ಕಂಡೆಯಾ ?

ಜಾಲಪಳು ಗಾಬರಿಗೊಂಡ ನೇತ್ರಗಳಿಂದ ಅತ್ತಿತ್ತ ನೋಡಿ ಹೇಳಿದಳು—ಎಂತಹ ಸ್ವಪ್ನವೋ ಅದು. ಬಹಳ ಸಂಕಟದಲ್ಲಿ ಬಿದ್ದಿದ್ದೆ.

ರಮಾ—ಏನು ಕಂಡೆ ?

ಜಾಲಪ—ಏನು ಹೇಳಲಿ ? ಹೇಳಲಿಕ್ಕೆ ಬಾಯಿಯೇ ಬರುವುದಿಲ್ಲ. ನಿಮ್ಮನ್ನು ಸಿಪಾಯಿಗಳು ಎಳೆದುಕೊಂಡು ಹೋಗುವುದನ್ನು ನೋಡಿದೆ. ಅವರ ರೂಪವು ಎಷ್ಟು ಭಯಂಕರ !

ರಮಾನಾಥನ ನೇತ್ರರು ಹೆಪ್ಪುಗಟ್ಟಿತು ನಾಲ್ಕು ದಿನ ಹಿಂದಾಗುತ್ತಿದ್ದರೆ ಅವನೀ ಕನಸನ್ನು ನಗುವಿನಲ್ಲಿ ತೇಲಿಸಿಬಿಡುತ್ತಿದ್ದನು. ಆದರೆ ಈಗ ತನ್ನೆದೆಯಲ್ಲಿ ಸಂದೇಹ ಉಂಟಾಗುವುದನ್ನು ಅವನು ತಡೆಯದಾದನು. ಆದರೂ ಹೊರಗಿನಿಂದ ನಗುತ್ತಾ ಹೇಳಿದನು—ಇವರನ್ನೇಕೆ ಒಯ್ಯುತ್ತಿರುವಿರೆಂದು ನೀನು ಅವರನ್ನು ಕೇಳಲಿಲ್ಲವೆ ?

ಜಾಲಪ—ನಿಮಗೆ ಹಾಸ್ಯವೇಳುತ್ತಿದೆ. ನನ್ನ ಹೃದಯವಾದರೊ ನಡುಗುತ್ತಿದೆ.

ಕೆಲಹೊತ್ತಿನ ಮೇಲೆ ರಮಾನಾಥನು ನಿದ್ದೆಯಲ್ಲಿ ಕನವರಿಸಹತ್ತಿದನು—'ಅಮ್ಮಾ, ಇಲ್ಲಿ, ಕೇಳು. ಇನ್ನು ನೀನು ನನ್ನ ಮುಖ ನೋಡಲಾರೆ. ನಾನು ಮುಳುಗಿ ಸಾಯುವೆನು.'

ಜಾಲಪಳಿಗೆ ಆಗ ನಿದ್ದೆ ಬಂದಿರಲಿಲ್ಲ. ಭಯಭೀತಳಾಗಿ ಅವಳು ರಮಾನಾಥನನ್ನು ಜೋರಾಗಿ ತಡವಿ ಎಬ್ಬಿಸಿದಳು—ನನ್ನ ಕನಸಿಗೆ ನಗುತ್ತಿದ್ದಿರಿ ಈಗ ಸ್ವತಃ ಬಾಯಿಗೆ ಬಂದುದನ್ನು ಒದರುತ್ತಿದ್ದೀರಿ. ಅದನ್ನು ಕೇಳಿ ರೋಮಗಳು ನೆಟ್ಟಗಾದುವು. ಏನು ಸ್ವಪ್ನ ಬಿತ್ತೆ ?

ರಮಾನಾಥನು ಲಜ್ಜಿತನಾಗಿ ಹೇಳಿದನು—ಹೌದು, ಏನು ನೋಡಿದೆನೋ ಹೇಳಲಾರೆ. ನೆನಪೇ ಆಗಲೊಲ್ಲದು.

ಜಾಲಪಳು ಕೇಳಿದಳು—ತಾಯಿಯವರನ್ನೇಕೆ ಗದರಿಸುತ್ತಿದ್ದಿರಿ? ಸತ್ಯ ಹೇಳಿರಿ ಏನನ್ನು ಕಂಡಿರಿ?

ರಮಾನಾಥನು ತಲೆ ತುರಿಸುತ್ತ ಹೇಳಿದನು—ಏನೂ ಜ್ಞಾಪಕಕ್ಕೆ ಬರುವುದಿಲ್ಲ. ಹೀಗೇ ಏನಾದರೂ ಹರಟಿರಬಹುದು.

ಜಾಲಪ—ಇರಲಿ, ಮುಗ್ಗುಲಾಗಿ ಮಲಗಿರಿ ಹಾಗೆ ಮಾಡಿದರೆ ಕನಸು ಬೀಳುವುದಿಲ್ಲ.

ರಮಾನಾಥನು ಹಾಗೆಯೆ ಮಲಗಿದನು; ಆದರೆ ಚಿಂತೆ ಶಂಕೆಗಳೆರಡು ಆತನ ಎರಡು ಕಣ್ಣುಗಳಲ್ಲಿ ಕೂತು ನಿದ್ರೆಯ ಆಕ್ರಮಣದಿಂದ ಅವನ ರಕ್ಷೆಗೈವಂತಿತ್ತು. ಎಚ್ಚರದಲ್ಲಿದ್ದಂತೆಯೆ ಎರಡು ಗಂಟೆ ಹೊಡೆಯಿತು. ಜಾಲಪಳು ಎದ್ದು ಹೂಜೆಯ ನೀರನ್ನು ಕುಡಿಯುತ್ತ ಹೇಳಿದಳು—ಬಹಳ ಬಾಯಾರಿಕೆಯಾಯಿತು. ಏನು, ನೀವಿನ್ನೂ ನಿದ್ದೆ ಹೋಗಿಲ್ಲವೆ?

ರಮಾ—ಹೌದು, ನಿದ್ದೆ ಬರಲೇ ಇಲ್ಲ; ನಿನ್ನ ಹತ್ತಿರ ಇನ್ನೂರು ರೂಪಾಯಿಗಳು ಹೇಗೆ ಬಂದುವೆಂದು ಯೋಚಿಸುತ್ತಿದ್ದೆ ನನಗೆ ಅದೇ ಆಶ್ಚರ್ಯ.

ಜಾಲಪ—ಅದು ನಾನು ತವರುಮನೆಯಿಂದ ತಂದುದು ಸ್ವಲ್ಪ ತಂದೆಯವರು ಬಿಳ್ಕೊಳ್ಳುವಾಗ ಕೊಟ್ಟದ್ದು; ಇನ್ನು ಸ್ವಲ್ಪ ನಾನು ಒಟ್ಟುಗೂಡಿಸಿದ್ದು.

ರಮಾ—ಹಾಗಾದರೆ ನೀನು ಹಣಕೂಡಿಸುವುದರಲ್ಲಿ ಬಹು ಹುಷಾರಿ. ಚಿಂತಿಲ್ಲ. ಆದರೆ ಇಲ್ಲೇಕೆ ಹಾಗೆ ಒಟ್ಟುಗೂಡಿಸುವುದನ್ನು ಬಿಟ್ಟೆ?

ಜಾಲಪ—ನೀವು ದೊರೆತ ಮೇಲೆ ನನಗೆ ರೂಪಾಯಿಗಳೇಕೆ?

ರಮಾ—ಅದಕ್ಕಾಗಿ ನಿನ್ನ ಅದೃಷ್ಟವನ್ನು ಬಯ್ಯುತ್ತಿರಬಹುದಲ್ಲವೆ ನೀನು?

ಜಾಲಪ—ಏಕೆ ಬಯ್ಯಲಿ? ಯಾರ ಪತಿಯು ಹೆಂಡ ಕುಡುಕನೊ, ದುರಾಚಾರಿಯೋ, ರೋಗಿಯೋ, ಮಾತು ಮಾತಿಗೆ ಹೆಂಡತಿಯನ್ನು ಗದರಿಸುವಂತಹನೊ, ಕೆಣಕುವಂತಹನೊ, ಅಂತಹ ಪತ್ನಿಯರು ಬೇಕಾದರೆ ತಮ್ಮ ಭಾಗ್ಯವನ್ನು ಹಳಿದುಕೊಳ್ಳಲಿ. ಪುರುಷನು ತನ್ನ ಮನಸ್ಸಿಗೊಪ್ಪಿದನೆಂದರೆ ಸ್ತ್ರೀಯು ಆತನೊಡನೆ ಉಪವಾಸವಿದ್ದರೂ ಸಂತೋಷದಿಂದಿರಬಲ್ಲಳು.

ರಮಾನಾಥನು ವಿರೋಧ ಭಾವದಿಂದ ಹೇಳಿದನು—ಹಾಗಾದರೆ ನಾನು ನಿನ್ನ ಮನಸ್ಸಿಗೆ ಒಪ್ಪಿಗೆಯಾದವನೆ?

ಜಾಲಪಗಳು ಪ್ರೇಮ ಪೂರ್ಣ ಗರ್ವದಿಂದ ಹೇಳಿದಳು—ನಾನು ಬಯಸಿದುದಕ್ಕಿಂತ ಎಷ್ಟೋ ಮಿಗಿಲಾಗಿ ನೀವೆನಗೆ ದೊರೆತಿರುವಿರಿ. ನನ್ನ ಮೂವರು ಸಖಿಯರಿದ್ದಾರಲ್ಲ, ಅವರಲ್ಲಿ ಒಬ್ಬಳೇ ಒಬ್ಬಳ ಗಂಡನಾದರೂ ನಿಮ್ಮಂತಿಲ್ಲ; ಒಬ್ಬನು ಎಮ್. ಎ. ಆಗಿರುವನಾದರೂ ರೋಗಿ; ಇನ್ನೊಬ್ಬನು ಶ್ರೀಮಂತನು, ವಿದ್ವಾಂಸನು, ಆದರೆ ವೇಶ್ಯಾಗಾಮಿ; ಮೂರನೆಯವನು ಕೆಲಸಗಳ್ಳನು.

ರಮಾನಾಥನು ಹೃದಯವು ಗದ್ಗದವಾಯಿತು. ಇಂತಹ ಪ್ರೇಮದ ಪುತ್ಥಳಿ, ದಯೆಯ ದೇವಿಯೊಡನೆ ಅವನೆಂತಹ ದೊಡ್ಡ ವಿಶ್ವಾಸಘಾತವನ್ನು ಮಾಡಿದ್ದನು. ಇಷ್ಟು ಲೋಪಗಳು ತನ್ನಲ್ಲಿದ್ದರೂ ಈಕೆ ತನ್ನನ್ನು ಈ ರೀತಿ ಪ್ರೀತಿಸುವುದಾದರೆ, ತಾನು ಇವಳೊಡನೆ ನಿಷ್ಕಪಟನಾಗಿ ವರ್ತಿಸುತ್ತಿದ್ದರೆ, ತನ್ನ ಜೀವನವು ಎಷ್ಟು ಆನಂದಮಯವಾಗುತ್ತಿದ್ದಿಲ್ಲ!

## ೧೯

ಪ್ರಾತಃಕಾಲ. ರಮಾನಾಥನು ರತನಳೆಡೆಗೆ ಜನವನ್ನು ಕಳುಹಿಸಿದನು. ಬಳೆಗಳು ಇನ್ನು ನಾಲ್ಕು ದಿನಗಳಲ್ಲಿ ಸಿಗುವುವೆಂದೂ ಆ ಚೀಲದಲ್ಲಿ ತನ್ನ ಇನ್ನೂರು ರೂಪಾಯಿಗಳು ಇದ್ದುವೆಂದೂ ಅವುಗಳನ್ನು ಕಳುಹಿಸಬೇಕೆಂದೂ ಬರೆದು ಅವನ ಹತ್ತಿರ ಕೊಟ್ಟಿದ್ದನು. ತನ್ನ ಮರ್ಯಾದೆಯನ್ನು ಉಳಿಸಿಕೊಂಡು ಎಷ್ಟು ವಿನಮ್ರತೆ ಅವನಿಂದ ಸಾಧ್ಯವೋ, ಅಷ್ಟಕ್ಕೆ ಅವನು ಏನೂ ಕಡಮೆ ಮಾಡಲಿಲ್ಲ. ಅವನು ಕಳುಹಿದ ಆಳು ಬರುವವರೆಗೆ ಅವನ ವ್ಯಗ್ರತೆಯಿಂದ ಆತನ ದಾರಿಯನ್ನು ನೋಡುತ್ತಿದ್ದನು. ಕೊನೆಗೆ ಒಂಬತ್ತು ಗಂಟೆಯ ಸುಮಾರಿಗೆ ಆಳು ಮರಳಿದನು. ರತನಳು ಇನ್ನೂರು ರೂಪಾಯಿಗಳನ್ನೇನೋ ಕೊಟ್ಟಿದ್ದಳು; ಆದರೆ ಪತ್ರಕ್ಕೆ ಉತ್ತರವಿರಲಿಲ್ಲ.

ರಮಾನಾಥನು ನಿರಾಶೆಯಿಂದ ಆಕಾಶದ ಕಡೆಗೆ ನೋಡಿದನು. ರತನಳಿಗೆ ಇಷ್ಟು ಶಿಷ್ಟಾಚಾರದ ಅರಿವಿಲ್ಲವೇ ಎಂದು ಯೋಚಿಸಿದನು. ಈ ಯೋಚನೆಯ ನಡುವೆ ಅವನಿಗೆ ಸ್ನಾನ ಊಟಗಳ ಪರಿವೆಯೇ ಇರಲಿಲ್ಲ.

ರಮಾನಾಥನು ರೂಪಾಯಿಗಳನ್ನು ಹಿಡಿದುಕೊಂಡು ಒಳಗೆ ಬಂದಾಗ ಜಾಲಪಳೆಂದಳು—ನೀವು ರತನಳಿಂದ ಹಣ ತರಿಸಿದ್ದೇಕೆ ? ನಾನು ಕೊಡುತ್ತಿರಲಿಲ್ಲವೆ ?

ರಮಾಥನು ಉದಾಸೀನ ಭಾವದಿಂದ ಹೇಳಿದನು—ಇನ್ನು ಬೇಡ.

ಜಾಲಪ—ರೂಪಾಯಿ ಕೊಡುವೆನೆಂದು ನಾನು ನಿನ್ನೆಯೆ ಹೇಳಿರಲಿಲ್ಲವೆ ? ನಿಮಗೆ ಇಷ್ಟು ಅವಸರದಿಂದ ಅದನ್ನು ರತನಳ ಕಡೆಯಿಂದ ತರಿಸುವ ಅವಶ್ಯಕತೆಯಾದರೂ ಏನಿತ್ತು ? ಅವಳು ಮನಸ್ಸಿನಲ್ಲಿ ಏನು ಯೋಚಿಸುತ್ತಿರಬಹುದು ? ತನ್ನ ಮೇಲೆ ಇವರಿಗೆ ಇಷ್ಟೂ ವಿಶ್ವಾಸವಿಲ್ಲನೆಂದು ಎಣಿಸಲೆ ?

ರಮಾನಾಥನು ಹತಾಶನಾಗಿ ಹೇಳಿದನು—ನಾನೇನೂ ಕೇಳಿರಲಿಲ್ಲ. ಆ ಚೀಲದಲ್ಲಿಯ ಇನ್ನೂರು ನನ್ನವೆಂದು ಬರೆದಿದ್ದೆ. ಅವಳು ತಾನಾಗಿ ಕಳುಹಿಸಿಕೊಟ್ಟಳು.

ಜಾಲಪಳು ನಕ್ಕು ಹೇಳಿದಳು—ನನ್ನ ರೂಪಾಯಿಗಳು ಬಹಳ ಲಕ್ಷಣದವುಗಳು. ಎಲ್ಲವೂ ಈ ವರ್ಷದವು. ಥಳಥಳ ಎನ್ನುತ್ತವೆ. ನೋಡಿದರೆ ಕಣ್ಣಿಗೆ ಹಬ್ಬವಾಗುವುದು.

ಅಷ್ಟರಲ್ಲಿ ಕೆಳಗಿನಿಂದ ದನಿ ಕೇಳಿಸಿತು—ಬಾಬೂಜಿ, ಸೇಠಜಿಯವರು ರೂಪಾಯಿ ಕೊಡಲಿಕ್ಕೆ ಹೇಳಿದ್ದಾರೆ.

ದಯಾನಾಥರು ಸ್ನಾನಕ್ಕೆಂದು ಒಳಗೆ ಹೋಗುವುದರಲ್ಲಿದ್ದವರು ಸೇಠಜಿಯ ಆಳನ್ನು ಕಂಡು ಕೇಳಿದಳು—ಯಾವ ಸೇಠ್ ? ಎಂತಹ ರೂಪಾಯಿ ? ನಮ್ಮ ಮನೆಗೆ ಬೇರೆಯವರ ರೂಪಾಯಿ ಬರುವ ಕ್ರಮವಿಲ್ಲ.

ದಯಾನಾಥರು ರಮಾನಾಥನನ್ನು ಕರೆದು ಹೇಳಿದರು—ನೋಡು, ಅವನು ಯಾವ ಸೇಠರ ಕಡೆಯಿಂದ ಬಂದಿರುವನೆಂದು ? ಅವನಿಗೆ ನೀನು ಕೊಡುವುದಿದೆಯಂತೆ ಕೊಡಬಾರದೆ ? ಎಷ್ಟಿದೆ ?

ರಮಾನಾಥನಿಗೆ ಏನು ಉತ್ತರಿಸುವುದೆಂದೇ ತೋಚಲಿಲ್ಲ. ಅಷ್ಟರಲ್ಲಿ ಆಳು ಹೇಳಿದನು—ಸರಿ. ಏಳ್ನೂರು, ಬಾಬೂಜಿ ?

ರಮಾನಾಥ—ಏನೋ ನನಗೆ ಸರಿಯಾಗಿ ಗೊತ್ತಿಲ್ಲ.

ಆಳು—ಯಾಕೆ ಗೊತ್ತಿಲ್ಲ ? ನನ್ನ ಹತ್ತಿರ ರಶೀದಿಯಿದೆ. ಅವತ್ತಿನಿಂದ ಏನೂ ಕೊಟ್ಟಿಲ್ಲ. ಕಡಮೆಯಾಗುವುದು ಹೇಗೆ !

ರಮಾನಾಥನು ಆವನ ಹತ್ತಿರ ಹೇಳಿದನು—ಸರಿ, ನಡಿ ಅಂಗಡಿಗೆ. ನಾನೇ ಸ್ವತಃ ಅಲ್ಲಿಗೆ ಬರುತ್ತೇನೆ.

ಆಳು—ನಮಗೇನೂ ದೊರೆಯದೆ ನಾವು ಇಲ್ಲಿಂದ ಕಾಲು ಕೀಳುವವರೇ ಅಲ್ಲ. ನೀವು ಹೀಗೆಯೇ ತಡ ಮಾಡಿದರೆ ಅಲ್ಲಿ ಬೈಗಳನ್ನು ಕೇಳಬೇಕು ನಾವು.

ರಮಾನಾಥನು ಇಡೀ ಸಮಾಜದ ದೃಷ್ಟಿಯಲ್ಲಿ ನೀಚನಾಗಬಲ್ಲನು. ಆದರೆ ತಂದೆಯ ಮುಂದೆ ನೀಚನಾಗುವುದು ಮಾತ್ರ ಅವನಿಗೆ ಮರಣಕ್ಕಿಂತ ಹೆಚ್ಚೇ ಆಗಿದ್ದಿತು. ಯಾವನು ತನ್ನ ಇಡೀ ಬಾಳುವೆಯಲ್ಲಿ ಅಧರ್ಮದ ಒಂದು ಕಾಸನ್ನೂ ಮುಟ್ಟಿಲ್ಲವೋ, ಕಡ ತೆಗೆದುಕೊಂಡು ಉಣ್ಣುವುದಕ್ಕಿಂತ ಉಪವಾಸ ಬಿದ್ದು ಸಾಯುವದೇ ಲೇಸೆಂದು ಯಾರ ಅಭಿಪ್ರಾಯವಿತ್ತೋ, ಅಂತಹ ವ್ಯಕ್ತಿಯ ಮಗನು ನಿರ್ಲಜ್ಜನು! ನಾಚಿಕೆಗೇಡಿ! ತಂದೆಯ ಆತ್ಮಕ್ಕೆ ಅವನು ಈ ರೀತಿ ಅಪಮಾನ ಮಾಡಲಾರದಾದನು. ಮಗನು ಅವರ ಹೆಸರಿಗೆ ಕಳಂಕ ಹಚ್ಚುತ್ತಿರುವನೆಂದು ಅವರಿಗೆ ತಿಳಿಯಲಾಗದು. ಕರ್ಕಶ ಸ್ವರದಿಂದ ಅವನು ಆಳಿಗೆ ಹೇಳಿದನು—ಇನ್ನೂ ನಿಂತಿರುವುದೇಕೆ? ಸರಿಯಾ ಹೀಗೆ. ಇಲ್ಲವಾದರೆ ಒದ್ದು ಹೊರಗೆ ಹಾಕುತ್ತೇನೆ.

ಆಳು—ನಮ್ಮ ರೂಪಾಯಿ ಕೊಟ್ಟುಬಿಡಿರಿ. ನಾವು ಹೊರಡುತ್ತೇವೆ. ನಿಮ್ಮ ಬಾಗಿಲಲ್ಲಿ ನಮಗೇನು ಮಿಠಾಯಿ ಸಿಗುತ್ತದೆಯೆ?

ರಮಾ—ನೀನು ಹೋಗುವುದಿಲ್ಲವೆ? ಹೋಗು ಸೇಠಜಿಯವರ ಹತ್ತಿರ ವ್ಯಾಜ್ಯ ಮಾಡಲಿಕ್ಕೆ ಹೇಳು.

ದಯಾನಾಥರು ಗದರಿಸಿದರು—ಎಂಥ ನಿರ್ಲಜ್ಜೆಯಿಂದ ಮಾತಾಡುತ್ತಿರುವೆಯೋ! ಕಿಸೆಯಲ್ಲಿ ದುಡ್ಡಿಲ್ಲವೆಂದಮೇಲೆ ಒಡವೆಯನ್ನೇಕೆ ತಂದೆ? ಈಗ ತಂದಾಯಿತು. ರೂಪಾಯಿ ಕೊಡು. ಹೇಳಿಬಿಟ್ಟೆ, ವ್ಯಾಜ್ಯ ಮಾಡಿರೆಂದು. ವ್ಯಾಜ್ಯಕ್ಕೆ ಹೋದರೆ ಮರ್ಯಾದೆ ಎಷ್ಟು ಉಳಿಯುವದೆಂಬ ಯೋಚನೆಯಾದರೂ ಇದೆಯೆ? ಪೇಟೆಗೆ ಪೇಟೆಯೇ ಬೆರಳು ತೋರಿಸಹತ್ತುವುದು. ಆದರೆ, ನಿನಗೇಕಿದ್ದೀತು ಆ ಚಿಂತೆ! ಅಲ್ಲವಾದರೆ ಇಷ್ಟು ದೊಡ್ಡ ಹೊರೆ ಹೊರುವ ಸಾಹಸವನ್ನೇಕೆ ಮಾಡಿದೆ ಹೇಳು. ಗಂಡನ ಮೂರ್ಖತನವನ್ನು

ಕುಂಡೂ. ಅವನನ್ನು ತಡೆದುಹಿಡಿಯದ ಹೆಂಡತಿಯಾದರೂ ಎಂಥವಳು! ನೀನು ಏನೆಂದಿಣಿಸಿ ಸಾಲ ಮಾಡಿದಿ? ನಿನ್ನ ಆದಾಯವೇನೂ ಹೇಳಕೊಳ್ಳು ವಹ್ಹಿಲ್ಲ.

ರಮಾನಾಥನು ನಿಸ್ಸಂಕೋಚವಾಗಿ ಹೇಳಿದನು—ನೀವು ಸುಮ್ಮನೆ ಸಿಟ್ಟಾಗುತ್ತಿದ್ದೀರಿ. ನಿಮ್ಮ ಹತ್ತಿರ ರೂಪಾಯಿ ಕೇಳಲಿಕ್ಕೆ ಬಂದಾಗಲ್ಲವೆ? ಈಗ ಏನು ಬೇಕಾದರೂ ಅನ್ನಿರಿ. ನನ್ನ ವೇತನದಿಂದ ಸ್ವಲ್ಪ ಸ್ವಲ್ಪವೇ ತೆಗೆದು ತೀರಿಸುತ್ತೇನೆ

ತನ್ನ ಮನಸ್ಸಿನೊಳಗೇ ಹೀಗೆಂದುಕೊಂಡನು—ಇದು ನಿಮ್ಮ ಕರ್ಮದ ಫಲ. ಇದು ನಿಮ್ಮ ಪಾಪದ ಪ್ರಾಯಶ್ಚಿತ್ತವಲ್ಲದೆ ಮತ್ತೇನು?

ಪಿತಾಪುತ್ರರಲ್ಲಿ ಜಗಳಕ್ಕಿಟ್ಟುದನ್ನು ನೋಡಿ ಸೇಠಜಿಯ ಆಳು ಮೆಲ್ಲನೆ ಅಲ್ಲಿಂದ ನುಸುಳಿಕೊಂಡನು. ದಯಾನಾಥರು ಸ್ನಾನಕ್ಕೆ ಹೋದರು; ರಮಾ ನಾಥನು ಮೇಲಕ್ಕೆ ಹೋದನು. ಅವನ ಮುಖದ ಮೇಲೆ ಲಜ್ಜೆ, ಗ್ಲಾನಿಗಳು ಎದ್ದು ತೋರುತ್ತಿದ್ದವು. ಯಾವ ಅಪಮಾನದಿಂದ ಉಳಿಯಬೇಕೆಂದು ಅವನು ಯತ್ನಿಸುತ್ತಿದ್ದನೋ, ಅದು ನಡದೇ ಹೋಯಿತು. ಈಗ ಅವನ ಮುಂದೆ ಯಮದೂತರು ಬಂದು ನಿಂತರೂ ಅವನು ಆನಂದದಿಂದ ಅವರನ್ನು ಸ್ವಾಗತಿಸುತ್ತಿದ್ದನು. ಎಲ್ಲಿ ಏನಾಗುವುದೋ, ಈ ಶಬ್ದವು ಅವನ ರೋಮ ರೋಮಗಳಿಂದ ಹೊಮ್ಮುತ್ತಿತ್ತು. ಎಲ್ಲಿ ಏನಾಗುವುದು? ಇದಕ್ಕಿಂತ ಹೆಚ್ಚಿನ ವ್ಯಾತ್ಯೆಯು ಅವನಿಂದ ಸಾಧ್ಯವಿಲ್ಲದಾಗಿತ್ತು ಈ ಒಂದು ಪ್ರಶ್ನೆಯೇ ಒಂದು ಸರ್ವ ವ್ಯಾಪಿ ಪಿಶಾಚಿಯಂತೆ ಅವನನ್ನೇ ದಿಟ್ಟಿಸುತ್ತಿತ್ತು.

ಜಾಲಪಳು ಕೇಳಿದಳು—ಇವನಿಗೆ ಇನ್ನು ಸ್ವಲ್ಪವೇ ಕೊಡುವುದುಳಿದಿ ದೆಯೆಂದು ನೀವು ಹೇಳಿದ್ದಿರಲ್ಲವೆ?

ರಮಾನಾಥನು ತಲೆತಗ್ಗಿಸಿ ಹೇಳಿದನು—ಈ ದುಷ್ಟನು ಸುಳ್ಳು ಹೇಳು ತ್ತಿರವನು. ನಾನು ರೂಪಾಯಿ ಕೊಟ್ಟಿರುತ್ತೇನೆ.

ಜಾಲಪ—ಕೊಟ್ಟಿದ್ದರೆ ಅವನು ತಗಾಗೆ ಮಾಡುತ್ತಿದ್ದನೇಕೆ? ನಿಮ್ಮ ಆದಾಯವು ಕಡಮೆ ಇದ್ದಾಗ ನೀವು ಒಡವೆಗಳನ್ನು ಕೊಂಡುದಾದರೂ ಏಕೆ? ನಾನೇನೂ ಹಟ ಹಿಡಿಯಲಿಲ್ಲ. ನಿಮ್ಮೊಟ್ಟಿಗೆ ನನಗೂ ಎರಡು ಮಾತು

ಕೇಳುವಂತೆ ಮಾಡಿದಿರಿ. ನೀವು ನನ್ನಲ್ಲಿ ಮುಚ್ಚುಮರೆ ಮಾಡುತ್ತಿದ್ದೀರಿ. ನಿಮ್ಮ ಆದಾಯವು ಇಷ್ಟು ಕಡಮೆಯೆಂದು ಗೊತ್ತಿದ್ದರೆ ಕೇರಿಯ ಹೆಂಗಸರನ್ನೆಲ್ಲಾ ಟಾಂಗದ ಮೇಲೆ ಮೆರವಣಿಗೆ ಮಾಡಿಸುವುದಕ್ಕೆ ನನಗೇನು ಹುಚ್ಚೆ? ನೀವು ನನಗೆ ಈ ರೀತಿ ಮೋಸ ಮಾಡುತ್ತಿದ್ದೀರೆಂದು ನನಗೇನು ಗೊತ್ತು? ನಿಮ್ಮನ್ನು ಕಿತ್ತು ಹರಿದು ಮನೆತಂಬಿಸಿಕೊಳ್ಳಲಿಕ್ಕೆ ನಾನೇನೂ ಸೂಳೆಯಲ್ಲವೆಂದು ಹಿಂದೊಮ್ಮೆ ಹೇಳಿರುವೆ. ಒಳ್ಳೆಯದರಲ್ಲೂ, ಕೆಟ್ಟದರಲ್ಲೂ ನಾನು ನಿಮ್ಮ ಜೊತೆಗಾಗಿ ಇರುವೆನು. ಸುಖದಲ್ಲಿ ಬೇಕಾದರೆ ನೀವು ನನ್ನನ್ನು ಮಾತಾಡಿಸದಿದ್ದರೂ ಚಿಂತೆ ಇಲ್ಲ; ಆದರೆ ಕಷ್ಟಬಂದಾಗ ನಿಮ್ಮ ಕುತ್ತಿಗೆಗೆ ಜೋಲು ಬಿದ್ದೇ ಬೀಳುವೆನು.

ರಮಾನಾಥನ ಬಾಯಿಯಿಂದ ಒಂದು ಶಬ್ದವೂ ಹೊರಡಲಿಲ್ಲ. ರಮಾನಾಥನು ಊಟ ಮಾಡಿ ಆಫೀಸಿಗೆ ಹೋಗುವುದಕ್ಕೆಂದು ಹೊರಗೆ ಕಾಲಿಟ್ಟಾಗ ಜಾಲಪಳು ಹಠಾತ್ತಾಗಿ ಬಂದು ಹೇಳಿದಳು—ನನ್ನ ಹತ್ತಿರ ಇರುವ ೨೦೦ ರೂಪಾಯಿಗಳನ್ನು ಸರಾಫನಿಗೆ ಕೊಡಬಾರದೆ?

ಹೊರಡುವ ಸಮಯ ರಮಾನಾಥನು ಬೇಕೆಂದೇ ರೂಪಾಯಿ ಕೇಳಿರಲಿಲ್ಲ. ಅಷ್ಟೆಲ್ಲಾ ಮಾತುಗಳನ್ನು ಕೇಳಿದ ಬಳಿಕ ಅವಳನ್ನು ಬೇಡುವುದಕ್ಕೆ ಅವನಿಗೆ ಸಂಕೋಚ ಮಾತ್ರವಲ್ಲ, ಭಯವೂ ಆಗುತ್ತಿತ್ತು. ಎಲ್ಲಿಯಾದರೂ ಪುನಃ ಅವಳು ಉಪದೇಶಕ್ಕೆ ತೊಡಗಿಬಿಟ್ಟರೆ? ಅದಕ್ಕಿಂತ ಈ ವಿಪತ್ತುಗಳೇ ಆದೀತು. ಆದರೆ ಜಾಲಪಳು ಕರೆದಾಗ ಸ್ವಲ್ಪ ಆಸೆ ಉಂಟಾಯಿತು. ನಿಂತು ಹೇಳಿದನು—ಒಳ್ಳೆಯದು. ತಂದುಕೊಡು.

ಜಾಲಪಳು ಓಡೋಡುತ್ತ ಮೇಲೆ ಹೋಗಿ ರೂಪಾಯಿಗಳನ್ನು ತಂದು ಅವನ ಚೀಲದಲ್ಲಿ ತುಂಬಿಸಿದಳು. ರಮಾನಾಥನು ಹಣ ದೊರೆತೊಡನೆ ಆನಂದದಿಂದ ಹಿಗ್ಗುವನೆಂದು ಆಕೆ ಎಣಿಸಿದ್ದಳು. ಆದರೆ ಇಲ್ಲ, ಇನ್ನೂರು ಮುನ್ನೂರು ರೂಪಾಯಿಗಳಾಗಬೇಕು. ಅದೆಲ್ಲಿಂದ ಬರಬೇಕು? ಹಸಿವೆಯಿಂದ ಬಳಲುತ್ತಿರುವ ಮನುಷ್ಯನಿಗೆ ಬೇಕಾದುದು ಹೊಟ್ಟೆತುಂಬ ಅನ್ನ ಬರೀ ಎರಡು ತುತ್ತಿನಿಂದ ಅವನಿಗೆ ತೃಪ್ತಿಯಾಗುವಂತಿಲ್ಲ.

ರಸ್ತೆಯನ್ನು ಸೇರಿದೊಡನೆ ರಮಾನಾಥನು ಒಂದು ಟಾಂಗವನ್ನು ಮಾಡಿಕೊಂಡು ಜಾರ್ಜ ಟೌನಿನತ್ತ ತೆರಳಲು ಹೇಳಿದನು, ರತನಳು ಸಿಕ್ಕಿ

ದರೆ ಏನಾದರೂ ಆಗಬಹುದೆಂದು ಆತನ ಆಸೆ. ಜಾರ್ಜ ಟೌನ್ ಬಂದಿತು; ರತನಳ ಮನೆಯೂ ಬಂದಿತು. ರತನಳು ಜಗಲಿಯಲ್ಲಿ ಕೂತಿದ್ದಳು. ಅವಳನ್ನು ಕಂಡು ರಮಾನಾಥನ ಕೈ ಮೇಲೆ ಹೋಯಿತು. ಅವಳೂ ಕೈ ಮೇಲೆತ್ತಿದಳು. ಆದರೆ ರಮಾನಾಥನ ಸಂಯಮವು ಕಡಿದು ಹೋಯಿತು. ಅಷ್ಟರಲ್ಲಿ ಟಾಂಗವೂ ಮುಂದೆ ಹೋಯಿತು. ರತನಳು ಕರೆಯುತ್ತಿದ್ದರೆ ಅವನು ಮುಂದೆ ಹೋಗುತ್ತಿದ್ದನು; ರತನಳು ಒಳಗಿದ್ದರೂ ಅವನು ಹೋತ್ತಿದ್ದನು. ಆದರೆ ಅವಳನ್ನು ಎದುರಲ್ಲಿ ಕಂಡು ಅವನು ಸಂಕೋಚದಲ್ಲಿ ಮುಳುಗಿ ಹೋದನು.

ಮುನ್ಸಿಪಲ್ ಆಫೀಸು ಬಂದಿತು. ರಮಾನಾಥನು ಇಳಿದವನೇ ನೇರಾಗಿ ರಮೇಶಬಾಬುಗಳಲ್ಲಿಗೆ ಹೋದನು ಅವರು ಇವನು ಬಂದೊಡನೆ ಕೇಳಿದರು—ಎಲ್ಲಿದ್ದೆ ಇಷ್ಟು ಹೊತ್ತು? ಖಜಾಂಚಿಯವರು ನಿನ್ನನ್ನು ಹುಡುಕುತ್ತ ಇದ್ದರು. ಪೇದೆ ಸಿಗಲಿಲ್ಲವೇ?

ರಮಾನಾಥನು ಹೇಳಿದನು —ನಾನು ಮನೆಯಲ್ಲಿರಲಿಲ್ಲ. ಹೀಗೆ ವಕೀಲರಲ್ಲಿಗೆ ಹೋಗಿದ್ದೆ. ದೊಡ್ಡ ಗಂಡಾಂತರವೊಂದರಲ್ಲಿ ಬಿದ್ದಿದ್ದೇನೆ.

ರಮೇಶ—ಏನದು ಮನೆಯಲ್ಲಿ ಎಲ್ಲರೂ ಕ್ಷೇಮವಷ್ಟೆ?

ರಮಾ—ಮನೆಯಲ್ಲೇನೂ ತೊಂದರೆಯಿಲ್ಲ. ನಿನ್ನೆ ಸಂಜೆ ಇಲ್ಲಿ ಬಹಳ ಕೆಲಸವಿದ್ದುದರಿಂದ ನನಗೆ ಸಮಯದ ಪರವೆಯೇ ಇರಲಿಲ್ಲ. ಕೆಲಸ ಮುಗಿಸಿ ಎದ್ದಾಗ ಖಜಾಂಚಿಯವರು ಹೋಗಿ ಬಿಟ್ಟಿದ್ದರು. ನನ್ನ ಕೋಣೆಯಲ್ಲಿ ಪೆಟ್ಟಿಗೆಯೇನೂ ಇಲ್ಲವಷ್ಟೇ ಆದುದರಿಂದ ನಿನ್ನೆ ಜಮೆಯಾದ ೮೦೦ ರೂಪಾಯಿಗಳನ್ನು ಮನೆಗೆ ತೆಗೆದುಕೊಂಡು ಹೋಗುವದೇ ವಿಹಿತವೆಂದು ಬಗೆದೆನು. ನಗದಿ ಐನೂರು ರೂಪಾಯಿಗಳನ್ನು ಚೀಲದಲ್ಲಿಟ್ಟಿದ್ದೆನು. ಮುನ್ನೂರು ರೂಪಾಯಿಗಳ ನೋಟನ್ನು ಕಿಸೆಯಲ್ಲಿ ಹಾಕಿಕೊಂಡು ಮನೆಗೆ ಹೊರಟೆ. ಪೇಟೆಯಲ್ಲಿ ಒಂದೆರಡು ಸಾಮಾನು ಖರೀದಿ ಮಾಡಬೇಕಾಗಿತ್ತು. ಅದನ್ನೆಲ್ಲಾ ಮುಗಿಸಿ ಮನೆಗೆ ಹೋಗಿ ನೋಡುತ್ತೇನೆ. ನೋಟುಗಳಿಲ್ಲ.

ರಮೇಶ ಬಾಬುಗಳು ಆಶ್ಚರ್ಯದಿಂದ ಕೇಳಿದರು—ಮುನ್ನೂರು ರೂಪಾಯಿಗಳ ನೋಟಗಳು ಕಾಣೆಯಾದುವೆ?

ರಮಾ— ಹೌದು. ಕೋಟಿನ ಮೇಲು ಕಿಸೆಯಲ್ಲಿತ್ತು. ಯಾರೋ ಹಾರಿಸಿಬಿಟ್ಟರು.

ರಮೇಶ—ನಿನ್ನನ್ನು ಗುದ್ದಿ ನಿನ್ನ ಕೈಯಿಂದ ಥೈಲಿ ಹಾರಿಸಲಿಲ್ಲವಷ್ಟೆ!

ರಮಾ—ಏನನ್ನು ಹೇಳಲಿ ರಮೇಶಬಾಬುಗಳೆ? ಆಗಿನಿಂದ ನನ್ನ ಚಿತ್ತದ ಸ್ಥಿತಿ ಏನೆಂದು ವಿವರಿಸಲಾರೆ. ಅದೇ ಚಿಂತೆಯಲ್ಲಿದ್ದೇನೆ. ಯಾವೊಂದು ಏರ್ಪಾಡನ್ನು ಮಾಡಲಾಗಲಿಲ್ಲ.

ರಮೇಶ—ತಂದೆಯವರ ಹತ್ತಿರ ನೀನು ಹೇಳಿರಲಿಕ್ಕಿಲ್ಲ.

ರಮಾ—ಅವರ ಸ್ವಭಾವವು ನಿಮಗೆ ಗೊತ್ತಿದೆ. ರೂಪಾಯಿ ಕೊಡುವುದಿರಲಿ. ಬೈಗಳ ಸುರಿಮಳೆಯಾಗುತ್ತಿತ್ತು.

ರಮೇಶ—ಹಾಗಾದರೆ ಏನು ಗತಿ?

ರಮಾ—ಇವತ್ತು ಸಂಜೆಯೊಳಗೆ ಏನಾದರೂ ವ್ಯವಸ್ಥೆ ಮಾಡಿಯೇ ಮಾಡುತ್ತೇನೆ.

ರಮೇಶ ಬಾಬುಗಳು ಕಠೋರಭಾವವನ್ನು ಧರಿಸಿ ಹೇಳಿದರು—ಹಾಗಾದರೂ ಮಾಡಲ್ಲ ಬೇಗನೆ! ಇಷ್ಟು ಅಜಾಗ್ರತೆ ನಿನ್ನಿಂದ ಹೇಗಾಯಿತೆಂದೇ ನನಗೆ ತಿಳಿಯದಾಗಿದೆ. ಕಣ್ಣುಮುಚ್ಚಿ ಹೋಗುತ್ತಿದ್ದಿಯಾ ರಸ್ತೆಯ ಮೇಲೆ, ಅಥವಾ ಹೆಂಡಕುಡಿದಿದ್ದಿಯಾ? ನನಗೆ ನಿನ್ನ ಮಾತಿನ ಮೇಲೆ ನಂಬುಗೆಯಾಗುವದಿಲ್ಲ. ಸತ್ಯವಿದ್ದುದನ್ನೇ ಹೇಳು. ಸಿಕ್ಕಾಬಟ್ಟೆ ಖರ್ಚು ಮಾಡಿಲ್ಲವಷ್ಟೆ? ಆದಿನ ನೀನು ನನ್ನ ಹತ್ತಿರ ರೂಪಾಯಿಗಳನ್ನೇಕೆ ಕೇಳಿದೆ?

ರಮಾನಾಥನ ಮುಖವು ಕಳೆಗುಂದಿತು. ಗುಟ್ಟುರಟ್ಟಾದರೆ ಗತಿಏನು! ಹೇಳಿದನು—ನಾನು ಸರ್ಕಾರಿ ಹಣವನ್ನು ಖರ್ಚು ಮಾಡುವೆನೆ? ಆ ದಿವಸ ತಂದೆಯವರಿಗೋಸ್ಕರ ನಿಮ್ಮೊಡನೆ ಬೇಡಿದ್ದೆ. ನಿಮ್ಮ ಪತ್ರ ಅವರಿಗೆ ಓದಿ ಹೇಳಿದೆ. ಕೇಳಿ ಬಹಳ ನಕ್ಕರು ಬೇರೆ ವ್ಯವಸ್ಥೆ ಮಾಡಿಕೊಂಡರು. ಈ ನೋಟುಗಳು ಕಾಣೆಯಾದ ವಿಷಯ ನನಗೇ ಆಶ್ಚರ್ಯವೆನಿಸುತ್ತಿದೆ.

ರಮೇಶ—ನಿನಗೆ ತಂದೆಯನ್ನು ಕೇಳುವುದಕ್ಕೆ ನಾಚಿಕೆಯಾಗುವುದಾದರೆ ನಾನು ಪತ್ರಬರೆದು ತರಿಸಲೆ?

ರಮಾನಾಥನು ಕಿವಿಗಳ ಮೇಲೆ ಕೈಯಿಟ್ಟು ಹೇಳಿದನು—ಬೇಡ, ದೇವರಾಣೆಯಾಗಿ ಹಾಗೆ ಮಾಡಬೇಡಿ. ನಿಮಗೆ ಹಾಗೆ ಮಾಡಬೇಕೆಂದೇ ಇದ್ದ ಪಕ್ಷದಲ್ಲಿ ಮೊದಲು ನನ್ನ ಮೇಲೆ ಗುಂಡು ಹಾರಿಸಿ ಬಿಡಿರಿ.

ರಮೇಶ ಬಾಬುಗಳು ಕ್ಷಣಕಾಲ ಯೋಚಿಸಿ ಹೇಳಿದರು—ಸಂಜೆಯೊಳಗೆ ರೂಪಾಯಿಗಳು ಸಿಕ್ಕಾವೆಂದು ನಿನಗೆ ಭರವಸೆಯಿದೆಯೆ ?

ರಮಾ—ಹೌದು, ಭರವಸೆಯೇನೋ ಇದೆ.

ರಮೇಶ—ಇರಲಿ, ಈ ಚೀಲದ ರೂಪಾಯಿಗಳನ್ನು ಖಜಾಂಚಿಯವರ ವಶಕ್ಕೊಪ್ಪಿಸು. ಆದರೆ ನೋಡಪ್ಪ. ಸ್ಪಷ್ಟವಾಗಿ ಹೇಳುತ್ತೇನೆ. ನಾಳೆ ಹತ್ತು ಗಂಟೆಯೊಳಗೆ ರೂಪಾಯಿ ಬಾರದಿದ್ದರೆ ಮಾತ್ರ ನನ್ನನ್ನು ದೂರಬೇಡ. ಕಾನೂನು ಪ್ರಕಾರ ಈಗಲೇ ನಿನ್ನನ್ನು ಪೋಲೀಸಿನವರ ವಶ ಕೊಡಬೇಕಾಗಿತ್ತು; ಆದರೆ ನೀನಿನ್ನೂ ಹುಡುಗನೆಂದು ಭಾವಿಸಿ ಕ್ಷಮಿಸಿದ್ದೇನೆ. ಇಲ್ಲದಿದ್ದಲ್ಲಿ ಸರಕಾರೀ ವಿಷಯದಲ್ಲಿ ನಾನು ಪಕ್ಷಪಾತ ಮಾಡುವುದಿಲ್ಲವೆಂದು ನಿನಗೆ ಗೊತ್ತಿದೆ. ನಿನ್ನ ಸ್ಥಾನದಲ್ಲಿ ನಿನ್ನ ಬದಲು ನನ್ನ ತಮ್ಮನೋ, ಮಗನೋ ಇದ್ದಿದ್ದರೆ ಅವನೊಡನೆಯೂ ನಾನು ಹೀಗೆಯೇ ವರ್ತಿಸುತ್ತಿದ್ದೆ. ಏಕೆ, ಇದಕ್ಕಿಂತಲೂ ಕಟುವಾಗಿ ನಿನಗೆ ತುಂಬಾ ಸಲುಗೆ ಬಿಟ್ಟಿದ್ದೇನೆ. ನನ್ನ ಹತ್ತಿರ ರೂಪಾಯಿಗಳಿರುತ್ತಿದ್ದರೆ ಕೊಡುತ್ತಿದ್ದೆ. ನನ್ನ ಸ್ಥಿತಿ ನಿನಗೆ ಗೊತ್ತಿದೆ. ನಾಳೆ ರೂಪಾಯಿ ಬಾರದಿದ್ದರೆ ನನ್ನನ್ನು ದೂರಬೇಡ. ಪೋಲೀಸರ ಕೈಯಿಂದ ನಿನ್ನನ್ನು ಉಳಿಸಿಕೊಳ್ಳುವುದಕ್ಕೆ ನನ್ನ ಮೈತ್ರಿಗೂ ಸಾಧ್ಯವಿಲ್ಲ. ನನ್ನ ಗೆಳೆತನವಿಂದು ತನ್ನ ಋಣವನ್ನು ತೀರಿಸಿತು. ಇಲ್ಲವಾದರೆ ಇಷ್ಟರಲ್ಲಿ ನಿನ್ನ ಕೈಗೆ ಬೇಡಿ ಬೀಳುತ್ತಿತ್ತು.

ಬೇಡಿಗಳು !—ಈ ಶಬ್ದವು ಬಾಣದಂತೆ ರಮಾನಾಥನ ಹೃದಯದಲ್ಲಿ ನೆಟ್ಟಿತು. ಪಾದದಿಂದ ನೆತ್ತಿಯವರೆಗೆ ಅವನು ನಡುಗಹತ್ತಿದನು. ಆ ವಿಪತ್ತಿನ ಕಲ್ಪನೆಯಿಂದಲೇ ಅವನ ಕಣ್ಣುಗಳಲ್ಲಿ ನೀರು ಸುರಿಯಲಾರಂಭಿಸಿತು. ಅವನು ಮೆಲ್ಲಮೆಲ್ಲನೆ ತಲೆಯನ್ನು ತಗ್ಗಿಸಿಕೊಂಡು ಸಜೆಯನ್ನು ಹೊಂದಿದ ಕೈದಿಯಂತೆ ಹೋಗಿ ತನ್ನ ಕುರ್ಚಿಯ ಮೇಲೆ ಕುಳಿತನು. ಆದರೆ ಆ ಭಯಂಕರ ಶಬ್ದವು ಅವನ ಹೃದಯಾಂತರಾಳದಲ್ಲಿ ನಡು ನಡುವೆ ಪ್ರತಿಧ್ವನಿಸುತ್ತಿತ್ತು.

ಬಾನಿನಲ್ಲಿ ಕರಿ ಮೋಡಗಳು ಹಬ್ಬಿದ್ದುವು. ಎಲ್ಲಿಯೂ ನೇಸರು ಕಾಣಿಸನು. ಅವನೂ ಆ ಮೋಡವೆಂಬ ಸೆರೆಮನೆಯಲ್ಲಿ ಸಿಲುಕಿದ್ದನೆ ? ಅವನ ಕೈಯಲ್ಲಿಯೂ ಬೇಡಿಗಳಿವೆಯೆ.

## ೨೦

ರಮಾನಾಥನು ಸಾಯಂಕಾಲ ಆಫೀಸಿನಿಂದ ಹೊರಟಾಗ ರಮೇಶ ಬಾಬುಗಳು ಧಾವಿಸಿ ಬಂದು ನಾಳೆ ತಪ್ಪದೆ ಹಣವನ್ನು ತುಂಬಿಸಬೇಕೆಂದು ಅವನಿಗೆ ತಾಕೀತು ಮಾಡಿ ಹೋದರು. ಮನಸ್ಸಿನೊಳಗೆಯೆ ರಮಾನಾಥನು ಅವರ ಮೇಲೆ ಉರಿಬಿದ್ದನು. ಬಹಳ ಧರ್ಮವಂತರ ಚಾಲವಾಗಿದ್ದರೆ ಇವರೀಗ ಶುದ್ಧ ಢೋಂಗಿ ! ತನಗೆ ಬೇಕಿದ್ದರೆ ಯಾರ ಕಾಲು ತಿಕ್ಕುವುದಕ್ಕೂ ಹಿಂಜರಿಯದ ಇವರು ನನ್ನ ವಿಷಯಕ್ಕೆ ದೊಡ್ಡ ಆದರ್ಶವಾದಿಗಳ ಸೋಗನ್ನು ತಳೆದಿದ್ದಾರೆ. ಇದೆಲ್ಲಾ ಪ್ರದರ್ಶನದ ಹಲ್ಲುಗಳು; ಸಾಯುವ ಕಾಲಕ್ಕೆ ಇವರ ಪ್ರಾಣ ಶೀಘ್ರದಲ್ಲಿ ಹೋಗಲಿಕ್ಕಿಲ್ಲವೆಂಬುದು ಖಂಡಿತ !

ಸ್ವಲ್ಪ ದೂರ ನಡೆದು ರತನಳ ಬಳಿಗೆ ಹೋಗೋಣವೆಂದು ಯೋಚಿಸಿ ಅಲ್ಲಿಗೆ ಹೋದನು. ಅಲ್ಲಿ ಒಬ್ಬ ಗುಜರಾತೀ ರತ್ನ ವ್ಯಾಪಾರಿಯು ರತನಳೆದುರು ಕುಳಿತು ತನ್ನ ಒಡವೆಗಳನ್ನವಳಿಗೆ ತೋರಿಸುತ್ತಿದ್ದನು. ರತನಳಿಗೆ ಒಂದು ಹಾರದ ಮೇಲೆ ತುಂಬಾ ಮನಸ್ಸಾಗಿತ್ತು. ಜೌಹಾರಿಯು ಅದರ ಬೆಲೆ ಸಾವಿರದಿನ್ನೂರು ರೂಪಾಯಿಗಳೆಂದು ಹೇಳುತ್ತಿದ್ದನು.

ರಮಾನಾಥನು ಆ ಹಾರವನ್ನು ಹಿಡಿದು ನೋಡಿ ಹೇಳಿದನು—ಹೌದು, ಹಾರವೇನೋ ಚೆನ್ನಾಗಿದೆ.

ರತನ—ಆದರೆ ಬೆಲೆ ಮಾತ್ರ ಬಹಳವಾಯಿತು.

ವ್ಯಾಪಾರಿ—ಬಾಯಿಯವರೆ, ಇಂಥದ್ದನ್ನು ಯಾರಾದರೂ ೧೨೦೦ ಕ್ಕೆ ತಂದು ಕೊಡುವಪಕ್ಷಕ್ಕೆ ನಾನು ಏನು ದಂಡ ಕೊಡಬೇಕಾದರೂ ಸಿದ್ಧನಿದ್ದೇನೆ. ಸಾವಿರದಿನ್ನೂರೆಂದರೆ ನನ್ನ ಅಸಲು ಖರ್ಚು.

ರಮಾನಾಥನು ಮುಗುಳ್ನಗುತ್ತ ಹೇಳಿದನು— ಹಾಗೆನ್ನಬೇಡಿರಿ, ಸೇಠಜೀ, ನೀವು ದಂಡತೆರಬೇಕಾದೀತು.

ಚೌಹಾರಿಯು ಹೇಳಿದನು—ರಾಯರೆ, ಹಾರಕ್ಕೇನು ನೂರು ರೂಪಾಯಿಗೂ ಸಿಗಬಹುದು. ಇವಕ್ಕಿಂತ ಹೆಚ್ಚು ಥಳಕಿನದು ಸಿಕ್ಕೀತು. ಆದರೆ ಮಾಲು ನೋಡಿ. ಮತ್ತೆ ಹೇಳಬೇಕು ನಿಮ್ಮಂತಹರ ಹತ್ತಿರ ನಾನು ಚರ್ಚೆಗೆ ಇಳಿಯುವೆನೆ? ಚರ್ಚೆ ಎಲ್ಲ ಹಳ್ಳಿಯವರ ಹತ್ತಿರ.

ರತನಳಿಗೆ ಆ ಹಾರವನ್ನು ನೋಡಿದಷ್ಟಕ್ಕೆ ಸಾಕಾಗುತ್ತಿರಲಿಲ್ಲ. ಚೌಹಾರಿಯು ಹಾರವನ್ನು ಪೆಟ್ಟಿಗೆಯೊಳಗಿರಿಸುವುದನ್ನು ಕಂಡು ಹೇಳಿದಳು—ಅರೆ, ನೀವಂತೂ ಅದಕ್ಕೆ ದೃಷ್ಟಿತಾಗೀತೋ ಎಂಬ ಹಾಗೆ ಅದನ್ನು ಮರೆಮಾಡುತ್ತೀರಲ್ಲ?

ಚೌಹಾರಿ—ಏನು ಮಾಡಲಪ್ಪಾ! ಇಂತಹ ದರ್ಬಾರಿನಲ್ಲೂ ಒಡವೆಗಳ ಮನ್ನಣೆಯಾಗುವುದಿಲ್ಲವೆಂದ ಬಳಿಕ ದುಃಖವಾಗದಿರುವುದೆ?

ರತನಳು ಕೋಣೆಗೆ ಹೋಗಿ ರಮಾನಾಥನನ್ನು ಕರೆದು ಕೇಳಿದಳು—ಏನಾದರೂ ಕಡಮೆಗೆ ಇಳಿದಾರೋ?

ರಮಾ—ನನಗಂತೂ ಅದಕ್ಕೆ ಸಾವಿರಕ್ಕಿಂತ ಹೆಚ್ಚು ಬೇಡವೆಂದು ತೋರುವುದು.

ರತನ—ಛೇ, ಹಾಗೇನೂ ಇಲ್ಲ. ನನ್ನ ಹತ್ತಿರ ಈಗ ಆರ್ನೂರು ರೂಪಾಯಿಗಳಿವೆ. ಇವನು ಇದೇ ಗಾಡಿಯಲ್ಲಿ ಕಾಶಿಗೆ ಹೋಗುವವನಿದ್ದಾನೆ. ನೀವು ಒಂದು ನಾಲ್ನೂರು ರೂಪಾಯಿಗಳ ವ್ಯವಸ್ಥೆ ಮಾಡಿದರೆ ತೆಗೆದುಕೊಳ್ಳಬಹುದಿತ್ತು. ವಕೀಲ ಸಾಹೇಬರು ಯಾವುದೋ ಸಭೆಗೆ ಹೋಗಿದ್ದಾರೆ. ಒಂಬತ್ತು, ಹತ್ತರ ಮೊದಲು ಬರಲಾರರು.

ರಮಾನಾಥನು ಸಂಕೋಚಪಡುತ್ತ ಹೇಳಿದನು.—ನಾನು ಬರಿಗೈಯವನಾಗದ್ದೇನೆ. ನಾನು ನಿಮ್ಮನ್ನೆ ಕೇಳಬೇಕೆಂದು ಬಂದಿದ್ದೇನೆ ಭಾರಿ ಅಗತ್ಯಬಿದ್ದಿದೆ. ಆ ರೂಪಾಯಿಗಳನ್ನು ನನಗೆ ಕೊಡಿರಿ. ನಾನು ಇಲ್ಲಿಂದಲೇ ನಿಮಗೆ ಇಂತಹ ಹಾರವನ್ನು ತಂದುಕೊಟ್ಟರೆ ಸರಿಯಲ್ಲವೆ?

ರತನ—ಓಹೋಹೋ, ಆರು ತಿಂಗಳಲ್ಲಿ ಒಂದು ಜತೆ ಬಳೆಮಾಡಿಸಲಿಕ್ಕಾಗದವರು ಹಾರಮಾಡಿಸುವಿರಾ? ಇಲ್ಲ, ಇಲ್ಲ ನಾನು ನಿಮ್ಮ ಮಾತುಗಳಿಗೆ ಮರುಳಾಗುವವಳಲ್ಲ.

ರತನಳು ಹೊರಗೆ ಹೋಗಿ ತಾನು ಆರುನೂರು ರೂಪಾಯಿಗಳನ್ನು ಈಗಲೇ ಕೊಡುವುದಾಗಿಯೂ ಉಳಿದುದನ್ನು ಅವನಿಗೆ ಹಿಂದಿನಿಂದ ಕಳುಹಿಸುವುದಾಗಿಯೂ ಹೇಳಿದಳು. ಆದರೆ ಅವನೊಪ್ಪಲಿಲ್ಲ. ಅವನು ಹಾರವನ್ನು ಕೇಸಿನೊಳಗಿಟ್ಟು ಇನ್ನೊಂದು ಕ್ಷಣವೂ ಅಲ್ಲಿ ನಿಲ್ಲಲಾರದವನಂತೆ ಗಂಟು ಕಟ್ಟತೊಡಗಿದನು.

ರತನಳ ರೋಮರೋಮವೂ ಕಿವಿಯಾಗಿ ನಿಮಿರಿಕೊಂಡಿದ್ದಿತು— ಒಬ್ಬ ಕೈದಿಯು ತನ್ನ ಅದೃಷ್ಟದ ನಿರ್ಣಯವನ್ನು ಕೇಳುವಂತೆ, ಅವಳ ಹೃದಯದಿಂದ ಎಲ್ಲ ಮಮತೆಯೂ, ಮಮತೆಯ ಎಲ್ಲ ಅನುರಾಗವೂ, ಅನುರಾಗದ ಎಲ್ಲ ಅಧೀರತೆ, ಉತ್ಕಂಠತೆ ಮತ್ತು ಪ್ರಯತ್ನವೂ, ಆ ಹಾರದ ಮೇಲೆ ಕೇಂದ್ರಿತವಾಗಿದ್ದವು. ಅವಳ ಪ್ರಾಣವು ಆ ಹಾರದ ಪ್ರತಿಯೊಂದು ರತ್ನದಲ್ಲಿಯೂ ಹೋಗಿ ಸೇರಿಕೊಂಡಿದ್ದಿತೋ, ಅವಳ ಜನ್ಮಜನ್ಮಾಂತರದ ಸಂಚಿತ ಅಭಿಲಾಷೆಯು ಆ ಹಾರದ ಮೇಲೆ ಅವಲಂಬಿಸಿರುವುದೋ ಎಂಬಂತೆ ಅವಳು ಉದ್ವಿಗ್ನಳಾಗಿದ್ದಳು ಒಮ್ಮೆ ಆ ಕಪಾಟನ್ನು, ಒಮ್ಮೆ ಈ ಪೆಟ್ಟಿಗೆಯನ್ನು ತೆರೆಯುತ್ತ ರೂಪಾಯಿಗಾಗಿ ಹುಡುಕಾಡಿದಳು. ಆದರೆ ರೂಪಾಯಿ ಮಾತ್ರ ಎಲ್ಲೂ ಸಿಗಲಿಲ್ಲ

ಅಷ್ಟರಲ್ಲಿ ಮೋಟರಿನ ಶಬ್ದವು ಕೇಳಿಸಿತು. ಸಭೆಯಲ್ಲಿ 'ಕೋರಮ' ಇಲ್ಲದ್ದರಿಂದ ಸಭೆ ಜರುಗಲಿಲ್ಲ. ವಕೀಲರು ಬೇಗನೇ ಹೊರಟು ಬಂದಿದ್ದರು. ಜಾಹಾರಿಯನ್ನು ನೋಡಿ ರತನಳನ್ನು ಕೇಳಿದರು—ಏನು, ಏನಾದರೂ ತೆಗೆದುಕೊಳ್ಳುವ ಯೋಚನೆಯಿದೆಯೆ ?

ರತನ—ಹೌದು ಈ ಹಾರ ಬಹಳ ಚೆನ್ನಾಗಿದೆ.

ವಕೀಲರು—ಹಾಗಾದರೆ ತೆಗೆದುಕೊಳ್ಳುವುದೆ, ಮತ್ತೇನು ? ಆಗಾಗ ಹಾಕಿಕೊಳ್ಳಲಿಕ್ಕಾಗುತ್ತದೆ.

ವಕೀಲ ಮಹಾಶಯರು ರತನಳನ್ನು ತಂದೆಯಂತೆ ಪ್ರೀತಿಸುತ್ತಿದ್ದರು. ಒಬ್ಬ ಪ್ರೀತಿಯ ತಂದೆಯು ಜಾತ್ರೆಯ ಸಮಯ ತನ್ನ ಮಕ್ಕಳನ್ನು ಕೇಳಿ, ಕೇಳಿ, ಅವರಿಗೆ ಗೊಂಬೆ ತೆಗೆಸಿಕೊಡುವಂತೆ, ವಕೀಲರು ರತನಳನ್ನು ವಿಚಾರಿಸಿ ವಿಚಾರಿಸಿ, ಒಡವೆಗಳನ್ನು ಕೊಳ್ಳುತ್ತಿದ್ದರು. ಅವಳು ಹೇಳುವುದೊಂದೇ ತಡ. ಅವರ ಹತ್ತಿರ ಹಣವೊಂದಲ್ಲದೆ ಅವಳನ್ನು ಪ್ರಸನ್ನಗೊಳಿಸುವಂತಹ

ಬೇರಾವ ವಸ್ತುವಿದ್ದಿತು ? ಒಬ್ಬ ಉಪಾಸಕನಿಗೆ ಪ್ರತಿಮೆಯು ಆವಶ್ಯಕವಿರುವಂತೆ, ಅವರಿಗಾದರೂ ತಮ್ಮ ಬಾಳ್ವೆಯಲ್ಲೊಂದು ಆಧಾರಬೇಕಾಗಿತ್ತು. ತನ್ನೀ ಜೀರ್ಣಾವಸ್ಥೆಯಲ್ಲೂ ಜೀವನ ಸಂಗ್ರಾಮದಲ್ಲಿ ನೆಟ್ಟಗೆ ನಿಲ್ಲುವುದರ ಸಲುವಾಗಿ ಅವರಿಗೆ ಸದೇಹ ಆಧಾರವೊಂದು ಬೇಕಾಗಿದ್ದಿತು. ಪ್ರತಿಮೆಯಿಲ್ಲದಿದ್ದರೆ ಉಪಾಸಕನು ಯಾರಿಗೆ ಹೂ ಹಾಕಬಹುದು ? ಯಾರನ್ನು ಗಂಗಾಜಲದಿಂದ ಮಿಯಿಸಬಹುದು ? ಯಾರಿಗೆ ರುಚಿಕರವಾದ ಭೋಜನವನ್ನು ಮಾಡಿಸಬಹುದು ? ಇದರಂತೆಯೇ ವಕೀಲಸಾಹೇಬರಿಗೆ ಪತ್ನಿಯ ಆವಶ್ಯಕತೆಯಿತ್ತು.

ಅವರ ಆತ್ಮಿಕ ಪಿಪಾಸೆಯನ್ನು ಶಾಂತಗೊಳಿಸುವುದರ ಸಲುವಾಗಿ ಬಂದ ಸದೇಹ ಕಲ್ಪನೆಯಾಗಿದ್ದಳು ರತನ. ಪ್ರಾಯಶಃ ಅವಳಿಲ್ಲದಿದ್ದಲ್ಲಿ ಅವಗ ಜೀವನವು ಕಣ್ಣಿಲ್ಲದ ಮುಖದಂತೆ ಶೂನ್ಯವೆನಿಸುತ್ತಿತ್ತೊ ಏನೊ ?

ವಕೀಲರು 'ಚೆಕ್' ಪುಸ್ತಕವನ್ನು ತೆಗೆದು ಜೌಹಾರಿಯೊಡನೆ ಎಷ್ಟು ಬರೆಯಲೆಂದೂ ಕೇಳಿದರು. ಅವನು ಸಾವಿರದ ನೂರು ಎಂದು ಹೇಳಿದನು. ವಕೀಲರು ಅಷ್ಟಕ್ಕೆ ಬರೆದುಕೊಟ್ಟರು ಅವನು ನಮಸ್ಕರಿಸಿ ಅಲ್ಲಿಂದ ತೆರಳಿದನು

ರತನಳ ಮುಖವೀಗ ವಸಂತಕಾಲದ ಪ್ರಾಕೃತಿಕ ಶೋಭೆಯಂತೆ ವಿಕಸಿತವಾಯಿತು. ಅಂತಹ-ಗರ್ವ. ಅಂತಹ ಉಲ್ಲಾಸ ಅವಳ ಮುಖದಲ್ಲಿ ಹಿಂದೆಂದೂ ಮೂಡಿರಲಿಲ್ಲ. ಸಮಸ್ತ ಪ್ರಪಂಚದ ಐಶ್ವರ್ಯವೇ ದೊರೆತಷ್ಟು ಸಂತೋಷವಾಗಿತ್ತು !

ಹಾರವನ್ನು ಕುತ್ತಿಗೆಗೆ ಹಾಕಿಕೊಂಡು ಅವಳು ಒಳಗೆ ಹೋದಳು. ರಮಾನಾಥನು ಸ್ವಲ್ಪ ಹೊತ್ತು ವಕೀಲರ ಯುರೋಪು —ಗೌರವಗಾನವನ್ನು ಕೇಳುತ್ತಾ ಕೂತನು; ಕೊನೆಗೆ ನಿರಾಶನಾಗಿ ಅಲ್ಲಿಂದ ಹೊರಟನು.

## ೨೧

ಈಗ ಯಾರಿಗಾದರೂ ಪ್ರಪಂಚದಲ್ಲಿ ದುಃಖಿತನೂ ಜೀವನದಲ್ಲಿ ನಿರಾಶನಾದವನೂ, ಚಿಂತಾಗ್ನಿಯಲ್ಲಿ ಬೇಯುತ್ತಿರುವವನೂ ಆದ ಪ್ರಾಣಿಯ ಮೂರ್ತಿಯನ್ನು ನೋಡಬೇಕೆಂದಿದ್ದರೆ ಸಾಯಿಕಲಿನ ಮೇಲೆ ಕೂತು ಆಲ್ಫ್ರೆಡ್ ಪಾರ್ಕಿನ ಮುಂದುಗಡೆ ಹೋಗುತ್ತಿರುವ ಆ ಯುವಕನನು ನೋಡಬಹುದು.

ಈಗ ಅವನೆದುರು ಒಂದು ಕಾಳಸರ್ಪವು ದೃಷ್ಟಿಗೆ ಬಿದ್ದರೆ ಅದನ್ನು ಅವನು ಎರಡೂ ಕೈಗಳಿಂದ ಸ್ವಾಗತಿಸಿ, ಅದರ ವಿಷವನ್ನು ಅಮೃತವೆಂದು ಬಗೆದು ಕುಡಿಯುತ್ತಿದ್ದನು. ಈಗವನ ರಕ್ಷಣೆಯು ವಿಷದಿಂದಲ್ಲದೆ ಅಮೃತದಿಂದ ಆಗಲೊಲ್ಲದು. ಅವನ ಚಿಂತೆಗಳ ಅಂತ್ಯವನ್ನು ಮಾಡುವ ಸಾಮರ್ಥ್ಯವು ಇರುವುದು ಮರಣಕ್ಕೆ ಮಾತ್ರ; ಆದರೆ ಆ ಮರಣವಾದರೂ ಅವನನ್ನು ಅಪ ಕೀರ್ತಿ ಬರುವದರಿಂದ ತಪ್ಪಿಸೀತೆ? ಬೆಳಗಾಗುತ್ತಲೇ ಎಲ್ಲರ ಬಾಯಲ್ಲೂ ಇದೇ ಮಾತು. ಸರಕಾರಿ ರೂಪಾಯಿಗಳನ್ನು ನುಂಗಿ ಹಾಕಿದನು, ಅವರು ಹಿಡಿಯಲು ಬಂದಾಗ ಆತ್ಮಹತ್ಯೆ ಮಾಡಿಕೊಂಡನು. ಕುಲಕ್ಕೆ ಕಳಂಕ ಹಚ್ಚಿ, ಸತ್ತ ಮೇಲೂ ಜನರಿಂದ ಗೇಲಿ ಮಾಡಿಸಿಕೊಂಡು, ಚಿಂತಾಮುಕ್ತನಾದರೆ ಏನು ಉಪಯೋಗವಾದಂತಾಯಿತು? ಆದರೆ ಬೇರೆ ಉಪಾಯವಾದರೂ ಏನಿದೆ?

ಈಗಲಾದರೂ ಅವನು ಜಾಲಪಳ ಹತ್ತಿರ ತನ್ನ ಸ್ಥಿತಿಯನ್ನು ಹೇಳಿ ಕೊಂಡರೆ ಅವಳು ಖಂಡಿತವಾಗಿಯೂ ತನ್ನ ಅಭರಣವನ್ನು ತೆಗೆದುಕೊಡ ದಿರುತ್ತಿದ್ದಿಲ್ಲ. ಅದನ್ನು ಒತ್ತೆ ಇಟ್ಟು ಸರಕಾರೀ ಹಣವನ್ನು ಸಲ್ಲಿಸಬಹುದು. ಇದೊಂದೇ ದಾರಿಯಲ್ಲದೆ ಬೇರಾವುದೂ ಇಲ್ಲ.

ಮನಸ್ಸಿನೊಳಗೇ ಹೀಗೆ ನಿಶ್ಚಯ ಮಾಡಿಕೊಂಡು ರಮಾನಾಥನು ಮನೆಯ ದಾರಿ ಹಿಡಿದನು. ಆದರೆ ಅವನ ಮುಂಬರಿವಿನಲ್ಲಿ ಮಾನಸಿಕ ಸ್ಫೂರ್ತಿಯ ಲಕ್ಷಣವಾದ ಆ ತೀವ್ರತೆ ಇದ್ದಿಲ್ಲ

ಆದರೆ ಮನೆಗೆ ಹೋದ ಬಳಿಕ ಹೀಗೆ ಆಲೋಚಿಸಿದನು—ಹೀಗೆ ಮಾಡು ವುದಾದರೆ ಅವಸರವೇನು? ಬೇಕಾದಾಗ ಕೇಳಿಕೊಂಡರಾಯಿತು. ತುಸು ಹೊತ್ತು ಹರಟೆ ಹೊಡಯುತ್ತ ಇದ್ದು ಆಮೇಲೆ ಊಟಮಾಡಿ ಮಲಗಿ ಕೊಂಡನು. ಫಕ್ಕನೆ ಅವನ ಮನಸ್ಸಿನಲ್ಲಿ ಇನ್ನೊಮ್ಮೆ ಹಿಂದಿನಂತೆಯೇ ಒಡ ವೆಗಳನ್ನು ಹೇಳದಂತೆ ಹಾರಿಸಿದರೇನಾಗುವುದು ಎಂಬ ಯೋಚನೆ ಹರಿ ಯಿತು. ಎಲ್ಲಾದರೂ ಜಾಲಪಳಿಗೆ ಎಚ್ಚರವಾದರೆ ತನಗೆ ತ್ರಿವೇಣಿಯ ಹೊರತು ಇರಲಿಕ್ಕೆ ಬೇರೆ ಸ್ಥಳವೇ ಇರದಂತಾಗುವುದೇನೋ! ಹೌದು ಏನೋ ಆಗಲಿ, ಒಂದು ಸಲ ಪ್ರಯತ್ನ ಮಾಡಿ ನೋಡಿಯೇ ಬಿಡುವುದು. ಮೆಲ್ಲಗೆ

ಅವಳ ಕೈಯನ್ನು ತನ್ನೆದೆಯಿಂದ ಸರಿಸಿದನು. ಇನ್ನು ಅವಳ ರವಕೆಯ ಕಿಸೆಯಿಂದ ಬೀಗದ ಕೈಯನ್ನು ಹೊರತೆಗೆಯಬೇಕು. ತಡಮಾಡಲು ಎಡೆಯಿಲ್ಲ. ನಿದ್ರೆಯಲ್ಲೂ ನಿಮ್ಮ ಚೇತನವು ಕೆಲಸ ಮಾಡುತ್ತಿರುವುದು. ಮಗುವಿಗೆ ಎಷ್ಟೇ ಗಾಢನಿದ್ದೆ ಬಂದಿರಲಿ, ತಾಯಿ ಹತ್ತಿರದಿಂದ ಎದ್ದೊಡನೆ, ಎಚ್ಚರವಾಗುವುದು. ಆದರೆ ಅವನು ಬೀಗದ ಕೈಯನ್ನು ತೆಗೆಯಲು ಬಗ್ಗಿದಾಗ ಜಾಲಪಳು ಮುಗುಳ್ನಗುತ್ತಿದ್ದಂತೆ ಅವನಿಗೆ ಕಂಡಿತು. ಅವನು ಕೂಡಲೇ ಕೈಯನ್ನು ಹಿಂದೆಳೆದುಕೊಂಡು ದೀಪದ ಕ್ಷೀಣಪ್ರಕಾಶದಲ್ಲಿ ಆಕೆಯ ಮುಖದ ಕಡೆಗೆ ನೋಡಿದನು. ಆಕೆಯು ಯಾವುದೋ ಸುಖದಾಯಕವಾದ ಕನಸು ಕಾಣುತ್ತಿದ್ದಳು. ಹಾ! ಈಸರಳೆಗೆ ವಿಶ್ವಾಸಘಾತ ಮಾಡುವದೇ? ಯಾರಿಗಾಗಿ ನಾನು ನನ್ನ ಪ್ರಾಣವನ್ನೇ ಅರ್ಪಿಸಲು ಸಿದ್ಧನಾಗಬೇಕಿತ್ತೋ ಅವಳೊಡನೆಯೂ ಈ ವಂಚನೆಯೆ? ಜಾಲಪಳ ನಿಷ್ಕಪಟ, ಸ್ನೇಹ ಹೃದಯವು ಆಕೆಯ ಮುಖದಲ್ಲಿ ಅಚ್ಚೊತ್ತಿದಂತಿತ್ತು. ಅಯ್ಯೋ, ತನ್ನ ಆಭರಣಗಳು ಇನ್ನೊಮ್ಮೆ ಕಳವಾದುವೆಂದು ತಿಳಿದಾಗ ಆಕೆ ಎಷ್ಟು ದುಃಖಿಸಲಿಕ್ಕಿಲ್ಲ? ರಮಾನಾಥನು ಅವಳ ಆ ದುಃಖವನ್ನು ಯಾವ ಕಣ್ಣುಗಳಿಂದ ನೋಡಬಲ್ಲನು? ಅವನು ಹೀಗೆ ಎಣಿಸಿದನು—ನಾನಿವಳಿಗೆ ಕೊಟ್ಟ ಸುಖವಾದರೂ ಏನು? ಬೇರೆ ಯಾರೊಬ್ಬನ ಮನೆಯನ್ನಾದರೂ ಸೇರಿದ್ದರೆ, ಇದುವರೆಗೆ ಇವಳ ಮೈ ರತ್ನಗಳಿಂದ ಮುಚ್ಚಿ ಹೋಗಿರುತ್ತಿತ್ತು. ಇಲ್ಲಿ ಸುಖವಂತಿರಲಿ–ಬದಲು ಅಳುವುದೇ ಒಂದು ಕೆಲಸವಾದಂತಾಗಿದೆ.

ರಮಾನಾಥನು ಪುನಃ ಮಂಚದ ಮೇಲೆ ಮಲಗಿದನು. ಆಗಲೇ ಜಾಲಪಳಿಗೆ ಎಚ್ಚರವಾಯಿತು. ಅವಳು ಮುಖನೋಡಿ ಹೇಳಿದಳು—ನೀವೆಲ್ಲಿಗೆ ಹೋಗಿದ್ದಿರಿ? ನಾನೊಂದು ಒಳ್ಳೆಯ ಸ್ವಪ್ನ ಕಾಣುತ್ತಿದ್ದೆ. ದೊಡ್ಡದೊಂದು ತೋಟ, ನಾವಿಬ್ಬರೂ ಅದರಲ್ಲಿ ಅಡ್ಡಾಡುತ್ತಿದ್ದೇವೆ. ಅಷ್ಟರಲ್ಲಿ ನೀವೆಲ್ಲಿಗೋ ಹೋಗಿಬಿಟ್ಟಿರಿ. ಒಬ್ಬ ಸಾಧುವು ನನ್ನೆದುರು ಬಂದು ನಿಂತನು. ದೇವತೆಗಳಂತಹ ರೂಪ ಅವನದು. ಅವನು ನನಗೆ ಹೇಳಿದನು— 'ಮಗಳೇ, ನಾನು ನಿನಗೆ ವರಕೊಡಲು ಬಂದಿರುವೆನು. ಕೇಳು, ಏನು ಕೇಳುವೆ'—ನಾನು ನಿಮ್ಮನ್ನು ಅತ್ತಿತ್ತ ಹುಡುಕಾಡಿದೆ. ಎಲ್ಲಿಯೂ ನಿಮ್ಮ ಪತ್ತೆಯಿಲ್ಲ. ಇಡೀ ತೋಟವೆಲ್ಲಾ ಸುತ್ತಾಡಿ ಬಂದೆ, ಮರಗಳ ಮೇಲೂ ಕಣ್ಣು ಹಾಯಿಸಿದೆ.

ಆದರೆ ನೀವು ಎಲ್ಲಿಯೋ ಏನೋ? ಅಷ್ಟರಲ್ಲೆ ಎಚ್ಚರವಾಯಿತು. ವರದಾನ ಕೇಳಲಿಕ್ಕೆ ಆಗಲೇ ಇಲ್ಲ.

ರಮಾನಾಥನು ನಗುತ್ತ ಹೇಳಿದನು—ಏನು ವರದಾನ ಬೇಡುತ್ತಿದ್ದೆ?

'ನನ್ನ ಮನಸ್ಸಿಗೆ ಬಂದುದನ್ನು ಕೇಳುತ್ತಿದ್ದೆ. ಅದನ್ನು ನಿಮಗೆ ಹೇಳಬೇಕೆಂದಿದೆಯೆ?

'ಹಾಗಲ್ಲ. ಹೇಳು. ಪ್ರಾಯಶಃ ನೀನು ತುಂಬಾ ಧನಬೇಕೆಂದು ಕೇಳುತ್ತಿದ್ದೆ.'

'ಹಣವು ಬಹಳ ದೊಡ್ಡ ವಸ್ತುವೆಂದು ನೀವು ಬಗೆಯುತ್ತಿರಬಹುದು. ನಾನು ಹಾಗೆ ಎಣಿಸುವುದಿಲ್ಲ.'

'ಹೌದು ನನಗೇನೋ ಅದು ಬಹಳ ಉತ್ತಮವಾದುದೆಂದು ತೋರುತ್ತಿದೆ. ನಿರ್ಧನನಾಗಿರುವುದು ಸಾಯುವುದಕ್ಕಿಂತಲೂ ಕೀಳು. ನನಗೆ ಯಾರಾದರೂ ದೇವತೆಗಳು ಸಿಕ್ಕಿದರೆ ಅವರ ಹತ್ತಿರಬೇಕಷ್ಟು ರೂಪಾಯಿಗಳನ್ನು ಹೊರಡಿಸದೆ ಅವರನ್ನು ಹೋಗಗೊಡಲಿಕ್ಕಿಲ್ಲ ಮನೆಗೆ ಚಿನ್ನದ ಕಲಶವಿಡಬೇಕೆಂದೇನೋ ನನ್ನಿಚ್ಛೆಯಲ್ಲ; ಅಥವಾ ನನಗೆ ರಾಕ್‌ಫೆಲರ್, ಕಾರ್ನೇಗಿಗಳಾಗಬೇಕೆಂಬ ಬಯಕೆಯೂ ಇಲ್ಲ. ನಮಗೆ ಅವಶ್ಯಕವಾದ ವಸ್ತುಗಳಿಲ್ಲದೆ ಒದ್ದಾಡುವಂತಾಗಬಾರದು ಅದಕ್ಕೆ ಸಾಲುವಷ್ಟು ಹಣವಿದ್ದರೆ ಸಾಕು. ಮತ್ತೇನು ಐದು ಲಕ್ಷಕ್ಕಿಂತ ಹೆಚ್ಚೇನೂ ನಾನು ಬೇಡಲಿಕ್ಕಿಲ್ಲ. ನಮ್ಮ ಈ ದರಿದ್ರ ದೇಶದಲ್ಲಾದರೂ ನಿನಗೆ ಎಷ್ಟು ಮಂದಿ ಶ್ರೀಮಂತರು ಬೇಕು? ವರ್ಷಕ್ಕೆ ಐದು ಲಕ್ಷ ಖರ್ಚು ಮಾಡುವವರು, ಯಾಕೆ ತಿಂಗಳಿಗೆ ಐದು ಲಕ್ಷ ಚೆಲ್ಲುವರೂ ಇಲ್ಲವೆಂದಿಲ್ಲ. ನಾನಾದರೊ ಅಷ್ಟರಲ್ಲೆ ಏಳು ಜನ್ಮಗಳನ್ನು ಕಳೆಯಲು ಸಿದ್ಧನಾಗಿರುವೆನು ಆದರೆ ನನಗೆ ಮಾತ್ರ ಅಷ್ಟನ್ನು ಕೊಡುವವರು ಯಾರೂ ಇಲ್ಲ. ನೀನೇನು ಕೇಳುತ್ತಿದ್ದೆ? ಒಳ್ಳೊಳ್ಳೆಯ ಆಭರಣಗಳಲ್ಲವೆ?

ಜಾಲಪಳು ಹುಬ್ಬು ಗಂಟಿಕ್ಕಿ ಹೇಳಿದಳು—ನನ್ನನ್ನೇಕೆ ಕೆಣಕುತ್ತೀರಿ? ನಾನು ಬೇರೆ ಹೆಂಗುಸರಿಗಿಂತಲೂ ಹೆಚ್ಚಾಗಿ ಆಭರಣಗಳ ಮೇಲೆ ಪ್ರಾಣ ಬಿಡುತ್ತಿದ್ದೇನೆಯೆ? ನಾನು ಎಂದಾದರೂ ನಿಮ್ಮ ಹತ್ತಿರ ಹಟಮಾಡಿದ್ದೇನೆ?

ಈ ಕ್ಷಣ ನಿಮಗೆ ಅವಶ್ಯಬಿದ್ದರೆ ಕೊಂಡು ಹೋಗಿ, ನಾನು ಸಂತೋಷದಿಂದ ಕೊಡುತ್ತೇನೆ.

ರಮಾನಾಥನು ಮುಗುಳ್ನಗುತ್ತ ಹೇಳಿದನು— ಹಾಗಾದರೆ ಹೇಳಬಹುದಲ್ಲ ?

ಜಾಲಪ— ನನ್ನ ಸ್ವಾಮಿಯು ಸದಾ ಸರ್ವದಾ ನನ್ನಲ್ಲಿ ಪ್ರೇಮವಿಡುತ್ತಿರಲಿ, ಎಂದೆಂದಿಗೂ ನನ್ನಿಂದ ವಿಮುಖನಾಗದಿರಲಿ। ಎಂದು ಬೇಡಿದ್ದೆ.

ರಮಾನಾಥನು ನಕ್ಕು ಹೇಳಿದನು— ಏನು, ನಿನಗೆ ಈ ವಿಷಯದಲ್ಲಿ ಸಂಶಯವೇ ?

"ನೀವು ದೇವತೆಯಾಗಿದ್ದರೂ ನಾನು ಶಂಕಿಸುತ್ತಿದ್ದೆ ನೀವಂತೂ ಸಾಮಾನ್ಯ ಮನುಷ್ಯರಷ್ಟೆ ? ತನ್ನ ಗಂಡನ ನಿಷ್ಠುರತೆ, ಕಷ್ಟವನ್ನು ಹೇಳಿ ಅಳದ ಯಾವೊಬ್ಬ ಸ್ತ್ರೀಯೂ ಇದು ವರೆಗೆ ನನ್ನ ಕಣ್ಣಿಗೆ ಬಿದ್ದಿಲ್ಲ. ಒಂದೆರಡು ವರ್ಷ ಗಂಡಂದಿರು ಚೆನ್ನಾಗಿ ಪ್ರೀತಿಸುತ್ತಾರೆ ಆದರೆ ಆಮೇಲೆ ಏನಾಗುವುದೊ, ಅರಿಗೆ ? ಅವರಿಗೆ ತಮ್ಮ ಪ್ರೀತಿಯಲ್ಲಿ ಅರುಚಿ ಹುಟ್ಟುವುದು. ಮನಸ್ಸು ಚಂಚಲವಾಗುವುದು. ಸ್ತ್ರೀಗೆ ಇದಕ್ಕಿಂತ ಹೆಚ್ಚಿನ ವಿಪತ್ತೇನಿದೆ ? ಈ ವಿಪತ್ತಿಗೆ ನಾನು ಒಳಗಾಗಬಾರದೆಂದು ಪ್ರಾರ್ಥಿಸುವುದಲ್ಲದೆ ಬೇರೇನನ್ನು ಬೇಡಿಕೊಳ್ಳಲಿ ?"

ಹೀಗೆ ಹೇಳಿ ಜಾಲಪಳು ಪತಿಯ ಕಂಠದಲ್ಲಿ ತನ್ನ ಬಾಹುಗಳನ್ನು ಹಾಕಿ ಪ್ರಣಯಭರಿತ ನೇತ್ರಗಳಿಂದ ನೋಡುತ್ತ ಹೇಳಿದಳು— ನಿಜ ಹೇಳಿರಿ. ನೀವು ನನ್ನನ್ನು ಮೊದಲು ಪ್ರೀತಿಸುತ್ತಿದ್ದಂತೆ ಈಗಲೂ ಪ್ರೀತಿಸುತ್ತಿರುವಿರಾ ? ನೋಡಿ ಸತ್ಯ ಹೇಳಬೇಕು ಹೇಳಿರಿ.

ರಮಾನಾಥನು ಜಾಲಪಳನ್ನು ಆಲಿಂಗಿಸಿಕೊಂಡು ಹೇಳಿದನು— ಅದಕ್ಕಿಂತ ಎಷ್ಟೋ ಮಿಗಿಲು; ಸಾವಿರ ಪಾಲು ಮಿಗಿಲು

ಜಾಲಪಳು ನಕ್ಕು ಹೇಳಿದಳು— ಸುಳ್ಳು ಹದಿನಾರಾಣೆ ಸುಳ್ಳು

ರಮಾ— ಇದು ನಿನ್ನ ಅತ್ಯಾಚಾರ, ಮತ್ತೇನು ? ಅಲ್ಲ ನಿನಗೆ ಇದು ಗೊತ್ತಾದುದು ಹೇಗೆ ಹೇಳು ?

ಜಾಲಪ— ಕಣ್ಣಿಂದ ನೋಡುತ್ತೇನೆ. ಅಲ್ಲದೆ ಹೇಗೆ ಗೊತ್ತಾಗಬೇಕು? ನನ್ನ ಹತ್ತಿರ ಕೂಡುಕೊಳ್ಳುವುದಿಲ್ಲವೆಂದು ನೀವು ಆಣೆಯಿಟ್ಟುಕೊಂಡಂತೆ

ಕಾಣುವುದು. ಯಾವಾಗ ನೋಡಿದರೂ ನಿಮ್ಮ ಪತ್ತೆ ಇಲ್ಲ. ನನ್ನಲ್ಲಿ ಪ್ರೇಮ ವಿರುತ್ತಿದ್ದ ಪಕ್ಷದಲ್ಲಿ ವಿಶ್ವಾಸವೂ ಇರುತ್ತಿತ್ತು. ವಿಶ್ವಾಸವಿಲ್ಲದೆ ಪ್ರೇಮ ಹೇಗಿದ್ದೀತು? ಯಾರೊಡನೆ ನೀವು ನಿಮ್ಮ ಹೃದಯದ ಮಾತುಗಳನ್ನು ಹೇಳುವುದಿಲ್ಲವೋ ಅವಳನ್ನು ನೀವು ಪ್ರೀತಿಸಲಾರಿರಿ. ಹೌಂ, ಅವಳೊಡನೆ ವಿಹಾರಕ್ಕೆ ಹೋಗಬಹುದು. ವಿಲಾಸ ಮಾಡಬಹುದು ವೇಶ್ಯೆಯರ ಹತ್ತಿರ ಹೋಗುವುದಿಲ್ಲವೆ ಹಾಗೆ! ವೇಶ್ಯೆಯರ ಹತ್ತಿರ ಜನರು ಹೋಗುವುದು ಆನಂದಿ ಸುವುದಕ್ಕಲ್ಲದೆ, ತಮ್ಮ ಮನಸ್ಸಿನ ವಿಷಯಗಳನ್ನು ಹೇಳಿಕೊಳ್ಳುವುದಕ್ಕಲ್ಲ. ನನ್ನ ಸ್ಥಿತಿಯೂ ಹಾಗೆಯೆ. ಹೇಳಿ, ಹಾಗೆ ಹೌದೆ, ಅಲ್ಲವೆ? ಹೊರಗಿನಿಂದ ಬರುತ್ತಿರುವಾಗ ನೀವು ಗಾಬರಿಗೊಂಡಿರುವುದನ್ನು ನಾನು ಕಂಡಿಲ್ಲವೆಂದು ಮಾಡಿದಿರಾ? ಮಾತಾಡುವ ಸಮಯ ನೋಡುತ್ತಿದ್ದೇನೆ. ನಿಮ್ಮ ಮನಸ್ಸು ಬೇರೆಲ್ಲಿಯೋ ಹೋಗಿರುತ್ತದೆ. ಊಟದ ವಿಷಯ ಹೇಳುವುದಾದರೆ, ನಿಮಗೆ ದರಲ್ಲಿ ಸಂತೋಷವೇ ಇಲ್ಲ. ಬೇಳೆ ಹೆಚ್ಚೋ, ಕಡಮೆಯೋ; ಹುಳಿ, ಮೆಣಸು ಹೆಚ್ಚಾಗಿದೆಯೋ, ಕಡಮೆಯಾಗಿದೆಯೋ, ಅನ್ನ ಬೆಂದಿದೆಯೆ, ಇಲ್ಲ ಅಗುಳಾ ಗಿದೆಯೆ, ಎಂಬುದನ್ನು ನೀವು ಎಂದಾದರೂ ವಿಚಾರಿಸುತ್ತೀರಾ? ಬಿಟ್ಟೇ ಕೆಲ ಸದ ಆಳಿನಂತೆ ಊಟಮಾಡಿ ಬೇಗನೆ ಓಟ ಕೀಳುತ್ತೀರಿ. ನನಗೆ ಇದೆಲ್ಲ ವನ್ನೂ ನೋಡಲು ಕಣ್ಣಿಲ್ಲವೆ? ಅಥವಾ ನಾನು ನೋಡಬಾರದೆ? ನಾನು ವಿಲಾಸಿನಿ ಇರುವೆನೆಂಬ ಒಂದು ರೂಪದಲ್ಲಿ ಮಾತ್ರ ನೀವು ನನ್ನನ್ನು ನೋಡು ತ್ತಿದ್ದೀರಿ. ವಿಹಾರ ಮಾಡುವುದು, ವಿಲಾಸಕ್ಕನುವಾಗುವುದು, ಆನಂದಿಸು ವುದು, ಇಷ್ಟೆ ನನ್ನ ಕೆಲಸ. ನಿಮ್ಮ ಚಿಂತೆಗಳನ್ನು ನಾನೇಕೆ ತಲೆಗೆ ಹಚ್ಚಿಕೊ ಳ್ಳಬೇಕು? ಆದರೆ ದೇವರು ನನಗೆ ಅಂತಹ ಹೃದಯವನ್ನು ದಯಪಾಲಿಸ ಲಿಲ್ಲ. ಏನು ಮಾಡಲಿ! ನಿಮ್ಮ ಮನೋರಂಜನೆಯ ವಸ್ತುವಾಗಿಯೇ ನನ್ನ ಬಾಳ್ವೆ ಕ್ಷಯಿಸಬೇಕೆಂದಿರುವುದಾದರೆ ನಾನೇಕೆ ನನ್ನ ಜೀವವನ್ನು ವಿಪತ್ತಿಗೆ ಸಿಲುಕಿಸಲಿ?

ಜಾಲಪಳು ರಮಾನಾಥನೊಂದಿಗೆ ಹಿಂದೆಂದೂ ಮನಸ್ಸು ತೆರೆದು ಮಾತಾಡಿರಲಿಲ್ಲ. ಅವಳು ಇಷ್ಟು ವಿಚಾರಶೀಲಳಿರುವಳೆಂದು ಆತನು ಅನು ಮಾನಿಸಿಯೂ ಇರಲಿಲ್ಲ. ಅವನು ನಿಜಕ್ಕು ಅವಳನ್ನು ರಮಣಿಯೆಂದೇ ತಿಳಿ ಯುತ್ತಿದ್ದನು. ಬೇರೆಲ್ಲಾ ಗಂಡಸರಂತೆ ಅವನಾದರೂ ತನ್ನ ಪತ್ನಿಯನ್ನು

ಇದೊಂದು ರೂಪದಲ್ಲಿಯೆ ನೋಡುತ್ತಿದ್ದನು. ಅವನು ಅವಳ ಯೌವನಕ್ಕೆ ಮುಗ್ಧನಾಗಿದ್ದನು. ಅವಳ ಆತ್ಮಸ್ವರೂಪವನ್ನರಿವ ಯತ್ನವನ್ನು ಅವನೆಂದೂ ಮಾಡಿರಲಿಲ್ಲ. ಅವಳಿಗೆ ಆತ್ಮವಿಲ್ಲವೆಂದೇ ಅವನೆಣಿಸಿದ್ದನೋ ಏನೋ ಅವಳು ರೂಪಲಾವಣ್ಯಗಳ ರಾಶಿಯಲ್ಲದಿರುತ್ತಿದ್ದರೆ ಅವನು ಅವಳನ್ನು ಮಾತಾಡಿಸುವುದಕ್ಕೂ ಇಷ್ಟಪಡುತ್ತಿದ್ದನೋ ಇಲ್ಲವೊ ಅದೂ ಸಂಶಯ. ಎಲ್ಲ ಆಕರ್ಷಣೆಯೂ, ಎಲ್ಲ ಆಸಕ್ತಿಯೂ ಅವಳ ರೂಪದ ಮೇಲೆ. ಜಾಲ ಪಳಿಗೆ ಅಷ್ಟರಲ್ಲೆ ತೃಪ್ತಿಯಾಗುವುದೆಂದವನು ಬಗೆದಿದ್ದನು. ತನ್ನ ಚಿಂತೆಗಳ ಹೊರೆಯಿಂದ ಆಕೆಯನ್ನು ಬನ್ನಬಡಿಸಲು ಆತನ ಮನಸ್ಸು ಕೇಳುತ್ತಿದ್ದಿಲ್ಲ. ಆದರೆ ಇಂದವನಿಗೆ ತನ್ನಂತೆಯೆ, ತನ್ನಷ್ಟೇ ಚಿಂತನ ಶೀಲೆಯೆಂಬುದು ಸ್ಪಷ್ಟ ವಾಯಿತು. ತನ್ನ ಮನೋವ್ಯಥೆಯನ್ನು ಪ್ರಕಟಿಸಲು ಸುಸಂದರ್ಭವೊಂದು ತಾನಾಗಿಯೆ ಒದಗಿದ್ದಿತು. ಆದರೆ ಹಾಯ್ ಸಂಕೋಚವೆ! ಅವನ ಬಾಯಿ ಯನ್ನು ಅದು ಗಟ್ಟಿಯಾಗಿ ಕಟ್ಟಿಬಿಟ್ಟಿತು ಇಷ್ಟು ದಿನ ಅಡಗಿಸಿಟ್ಟುಕೊಂಡ ಸಂಗತಿಯನ್ನು ಇವೊತ್ತು ಹೇಳುವುದು ಹೇಗೆ?

ಇವೇ ವಿಚಾರಗಳಲ್ಲಿ ಮಗ್ನನಾದ ರಮಾನಾಥನಿಗೆ ಬಹಳ ಹೊತ್ತಿನ ಮೇಲೆ ನಿದ್ದೆ ಹತ್ತಿತು. ಬಹಳ ಮುಂಜಾನೆ ಏಳುವೆನೆಂದು ನಿಶ್ಚಯಗೈದೇ ಅವನು ಮಲಗಿದ್ದನು; ಆದರೆ ಕೋಣೆಯೊಳಗೆ ಸೂರ್ಯನ ಕಿರಣಗಳು ಬಂದ ಮೇಲೆಯೇ ಅವನಿಗೆ ಎಚ್ಚರವಾದುದು. ಬೇಗಬೇಗನೆ ಎದ್ದು ಕೈಕಾಲು ತೊಳೆಯದೆಯೆ, ರಮೇಶ ಬಾಬುಗಳಲ್ಲಿಗೆ ಹೊರಟನು. ತನ್ನ ಎಲ್ಲ ಪುರಾಣ ವನ್ನು ಅವರ ಹತ್ತಿರ ಬಿಚ್ಚಿದರೆ ಆವರು ಏನಾದರೂ ಸಹಾಯ ಮಾಡಿಯಾ ರೆಂಬ ಭರವಸೆಯಿಂದ ಹೊರಬಿದ್ದನು.

ಆಗ ಜಾಲಪಳು ಊಟ ತಯಾರಿಸುವುದರಲ್ಲಿದ್ದಳು. ರಮಾನಾಥನು ಹೀಗೆ ಹೋಗುತ್ತಿರುವುದನ್ನು ನೋಡಿ ಅವಳು ಪ್ರಶ್ನೆಸೂಚಕ ನೇತ್ರಗ ಳಿಂದ ಅವನನ್ನು ನೋಡಿದಳು. ರಮಾನಾಥನ ಮುಖದಲ್ಲಿ ಚಿಂತೆ, ಭಯ, ಚಂಚಲತೆ, ಹಿಂಸೆಗಳು ಮನೆಮಾಡಿದ್ದುವು. ಒಂದು ಕ್ಷಣ ಅವಳಿಗೆ ವೈವ್ಯ ರಿತು ಹೋಯಿತು. ಒಂದು ಕೈಯಲ್ಲಿ ಚೂರಿ, ಇನ್ನೊಂದರಲ್ಲಿ ಸೌತೆಕಾಯಿ ಹಿಡಿದುಕೊಂಡು ಬಾಗಿಲಿನತ್ತ ನೋಡುತ್ತಾ ಇದ್ದು ಬಿಟ್ಟಳು. ಇವರ ಕತೆ ಏನು? ನನ್ನ ಹತ್ತಿರ ಹೇಳುವುದಕ್ಕೆ ಏಕಿಷ್ಟು ಸಂಕೋಚವೊ? ಅವಳಿಗೆ

ಏನು ಮಾಡಲು ಸಾಧ್ಯವಿಲ್ಲದಿದ್ದರೂ ಸಹಾನುಭೂತಿಯನ್ನಾದರೂ ತೋರಿಸ ಲಾರಳೆ? ಅವಳು ವಿಷಯವೇನೆಂದು ಕೇಳಿಯೇ ಬಿಡುವೆನೆಂದು ನಿರ್ಧರಿಸಿ ದಳು. ಆದರೆ ಅಷ್ಟರಲ್ಲಿ ರಮಾನಾಥನು ರಸ್ತೆಯನ್ನು ಸೇರಿಯಾಗಿತ್ತು. ಹುಚ್ಚ ನಂತೆ ಅವನು ಮುಂದುವರಿಯುತ್ತಿದ್ದನು. ಎಡಕ್ಕೂ ನೋಡುತ್ತಿದ್ದಿಲ್ಲ; ಬಲಕ್ಕೂ ನೋಡುತ್ತಿದ್ದಿಲ್ಲ. ತಲೆತಗ್ಗಿಸಿಕೊಂಡು, ತನ್ನ ಎದುರು ಬಂದವರಿ ಗೆಲ್ಲಾ ಢಿಕ್ಕಿ ಹೊಡೆಯುತ್ತಾ, ಸೈಕಲು ಗಾಡಿಗಳನ್ನು ಲೆಕ್ಕಿಸದೆಯೆ, ಓಡಿ ಹೋಗುತ್ತಿದ್ದನು. ಕೊನೆಗೆ ಅವಳು ಹಿಂದೆ ಬಂದು ತರಕಾರಿ ಹೆಚ್ಚತೊಡಗಿ ದಳು. ಆದರೆ ಮನಸೆಲ್ಲಾ ಅತ್ತ ಕಡೆಯೇ ಇತ್ತು. ಇವರೇಕೆ ನನ್ನಲ್ಲಿ ಮುಚ್ಚು ಮರೆ ಮಾಡುತ್ತಿದ್ದಾರೆ?

ರಮಾನಾಥನು ರಮೇಶಬಾಬುಗಳಲ್ಲಿಗೆ ತಲುಪಿದಾಗ ಅವರು ಸಂಧ್ಯಾ ವಂದನೆ ಮಾಡುತ್ತಿದ್ದರು. ಅರ್ಧ ತಾಸಿನಲ್ಲಿ ಅದು ಮುಗಿಯಿತು. ರಮಾ ನಾಥನು 'ರೂಪಾಯಿಗಳ ಏರ್ಪಾಟು ಮಾಡಲಿಕ್ಕಾಗಲಿಲ್ಲ. ಏನು ಮಾಡು ವುದು?' ಎಂದನು. ಅವರು ಇವನು ತಂದೆಯ ಹತ್ತಿರ ಕೇಳುವುದಕ್ಕೆ ಜನ ರಲ್ಲಿ ಸಂಕೋಚಪಟ್ಟುಕೊಂಡಿರುವ ಇವನ ಸ್ವಭಾವಕ್ಕೆ ಚೆನ್ನಾಗಿ ಕೆಲವು ಬೈಗಳನ್ನು ಕೇಳಿಸಿದರೆ ವಿನಾ ಸಹಾಯ ಮಾಡುವ ಮಾತನ್ನೆತ್ತಲಿಲ್ಲ.

ರಮಾನಾಥನಿಗೆ ಇಷ್ಟನ್ನು ಕೇಳಿದ ಮೇಲೆ ಮತ್ತೆ ಅಲ್ಲಿ ನಿಲ್ಲುವ ಸಾಹ ಸವಾಗಲಿಲ್ಲ. ಅಲ್ಲಿಂದೆದ್ದು ಹೊರಗೆ ಬಂದನು. ಹತ್ತು ಹೆಜ್ಜೆ ಅವಸರವಸರ ದಿಂದ ನಡೆಯುವನು, ಅಲ್ಲಿಯೇ ಏನೋ ಯೋಚಿಸಿ ನಿಲ್ಲುವನು; ಪುನಃ ಹತ್ತು ಹೆಜ್ಜೆ ನಡೆಯುವನು. ಒಮ್ಮೆ ಆ ಗಲ್ಲಿಯನ್ನು ಹೊಕ್ಕರೆ ಮತ್ತೊಮ್ಮೆ ಈ ಗಲ್ಲಿ ಯನ್ನು ಹೊಗುವನು.

ಥಕ್ಕನೆ ಅವನಿಗೊಂದು ಯೋಚನೆ ಹೊಳೆಯಿತು. ಜಾಲಪಳಿಗೆ ಒಂದು ಪತ್ರಬರೆದು ಎಲ್ಲಾ ಸಂಗತಿಗಳನ್ನು ತಿಳಿಸಿಬಿಟ್ಟರೆ? ಬಾಯಿಯಿಂದ ಹೇಳು ವುದು ಕಷ್ಟ; ಲೇಖನಿಯಿಂದ ಬರೆಯುವುದು ಅಷ್ಟೊಂದು ಕಷ್ಟವಲ್ಲವಷ್ಟೆ. ಸರಿ. ಹಾಗೆಯೇ ನಿರ್ಧರಿಸಿ ಓಡುತ್ತೋಡುತ್ತ ಮನೆಗೆ ಬಂದನು. ಶೀಘ್ರದಲ್ಲಿ ಪತ್ರವನ್ನು ಬರೆದು ಮುಗಿಸಿದನು—ಪ್ರಿಯೇ, ಏನು ಹೇಳಲಿ? ದೊಡ್ಡದೊಂದು ವಿಪತ್ತಿನಲ್ಲಿ ಸಿಲುಕುತ್ತಿದ್ದೇನೆ. ಒಂದು ತಾಸಿನೊಳಗೆ ಮುನ್ನೂರು ರೂಪಾ ಯಿಗಳ ಏರ್ಪಾಡಾಗದಿದ್ದರೆ ಕೈಗಳಿಗೆ ಬೇಡಿ ಬೀಳುತ್ತವೆ. ಎಷ್ಟು ಪ್ರಯತ್ನ

ಮಾಡಿದರೂ ಯಾರೂ ನನಗೆ ಕಡ ಕೊಡಲಿಲ್ಲ. ಆದುದರಿಂದ ನಿನ್ನ ಒಂದೆ ರಡು ಆಭರಣಗಳನ್ನು ಒತ್ತೆಯಿಟ್ಟಾದರೂ ಕೆಲಸ ಆಗಬೇಕಾಗಿದೆ. ದೇವ ರಾಣೆ, ರುಷ್ಟಳಾಗಬೇಡ. ಅವನ್ನು ಬಲು ಬೇಗನೆ ಬಿಡಿಸಿಕೊಡುತ್ತೇನೆ.

ಈ ಪತ್ರವು ಸಮಾಪ್ತವಾಗಿತ್ತಷ್ಟೆ—ರಮೇಶಬಾಬುಗಳು ಬಂಧು ಮತ್ತೊಮ್ಮೆ ಅವನನ್ನು ಎಚ್ಚರಿಸಿ ಹೊರಟು ಹೋದರು.

ಅವರು ಹೋದಮೇಲೆ ರಮಾನಾಥನು ಪತ್ರವನ್ನು ಕಿಸೆಯಲ್ಲಿ ಹಾಕಿ ಕೊಂಡು ಒಳಗೆ ಹೋದನು. ಅಲ್ಲಿ ಜಾಲಪಳು ಯಾರೋ ಮಹಿಳೆಯೊಬ್ಬಳ ಮನೆಗೆ ಹೋಗಲು ಸಿದ್ಧಳಾಗಿದ್ದಳು. ಅವಳು ತನ್ನ ಅತ್ಯಂತ ಸುಂದರವಾದ ಸೀರೆಯನ್ನುಟ್ಟಿದ್ದಳು. ಕೈಗಳಲ್ಲಿ ರತ್ನ ಖಚಿತ ಬಳೆಗಳು ಶೋಭಿಸುತ್ತಿದ್ದವು. ಕುತ್ತಿಗೆಯಲ್ಲಿ ಚಂದ್ರಹಾರವಿತ್ತು. ಕನ್ನಡಿಯೆದುರು ಕೂತು ಲೋಲಕುಗ ಳನ್ನು ತೊಡುತ್ತಿದ್ದಳು. ರಮಾನಾಥನನ್ನು ನೋಡಿ ಕೇಳಿದಳು—ಇದೇನು, ಇವತ್ತು ಮುಖ ತೊಳೆಯದೆಯೆ ಹೊರಟಿತ್ತು ಸವಾರಿ ಹೊರಗೆ? ದಿನವಿಡೀ ಹೊರಗಿರುತ್ತೀರಿ. ಬೆಳಗ್ಗೆ-ಸಂಜೆಯಾದರೂ ಮನೆಯಲ್ಲಿರಬಾರದೆ? ನೀವಿ ಲ್ಲದೆ ಮನೆ ಭಣ ಭಣ ಅನ್ನುತ್ತಿರುತ್ತದೆ ತವರು ಮನೆಗೆ ಹೋಗಬೇಕಾಗಿ ಬಂದರೆ ನನಗೆ ಬಹಳ ಕಷ್ಟವಾದೀತೆಂದೇ ನಾನಿದೀಗ ಯೋಚಿಸುತ್ತಿದ್ದೆ.

ರಮಾ—ಎಲ್ಲಿಗೋ ಹೊರಟಿರುವ ಹಾಗೆ ತೋರುತ್ತದೆ.

ಜಾಲಪ—ಹೌದು, ಮಧ್ಯಾಹ್ನವಾಗುವುದರೊಳಗೆ ಬರುತ್ತೇನೆ.

ಬೇಟೆಗಾರನು ಹೆಣ್ಣುಜಿಂಕೆಯು ತನ್ನ ಮಕ್ಕಳೊಡನೆ ಆಡುತ್ತಿರುವು ದನ್ನು ಕಂಡು, ಗುರಿಹಿಡಿದ ಕೋವಿಯನ್ನು ಹೆಗಲಮೇಲೆ ಇಟ್ಟುಕೊಂಡು ಆ ವಾತ್ಸಲ್ಯ ಮತ್ತು ಪ್ರೇಮಪೂರ್ಣ ಆಟವನ್ನು ನೋಡುವುದರಲ್ಲಿ ತಲ್ಲೀನನಾ ಗುವಂತೆ ಆಗಿತ್ತು, ರಮಾನಾಥನ ಆಗಿನ ಸ್ಥಿತಿ.

ಅವನು ತನ್ನನ್ನೇ ನೆಟ್ಟನೋಟದಿಂದ ನೋಡುವುದನ್ನು ಕಂಡು, ಜಾಲ ಪಳು ನಸುನಗುತ್ತ ಹೇಳಿದಳು—ಬೇಡ, ನನಗೆ ದೃಷ್ಟಿಯಾದೀತು. ಹಾಗೆ ನೋಡಬೇಡಿ. ನಿಮ್ಮ ಕಣ್ಣುಗಳೆಂದರೆ ನನಗೆ ಬಹಳ ಹೆದರಿಕೆ.

ರಮಾನಾಥನು ಒಂದೇ ಹಾರಿಕೆಗೆ ವಾಸ್ತವಿಕ ಲೋಕದಿಂದ ಕವಿತ್ವದ ಜಗತ್ತನ್ನು ತಲಪಿದನು. ಜಾಲಪಳ ರೋಮರೋಮವು ಆನಂದದಿಂದ

ಕುಣಿಯುತ್ತಿದ್ದ ಈ ಸಂದರ್ಭದಲ್ಲಿ ಅವನು ತನ್ನ ಪತ್ರವನ್ನು ಆಕೆಯ ಕೈಗಿತ್ತು, ಅವಳ ಸುಖದ ಕಲ್ಪನೆಗಳನ್ನು ಮಣ್ಣುಗೂಡಿಸುವುದೆ ? ಇನಿದನಿಯಲ್ಲಿ ಹಾಡುತ್ತಿರುವ ಹಕ್ಕಿಯ ಕತ್ತನ್ನು ಕೊಯ್ಯುವ ಕಠಿಣ ಹೃದಯದ ವ್ಯಾಧನಾವನು ? ಪ್ರಭಾತ ಕುಸುಮವೊಂದನ್ನು ಕೊಯ್ದು ಕಾಲಡಿಯಲ್ಲಿ ಹಾಕಿ ಮೆಟ್ಟುವಷ್ಟು ಅರಸಿಕನಾದ ಮನುಷ್ಯನಾವನು ? ರಮಾನಾಥನು ಅಷ್ಟು ಹೃದಯಹೀನನೂ ಆಗಿದ್ದಿಲ್ಲ; ಅರಸಿಕನೂ ಅಲ್ಲ. ಅವನು ಅಷ್ಟು ನಿಷ್ಠುರನಾಗಲಾರನು. ಅವನು ಅನುರಕ್ತನಾಗಿ ಹೇಳಿದನು—ದೃಷ್ಟಿ ಹಾಕುವುದಿಲ್ಲ. ಆದರೆ ಹೃದಯಕ್ಕೆ ಅಪ್ಪಿಕೊಳ್ಳುವೆನು

ಈ ಒಂದು ವಾಕ್ಯದಲ್ಲಿ ಅವನ ಎಲ್ಲ ಚಿಂತೆಗಳೂ, ಎಲ್ಲಾ ಬಾಧೆಗಳೂ ಕಣ್ಮರೆಯಾದುವು. ಸ್ನೇಹ ಸಂಕೋಚದ ವೇದಿಯ ಮೇಲೆ ಅವನು ತನ್ನನ್ನು ಸಮರ್ಪಿಸಿಕೊಂಡನು. ಈ ಸಂಭ್ರಮದ ಎದುರು ಜೀವನದ ಎಲ್ಲ ಕ್ಲೇಶಗಳೂ ತುಚ್ಛವೆಂದು ಕಂಡುವು.

ಜಾಲಪಳು ಕೆಳಗೆ ಹೊರಟಾಗ ರಮಾನಾಥನು ಕಾತರನಾಗಿ ಅವಳನ್ನು ಆಲಂಗಿಸಿದನು. ಇನ್ನು ಮುಂದೆ ತನಗಂತಹ ಸೌಭಾಗ್ಯವು ದೊರೆಯದೇನೊ, ಎಂಬಂತೆ ಅವನವಳನ್ನು ಮತ್ತೆ ಮತ್ತೆ ಅಪ್ಪಿಕೊಳ್ಳುತ್ತಿದ್ದನು. ಇದೇ ಅವನ ಕೊನೆಯ ಆಲಿಂಗನವೊ ಏನೊ, ಯಾರಿಗೆ ಗೊತ್ತು ? ಅವನ ಕರಗಳು ರೇಶಿಮೆಯ ದಾರಗಳೆಂಬಂತೆ ಜಾಲಪಳಿಗೆ ಹತ್ತಿಕ್ಕಿಕೊಂಡಿದ್ದುವು. ಮರಣಾಸನ್ನನಾದ ಕೃಪಣನೊಬ್ಬನು ತನ್ನ ಭಾಂಡಾರದ ಕೀಲಿಕೈಯನ್ನು ಮುಷ್ಟಿಯಲ್ಲಿ ಮುಚ್ಚಿಕೊಂಡಿದ್ದನು; ನಿಮಿಷ ನಿಮಿಷಕ್ಕೂ ಅವನ ಹಿಡಿತವು ಕಠೋರವಾಗುತ್ತಿತ್ತು. ಅದನ್ನು ಬಲಾತ್ಕಾರದಿಂದ ಬಿಡಿಸುವುದೇ ಅವನ ಪ್ರಾಣ ಹೊರಟುಹೋಗುವುದಕ್ಕೆ ಕಾರಣವಾಗದೆ ?

ಈ ನಡುವೆ ಜಾಲಪಳು ಕೇಳಿದಳು—ನನಗೆ ಸ್ವಲ್ಪ ರೂಪಾಯಿ ಬೇಕಿತ್ತು.

ರಮಾನಾಥನು ಬೆಚ್ಚಿಬಿದ್ದು ಹೇಳಿದನು—ರೂಪಾಯಿ ನನ್ನ ಹತ್ತಿರ ಈಗಂತೂ ಇಲ್ಲ.

ಜಾಲಪ—ಇವೆ, ಇವೆ, ಖಂಡಿತಕ್ಕೂ ಇವೆ. ಐದಕ್ಕಿಂತ ಹೆಚ್ಚು ಬೇಡ.

ಹೀಗೆ ಹೇಳಿದವಳೇ ರಮಾನಾಥನ ಕಿಸೆಗೆ ಕೈಹಾಕಿ ಕೆಲವು ಆಣೆ ಪಾವಲಿಗಳ ಜತೆಗೆ ಆ ಪತ್ರವನ್ನು ಹೊರತೆಗೆದಳು.

ರಮಾನಾಥನು ಕೈನೀಡಿ ಪತ್ರವನ್ನು ಜಾಲಪಳ ಕೈಯಿಂದ ಸೆಳೆದು ಕೊಳ್ಳುವ ಯತ್ನಮಾಡುತ್ತ ಹೇಳಿದನು ಆ ಕಾಗದ ಕೊಡು ನನಗೆ; ಸರಕಾರೀ ಕಾಗದವದು

ಜಾಲಪ—ಯಾರದ್ದು ? ಹೇಳಿರಿ.

ಜಾಲಪಳು ಮಡಚಿಟ್ಟ ಕಾಗದವನ್ನು ಬಿಡಿಸಿ ಹೇಳಿದಳು—ಇದು ಸರಕಾರಿ ಕಾಗದವೆ ? ಅಬ್ಬ ನಿಮ್ಮ ಸುಳ್ಳೆ ! ನೀವೇ ಬರೆದ....

ರಮಾ - ಕೊಡು, ಕೊಡು ಯಾಕೆ ಸುಮ್ಮನೆ ಕಾಟಕೊಡುತ್ತಿದ್ದೀಯೆ ?

ರಮಾನಾಥನು ಕಾಗದವನ್ನು ಎಳೆದುಕೊಳ್ಳಬೇಕೆಂದು ಮಾಡಿದನು. ಆದರವಳು ಕೈಯನ್ನು ಹಿಂದೆ ಮಾಡಿಕೊಂಡು ಹೇಳಿದಳು—ನಾನು ಇದನ್ನೋದದೆ ಕೊಡಲಿಕ್ಕಿಲ್ಲ. ಹೇಳಿದೆನಲ್ಲವೆ ! ಹೆಚ್ಚು ಹಟ ಮಾಡಿದರೆ ಹರಿದು ಹಾಕುವೆನು.

ರಮಾ—ಸರಿ ಹಾಗಾದರೆ ಹರಿದುಬಿಡು.

ಜಾಲಪ - ಹಾಗೋ, ಹಾಗಾದರೆ ನನಗೆ ಓದಲೇ ಬೇಕು.

ಅವಳು ಎರಡು ಹೆಜ್ಜೆ ಹಿಂದೆ ಸರಿದು ಕಾಗದವನ್ನು ತೆಗೆದು ಓದಹತ್ತಿದಳು

ರಮಾನಾಥನು ಮರಳಿ ಆಕೆಯ ಕೈಯಿಂದ ಪತ್ರವನ್ನೆಳೆಕೊಳ್ಳುವ ಸಾಹಸವನ್ನು ಮಾಡಲಿಲ್ಲ. ಆಕಾಶವು ಹರಿದು ಬಿದ್ದಂತೆಯೂ, ಹಲವಾರು ವಿಷಜಂತುಗಳು ತನ್ನನ್ನು ನುಂಗಲು ಬಾಯಿದೆರೆದು ಬರುತ್ತಿದ್ದಂತೆಯೂ, ಅವನಿಗೆ ಭಾಸವಾಯಿತು. ಥಡಥಡನೆಂದು ಮೇಲಿಂದ ಕೆಳಗಿಳಿದು ಮನೆಯಿಂದ ಹೊರಬಿದ್ದನು. ತನ್ನ ಮುಖವನ್ನೆಲ್ಲಿ ಅಡಗಿಸಲಿ? ಯಾರೂ ನೋಡದ ಹಾಗೆ ಅಡಗಿಕೊಳ್ಳುವುದಾದರೂ ಎಲ್ಲಿ? ಅವನ ಅವಸ್ಥೆಯು ಆಗ ಒಬ್ಬ ಒತ್ತಲೆ ಮನುಷ್ಯನಂತಾಗಿದ್ದಿತು. ಕಾಲಿಂದ ತಲೆಯವರೆಗೆ ವಸ್ತ್ರ ಧರಿಸಿದರೂ ಅವನು ನಗ್ನನಾಗಿದ್ದನು ಅಯ್ಯೋ ! ಎಲ್ಲ ಮೋಸವೂ ಪ್ರಕಟವಾಯಿತು ! ಅವನ ಕಪಟ ಲೀಲೆಯೆಲ್ಲಾ ಹೊರಬಿದ್ದಿತು ! ಅವನು ತನ್ನ ದುರ್ಗತಿಯನ್ನು ತನ್ನ ಕಣ್ಣುಗಳಿಂದಲೆ ನೋಡಲಾರದಾದನು. ಜಾಲಪಳು ಬಿಕ್ಕಿ ಬಿಕ್ಕಿ ಅಳುವುದನ್ನೂ, ತಂದೆಯ ಬೈಗಳನ್ನೂ ನೆರೆಕೆರೆಯವರ ಪಿಸಿಪಿಸಿ ಮಾತುಗಳನ್ನೂ ಕೇಳಿಕೊಂಡು ಬದುಕುವುದಕ್ಕಿಂತ ಸಾಯುವುದೆ

ಲೇಸು ! ಈ ಪ್ರಪಂಚದಲ್ಲಿ ಇಲ್ಲದಿದ್ದ ಮೇಲೆ ಜನರೇನು ಹೇಳಿದರೆ ಯಾರಿಗೇನು? ಹಾಯ್ ! ಕೇವಲ ಮುನ್ನೂರು ರೂಪಾಯಿಗಳಿಂದಾಗಿ ಆತನ ಸರ್ವನಾಶವಾಗುತ್ತಿದೆ; ದೇವರ ಇಚ್ಛೆಯೇ ಹೀಗಿದ್ದರೆ ಯಾರೇನು ಮಾಡಬಲ್ಲರು ? ನಮಗೆ ಪ್ರಿಯರಾದವರ ದೃಷ್ಟಿಯಲ್ಲಿ ಹೀನರಾಗಿ ಬಾಳುವುದೂ ಒಂದು ಬಾಳ್ವೆಯೆ ?

ಜಾಲಪಳು ಅವನನ್ನು ಎಷ್ಟು ನೀಚನೆಂದು, ಎಷ್ಟು ಕಪಟಿಯೆಂದು, ಎಷ್ಟು ಧೂರ್ತನೆಂದು, ಎಷ್ಟು ಬಾಯಿಬಡುಕನೆಂದು ಎಣಿಸಲಿಕ್ಕಿಲ್ಲ ? ಅವನು ತನ್ನ ಮುಖವನ್ನಾಕೆಗೆ ಹೇಗೆ ತೋರಿಸಿಯಾನು ?

ಹೊಸತೊಂದು ಜೀವನದ ಸೂತ್ರಪಾತ ಮಾಡಲಾಗುವಂತಹ, ಪ್ರಪಂಚದಿಂದ ಬೇರಾಗಿ ತನ್ನಷ್ಟಕ್ಕೆ ತಾನು ಜೀವನವನ್ನು ಕಳೆವಂತಹ, ಪೋಲೀಸರಿಗೆ ತಿಳಿಯದ ಹಾಗೆ ಅಡಗಿರುವಂತಹ ಸ್ಥಳವು ಈ ಲೋಕದಲ್ಲಿಲ್ಲವೆ ? ಗಂಗಾದೇವಿಯ ಮಡಿಲಿನ ಹೊರತು ಬೇರೆಲ್ಲಿ ಅಂತಹ ಸ್ಥಳವಿದ್ದೀತು? ಜೀವದಿಂದಿದ್ದರೆ ಒಂದಲ್ಲ, ಎರಡು ತಿಂಗಳಲ್ಲಿಯಾದರೂ ಪೋಲೀಸರ ಕೈಗೆ ಸಿಗಬೇಕಾಗುವುದು. ಅವರು ತನ್ನನ್ನು ನ್ಯಾಯಾಸ್ಥಾನದಲ್ಲಿ ಬೇಡಿ ಹಾಕಿ ನಿಲ್ಲಿಸಿದಾಗ ತನ್ನ ಚಂದವನ್ನು ಏನೆಂದು ನೋಡುವುದು ? ಅದನ್ನು ನೋಡಲಿಕ್ಕೆ ಎಲ್ಲರೂ ಬರುವರು—ಜಾಲಪ, ತಂದೆ, ತಾಯಿ, ರತನ, ನೆರೆಹೊರೆಯವರು, ಊರಿನವರು—ಎಲ್ಲರೂ. ಆಗ ಅವರೆದುರಿಗೆ ಅವನು ಮುಖವೆತ್ತುವುದು ಹೇಗೆ ? ಇಲ್ಲ, ಇದಕ್ಕಿಂತ ನದಿಯಲ್ಲಿ ಮುಳುಗಿ ಸಾಯುವುದೇ ಲೇಸು. ಒಳ್ಳೆಯದು.

ಆದರೆ ಕೂಡಲೇ ಅವನಿಗೆ ಜಾಲಪಳ ಯೋಚನೆ ಬಂತು. ತಾನಿಲ್ಲದಿದ್ದರೆ ಅವಳಿಗೆ ಯಾರು ಗತಿ ? ತಂದೆ ತಾಯಿಗಳಾದರೆ ಅತ್ತು, ಅತ್ತು ಕೊನೆಗೆ ಸಮಾಧಾನ ತಂದುಕೊಂಡಾರು; ಆದರೆ ಅವಳನ್ನು ಕಾಪಾಡುವವರಾರು ? ಕೆಲಸಮಯದ ವರೆಗೆ ನಗರದಿಂದ ದೂರದ ಯಾವುದಾದರೂ ಒಂದು ಹಳ್ಳಿಯಲ್ಲಿ, ತಲೆಮರೆಸಿಕೊಂಡು ಇದ್ದರಾಗದೆ ? ಜಾಲಪಳು ದಯೆದೋರಿ ಅವನ ಅಪರಾಧವನ್ನು ಕ್ಷಮಿಸಲಿಕ್ಕೂ ಸಾಕು. ಆದರೆ ಈಗವಳ ದಶೆ ಏನಾಗಿರಬಹುದು ? ತನ್ನ ಪತ್ರದ ಅಭಿಪ್ರಾಯವನ್ನು ತಿಳಿದಿರಲಿಕ್ಕೆ ಸಾಕು. ಪರಿಸ್ಥಿತಿಯು ಅರಿವಾಗಿರಬಹುದು. ಅಮ್ಮನಿಗೆ ಪತ್ರವನ್ನು ತೋರಿಸಿ ಗಾಬರಿಯಿಂದ

ನನ್ನನ್ನು ಹುಡುಕಾಡುತ್ತಿರಬಹುದು. ತಂದೆಯವರನ್ನು ಕರೆತರಲು ಹುಡು ಗರನ್ನು ಕಳಿಸಿರಲಿಕ್ಕೆ ಸಾಕು. ನಾಲ್ಕು ದಿಕ್ಕುಗಳಲ್ಲಿಯೂ ನನ್ನ ಶೋಧವು ನಡೆಯುತ್ತಿರಬಹುದು. ಈ ಕಡೆಯೂ ಯಾರಾದರೂ ಬಂದಾರೆ ? ಸಾಕ್ಷಾತ್ ಯಮನನ್ನು ನೋಡಿದರೂ ಈಗಾತನು ಒಬ್ಬ ಪರಿಚಿತನನ್ನು ನೋಡಿದಷ್ಟು ಹೆದರುತ್ತಿದ್ದಿಲ್ಲ. ಹಿಂದೂ ಮುಂದೂ ಕಡೆನೋಟದಿಂದ ನೋಡುತ್ತ ಅವನು ಆ ಸುಡುಬಿಸಿಲಿನಲ್ಲಿ ನಡೆಯುತ್ತಿದ್ದನು. ಎಲ್ಲಿಗೆಂದು ಅವನಿಗೇ ತಿಳಿಯದು. ಹಠಾತ್ತಾಗಿ ರೈಲಿನ ಕೂಗು ಕೇಳಿಸಿತು. ಎಲಾ, ಇಷ್ಟು ದೂರ ನಾನು ಬಂದು ಬಿಟ್ಟೆನೆ! ರೈಲುಗಾಡಿಯು ಮುಂದೆಯೇ ನಿಂತಿತ್ತು. ಅವನ ಮನಸ್ಸಿನಲ್ಲಿ ಅದನ್ನೇರುವ ಪ್ರಬಲ ಇಚ್ಛೆಯುಂಟಾಯಿತು. ಅದರಲ್ಲಿ ಕುಳಿತೊಡನೆ ತನ್ನ ಎಲ್ಲ ಸಂಕಷ್ಟಗಳೂ ಪರಿಹಾರವಾಗುತ್ತವೆಂಬಂತೆ ಅವನಿಗೆ ತೋರಿತು. ಆದರೆ ಕಿಸೆಯಲ್ಲಿ ರೂಪಾಯಿಯಿರಲಿಲ್ಲ; ಬೆರಳಿನಲ್ಲಿ ಉಂಗುರವಿತ್ತು. ಅವನು ಕೂಲಿಗಳ ಜಮಾದಾರನನ್ನು ಕರೆದು ಕೇಳಿದನು—ಎಲ್ಲಿಯಾದರೂ ಈ ಉಂಗುರವನ್ನು ಮಾರಿ ತರುವೇಯಾ? ನಿನಗೂ ಒಂದು ರೂಪಾಯಿ ಕೊಡು ತ್ತೇನೆ. ನನಗೆ ಇದೇ ಗಾಡಿಯಲ್ಲಿ ಹೋಗಬೇಕಾಗಿದೆ. ಮನೆಯಿಂದ ರೂಪಾಯಿ ತಂದಿದ್ದೆ. ಎಲ್ಲಿ, ಕೆಳಕ್ಕೆ ಬಿತ್ತೊ ಏನೊ. ಹಿಂದೆ ಹೋಗೋಣ ವೆಂದರೆ ಗಾಡಿ ಹೊರಟುಹೋಗುವುದು.

ಜಮಾದಾರನು ಅವನನ್ನೊಮ್ಮೆ ಕಾಲಿನಿಂದ ನೆತ್ತಿಯ ವರೆಗೆ ನೋಡಿ, ಉಂಗುರವನ್ನಿಸುಕೊಂಡು, ಸ್ಟೇಶನ್ನಿನೊಳಗೆ ಹೋದನು. ರಮಾನಾಥನು ಅವನು ಹೋದಕಡೆಯೇ ದೃಷ್ಟಿಯಿಟ್ಟು ಟಿಕೆಟ್ ಆಫೀಸಿನ ಹತ್ತಿರ ಅತ್ತಿತ್ತ ತಿರುಗಾಡುತ್ತಿದ್ದನು. ಹತ್ತು ನಿಮಿಷಗಳಾದರೂ ಅವನ ಪತ್ತೆಯೇ ಇಲ್ಲ. ಸ್ಟೇಶನ್ನಿನ ಒಳಗೆ ಹೋಗಿ ಅವನನ್ನು ಹುಡುಕತೊಡಗಿದನು. ಒಬ್ಬ ಕೂಲಿಯ ಹತ್ತಿರ ಕೇಳಿದನು. ಆದರೆ ಯಾರೆಂದು ಕೇಳುವುದು ? ಇವನೇನೂ ಅವನ ಹೆಸರು ಕೇಳಿ ಉಂಗುರ ಕೊಟ್ಟವನಲ್ಲ. ಅಷ್ಟರಲ್ಲಿ ಗಾಡಿಯ ಸೀಟಿ ಯಾಯಿತು. ರಮಾನಾಥನು ಅಧೀರನಾಗಿ ಟಿಕೇಟು ಇಲ್ಲದೆಯೆ ಒಳಗೆ ಹೋಗಿ ಕುಳಿತನು. ಸ್ಪಷ್ಟವಾಗಿ ತನ್ನ ಹತ್ತಿರ ಟಿಕೇಟ್ ಇಲ್ಲವೆಂದೇ ಹೇಳು ವುದೆಂದು ನಿರ್ಧರಿಸಿದನು. ಮತ್ತೆ ಇಳಿಯುವ ಪ್ರಸಂಗ ಬಂದರೂ ಊಟು ಬಿಟ್ಟು ಹತ್ತು ಹರದಾರಿ ಕಳೆದಮೇಲಷ್ಟೆ.

ಗಾಡಿಯು ಹೊರಟಿತು. ಆಗ ರಮಾನಾಥನಿಗೆ ತನ್ನ ಅವಸ್ಥೆಯನ್ನು ನೆನೆದು ಅಳು ಬಂದಿತು. ಇನ್ನು ಇಲ್ಲಿಗೆ ಹಿಂತಿರುಗುವ ದಿನಗಳು ಬರುವವೋ ಇಲ್ಲವೋ! ಇಂತಹ ಸುಖದ ದಿನಗಳು ಎಲ್ಲಿ ಹೊರಟಾವು? ಕಳೆದ ದಿನಗಳು ಎಂದೆಂದಿಗೂ ಕಳೆದು ಹೋದಂತೆಯೆ ಹೀಗೆಯೆ ಲೋಕದಿಂದ ತಲೆ ಮರೆಸಿಕೊಂಡಿರುತ್ತ ಒಂದು ದಿನ ಅವನು ಸಾಯುವವನು. ಆಗ ಅವನ ಶವದಮೇಲೆ ಕಣ್ಣೀರು ಹಾಕುವವರು ಯಾರೂ ಇರುವುದಿಲ್ಲ. ಬರಿಯ ಸಂಕೋಚವೊಂದರ ದೆಸೆಯಿಂದ ಇಷ್ಟೆಲ್ಲಾ ಅನರ್ಥ ಸಂಘಟಿಸಿತು. ಏನೇ ಇರಲಿ, ಕೆಲ ದಿನಗಳ ಮಟ್ಟಿಗಾದರೂ ತಾನು ಜಾಲಪಳಿಗೆ ಸಂತೋಷದಿಂದಿರುವಂತೆ ಮಾಡಿದೆನಲ್ಲಾ, ಅದೇ ಸಾಕು. ಅವಳ ಲಾಲಸೆಗಳನ್ನು ಪೂರ್ಣ ಮಾಡಿದೆನಲ್ಲವೆ? ಇದುವೆ ಈಗವನ ಸಂತೃಪ್ತಿಗೆ ಕಾರಣವಾಯಿತು.

ಗಾಡಿಯು ಹೊರಟು ಹತ್ತು ಮಿನಿಟುಗಳೂ ಆಗಿರಲಿಕ್ಕಿಲ್ಲ; ರಮಾನಾಥನ ಡಬ್ಬಿಯ ಬಾಗಿಲು ತೆರೆಯಲ್ಪಟ್ಟಿತು. ಟಿಕೇಟ್ ಬಾಬುಗಳು ಒಳಗೆ ಬಂದರು. ರಮಾನಾಥನ ಮುಖವು ಕಳೆಗುಂದಲಾರಂಭಿಸಿತು. ಅವನೆದೆ ಡವ ಡವ ಎನ್ನಹತ್ತಿತು. ಟಿಕೇಟ್ ಬಾಬುಗಳು ಹತ್ತಿರ ಹತ್ತಿರ ಬಂದಂತೆ ಅವನ ನಾಡಿಗಳ ವೇಗವು ತೀವ್ರತರವಾಗ ಹತ್ತಿತು. ಇನ್ನೇನು, ಇನ್ನೇನು ಎನ್ನುವಷ್ಟರಲ್ಲೆ ಟಿಕೇಟ್ ಬಾಬುಗಳು. ನಿಮ್ಮ ಟಿಕೇಟೆಲ್ಲಿ? ಎಂದು ಕೇಳಿಯೂ ಆಯಿತು.

ರಮಾನಾಥನು ಅವರ ಹತ್ತಿರ ತಾನು ಜಮಾದಾರನೊಬ್ಬನ ಹತ್ತಿರ ೨೫ ರೂಪಾಯಿಗಳನ್ನು ಕೊಟ್ಟು ಕಲಕತ್ತೆಗೆ ಟಿಕೇಟು ತರಲಿಕ್ಕೆ ಹೇಳಿದೆನೆಂದೂ, ಜಮಾದಾರನು ಕಾಣೆಯಾದಂತೆಯೂ, ತನ್ನ ಹತ್ತಿರ ಹಣವಿಲ್ಲವೆಂದೂ, ಅವರಿಗೆ ತೋಚಿದ್ದನ್ನು ಮಾಡಬಹುದೆಂದೂ ಹೇಳಿದನು.

ಅವರೆಂದರು—ಏನು ಮಾಡಲಿ, ರಾಯರೆ, ಕಾನೂನ ಪ್ರಕಾರ ನಡೆಯಲೇಬೇಕು. ಆ ಡಬ್ಬಿಯಲ್ಲಿ ಕುಳಿತಿದ್ದವರೆಲ್ಲಾ ಹೆಚ್ಚಾಗಿ ಮಜೂರ ವರ್ಗದವರಾಗಿದ್ದರು. ಅವರು ಒಬ್ಬ ಬಾಬುವಿಗೆ (ಬಿಳಿಯಂಗಿಯವನಿಗೆ) ಈ ತೆರನ ಅವಮಾನವಾಗುತ್ತಿರುವುದನ್ನು ಕಂಡು ಹಾರ್ದಿಕ ಆನಂದವನ್ನು ಅನುಭವಿಸುತ್ತಿದ್ದರು. ಈಗ ಇವನನ್ನು ಆ ಟಿಕೇಟ್ ಬಾಬುಗಳು ಹೊರಕ್ಕೆ

ದಬ್ಬಿದ್ದರೆ ಅವರಿಗೆ ಮತ್ತಷ್ಟು ಸಂತೋಷವಾಗುತ್ತಿತ್ತು. ರಮಾನಾಥನು ಮಾತ್ರ ನಾಚಿಕೆಯಿಂದ ತಲೆ ತಗ್ಗಿಸಿಕೊಂಡಿದ್ದನು. ಗಾಡಿಯಿಂದ ಹಾರಿ ಪ್ರಾಣಕಳಕೊಳ್ಳಲೋ ಎಂದು ತೋರಿತು. ಕೊನೆಗೆ ಕಿಟಕಿಯಿಂದ ಕುತ್ತಿಗೆ ಹೊರಗೆ ಹಾಕಿ ಅಳತೊಡಗಿದನು.

ಅಷ್ಟರಲ್ಲಿ ಅವನ ಹತ್ತಿರವೆ ಕುಳಿತಿದ್ದ ಮುದುಕನೊಬ್ಬನು ಅವನೊಡನೆ ಕೇಳಿದರು—ಕಲ್ಕತ್ತೆಯಲ್ಲಿ ಯಾರಲ್ಲಿಗೆ ಹೋಗುತ್ತೀರಿ ಸ್ವಾಮೀ?

ರಮಾನಾಥನು ಇವನು ತನ್ನನ್ನು ಕೆಣಕಲು ಕೇಳಿದನೆಂದು ಭಾವಿಸಿ ಹೇಳಿದನು—ಎಲ್ಲಿಗೆ ಹೋದರೆ ನಿಮಗೇನು?

ಮುದುಕನು ಈ ಉಪೇಕ್ಷೆಯನ್ನೆಣಿಸದೆ ಹೇಳಿದನು—ನಾನೂ ಅಲ್ಲಿಗೇ ಹೋಗುತ್ತಿದ್ದೇನೆ. ಮತ್ತೆ ಮೆಲ್ಲಗೆ ಅಂದನು—ಟಿಕೆಟ್ಟಿನ ರೂಪಾಯಿ ನಾನು ಕೊಡುತ್ತೇನೆ. ನೀವು ನನಗೆ ಮತ್ತೆ ಕೊಟ್ಟರೆ ಸಾಕು.

ಈಗ ರಮಾನಾಥನು ಅವನನ್ನು ಧ್ಯಾನವಿಟ್ಟು ನೋಡಿದನು—ಅರವತ್ತು-ಎಪ್ಪತ್ತರ ಹಣ್ಣು ಮುದುಕ. ಮಾಂಸವಂತಿರಲಿ, ಎಲುಬುಗಳು ಕೂಡಾ ಕರಗಿ ಹೋಗಿದ್ದುವು. ಒಂದು ಸಣ್ಣ ಚೀಲದ ಹೊರತು ಅವನೊಡನೆ ಬೇರಾವ ಸಾಮಾನೂ ಇರಲಿಲ್ಲ.

ರಮಾನಾಥನು ತನ್ನನ್ನೇ ನೋಡುತ್ತಿರುವುದನ್ನು ಕಂಡು ಅವನು ಹೇಳಿದನು—ನೀವು ಹೌರಾದಲ್ಲೇ ಇಳಿಯುವಿರೋ ಅಥವಾ ಅದಕ್ಕೆ ಮೊದಲೇ ಇಳಿಯುವವರೋ?

ರಮಾನಾಥನು ಅವನ ಉಪಕಾರದ ಭಾರವನ್ನು ಹೊರಲಾರದೆ ಹೇಳಿದನು—ಇನ್ನು ಮುಂದಿನ ಸ್ಟೇಶನ್ನಿನಲ್ಲಿಯೆ ಇಳಿಯುತ್ತೇನೆ. ರೂಪಾಯಿಯ ಏರ್ಪಾಡು ಮಾಡಿ ಹಿಂದುಗಡೆಯಿಂದ ಬರುತ್ತೇನೆ.

ಮುದುಕ—ನಿಮಗೆ ಬೇಕಾದುದೆಷ್ಟು? ನಾನೂ ಅಲ್ಲಿಗೆ ಬರುವವನಲ್ಲವೆ? ಬೇಕಾದಾಗ ಕೊಡಿರಿ. ನನ್ನ ಎಂಟು-ಹತ್ತು ರೂಪಾಯಿಗೆ ನೀವು ಓಡಿ ಹೋಗಲಿಕ್ಕಿಲ್ಲ. ಇರಲಿ, ನಿಮ್ಮ ಮನೆಯೆಲ್ಲಿ?

ರಮಾ—ಇಲ್ಲೆ ಪ್ರಯಾಗದಲ್ಲಿ.

ಮುದುಕನು ಭಕ್ತಿಭಾವದಿಂದ ಹೇಳಿದನು—ಧನ್ಯ ಪ್ರಯಾಗ, ಧನ್ಯ! ನಾನು ತ್ರಿವೇಣಿಯ ಸ್ನಾನಮಾಡಿ ಬರುತ್ತಿದ್ದೇನೆ. ಆಹಾ! ಇದು ನಿಜವಾ

ಗಿಯೂ ದೇವತೆಗಳ ಪುರವೆ! ಹತ್ತುರೂಪಾಯಿ ಕೊಟ್ಟರೆ ನಿಮ್ಮ ಕೆಲಸವಾಗುವುದಷ್ಟೆ ?

ರಮಾ—ಹೌದು ಅಷ್ಟಿದ್ದರೆ ಬಹಳವಾಯಿತು.

ಟಿಕೆಟ್ ಬಾಬುವಿಗೆ ಹಣಕೊಟ್ಟು ರಮಾನಾಥನು ಯೋಚಿಸತೊಡಗಿದನು. ಈ ಮುದುಕನದು ಎಂತಹ ಸರಳ, ಪರೋಪಕಾರಿ ಮತ್ತು ನಿಷ್ಕಪಟ ಗುಣ! ಸಭ್ಯರೆಂದು ಹೇಳಿಸಿಕೊಳ್ಳುವವರಲ್ಲಿ ಹೀಗೆ ಗುರುತು ಪರಿಚಯವಿಲ್ಲದ ಯಾತ್ರಿಯೊಬ್ಬನನ್ನು ಉದ್ಧರಿಸುವ ಸಹೃದಯತೆ ಇರಲಿಕ್ಕಿಲ್ಲ. ಆ ಡಬ್ಬಿಯಲ್ಲಿದ್ದ ಇತರ ಪ್ರಯಾಣಿಕರೂ ಮುದುಕನನ್ನೆ ಶ್ರದ್ಧಾಪೂರಿತ ನೇತ್ರಗಳಿಂದ ನೋಡಹತ್ತಿದರು.

ರಮಾನಾಥನಿಗೆ ಮುದುಕನ ಮಾತುಗಳಿಂದ ಅವನು ಜಾತಿಯಲ್ಲಿ ಖಟಿಕನೆಂದೂ ಮೊದಲು ಬಿಹಾರಿನ ನಿವಾಸಿಯೆಂದೂ, ಈಗ ನಾಲ್ವತ್ತು ವರುಷಗಳಿಂದ ಕಲ್ಕತ್ತೆಯಲ್ಲಿ ತರಕಾರಿ ಅಂಗಡಿಯನ್ನಿಟ್ಟು ಕೊಂಡಿರುವನೆಂದೂ, ಹೆಸರು ದೇವೀದೀನನೆಂದೂ ಇದೀಗ ಬದ್ರಿನಾಥದ ಯಾತ್ರೆಯನ್ನು ಮಾಡಿಕೊಂಡು ಬರುತ್ತಿದ್ದಾನೆಂದೂ ತಿಳಿದು ಬಂದಿತು.

ರಮಾನಾಥನು ಆಶ್ಚರ್ಯದಿಂದ ಕೇಳಿದನು— ನೀವು ಬದ್ರಿನಾಥದ ಯಾತ್ರೆಯನ್ನು ಮುಗಿಸಿ ಬಂದವರೆ? ಅಲ್ಲಿ ಬೆಟ್ಟಗಳನ್ನು ಏರಬೇಕಲ್ಲವೆ?

ದೇವಿ—ದೇವರ ದಯೆಯಿದ್ದರೆ ಎಲ್ಲವೂ ಆಗುತ್ತದೆ. ಸ್ವಾಮೀ, ಮುಖ್ಯ ಅವನ ದಯೆಯೊಂದು ಬೇಕು.

ರಮಾ—ಮಕ್ಕಳು ಮನೆಮಂದಿಯೆಲ್ಲ ಕಲಕತ್ತೆಯಲ್ಲೆ ಇರಬಹುದಲ್ಲವೆ ?

ದೇವೀದೀನನು ಒಣನಗುವನ್ನು ಬೀರಿ ಹೇಳಿದನು—ಮಕ್ಕಳು ಮರೆಗಳೆಲ್ಲಾ ಭಗವಂತನ ಮನೆಯಲ್ಲಿದ್ದಾರೆ. ನಾಲ್ಕು ಮಂದಿ ಗಂಡು ಮಕ್ಕಳಿದ್ದರು. ಎಲ್ಲರೂ ಅಲ್ಲಿಗೇ ಹೋದರು. ನಾನೊಬ್ಬನಿದ್ದೇನಿನ್ನೂ. ನನ್ನಿಂದಲೇ ಹುಟ್ಟಿದರು. ತಾನು ಹಾಕಿದ ಬೀಜವನ್ನು ರೈತನು ತಾನೇ ಕೊಯ್ಯುವನಷ್ಟೆ ?

ಹೀಗೆ ಹೇಳಿ ಅವನು ಮರಳಿ ನಕ್ಕನು. ತುಸು ಹೊತ್ತು ತಡೆದ ಬಳಿಕ ಹೇಳಿದನು—ಪಾಪ, ಮುದುಕಿ ಇನ್ನೂ ಇದ್ದಾಳೆ. ಜೀವ ಹಿಡಿದುಕೊಂಡು ನಮ್ಮಿಬ್ಬರಲ್ಲಿ ಯಾರು ಮೊದಲು ಹೊರಡುತ್ತಾರೋ ನೋಡಬೇಕು. ತಾನು

ಮೊದಲು ಹೊರಡುವಳೆಂದು ಅವಳು ಹೇಳುತ್ತಾಳೆ. ನಾನು ಹೋಗುವೆನೆಂದು ನಾನು ಅನ್ನುತ್ತೇನೆ. ಯಾರ ಪಂಥ ಮೇಲಾಗುವುದೋ ನೋಡಬೇಕು. ಸಾಧ್ಯವಿದ್ದರೆ ನಿಮಗೂ ತೋರಿಸುತ್ತೇನೆ. ಈಗಲೂ ಆಭರಣ ತೊಟ್ಟುಕೊಳ್ಳುತ್ತಾಳೆ. ಚಿನ್ನದ ಕಂಠೀಸರವನ್ನು ಹಾಕಿಕೊಂಡು ಅಂಗಡಿಯಲ್ಲಿ ಕುಳ್ಳಿರುತ್ತಾಳೆ. ತೀರ್ಥಯಾತ್ರೆ ಮಾಡಿಕೊಂಡು ಬರೋಣವೆಂದು ಹೇಳಿದಾಗ ಹೇಳಿದಳು—" ನಿಮ್ಮ ತೀರ್ಥಕ್ಕೆ ಹೊರಟರೆ ಇಲ್ಲಿ ಅಂಗಡಿಯನ್ನು ಮಣ್ಣುಗೂಡಿಸಿಯೇ ಬರಬೇಕು. " ಇದು ನಮ್ಮ ಬಾಳ್ವೆಯ ಸ್ಥಿತಿ ನೋಡಿರಿ, ಇವತ್ತೋ, ನಾಳೆಯೋ, ಸಾಯುವುದು; ಆದರೆ ಅಂಗಡಿಯನ್ನು ಬಿಡಲಿಕ್ಕಿಲ್ಲ. ಹಿಂದಿಲ್ಲ, ಮುಂದಿಲ್ಲ, ಅಳುವವರೂ ಇಲ್ಲ; ನಗುವವರೂ ಇಲ್ಲ; ಆದರೂ ಮಾಯೆ ಬಿಡುವುದಿಲ್ಲ. ಈಗಲೂ ಒಂದಿಲ್ಲೊಂದು ಆಭರಣವನ್ನು ಮಾಡಿಸುತ್ತಲೇ ಇರುತ್ತಾಳೆ. ಯಾವಾಗ ಅವಳ ಆಸೆ ಹಿಂಗುವುದೋ ದೇವರೇ ಬಲ್ಲ. ಎಲ್ಲ ಮನೆಗಳಲ್ಲೂ ಇದೇ ಸ್ಥಿತಿ ಎಲ್ಲಿ ನೋಡಿದರೂ—ಆಭರಣಬೇಕು, ಆಭರಣಬೇಕು. ಆಭರಣಗಳಿಗಾಗಿ ಪ್ರಾಣಬಿಟ್ಟರೂ ಚಿಂತಿಲ್ಲ; ಮನೆಮುಂದಿ ಆರೆಹೊಟ್ಟೆ ಸತ್ತರೂ ಚಿಂತಿಲ್ಲ, ಮನೆಮಾರುಗಳನ್ನು ಮಾರಿದರೂ ಚಿಂತಿಲ್ಲ. ಅಷ್ಟೇಕೆ, ಮರ್ಯಾದೆ ಕಳಕೊಂಡರೂ ಪರವಾ ಇಲ್ಲ. ಚಿಕ್ಕವರು, ದೊಡ್ಡವರು, ಬಡವರು, ಶ್ರೀಮಂತರು ಯಾರನ್ನೂ ಈ ರೋಗ ಬಿಟ್ಟಿಲ್ಲ. ಕಲ್ಕತ್ತೆಯಲ್ಲಿ ಎಲ್ಲಿ ಕೆಲಸದಲ್ಲಿದ್ದೀಯಪ್ಪಾ ?

ರಮಾ—ನಾನು ಹೋಗುತ್ತಿರುವುದು ಇದೇ ಮೊದಲ ಬಾರಿ. ಏನಾದರೂ ಕೆಲಸ ಸಿಕ್ಕೀತೆ. ಎಂದು ನೋಡಬೇಕಾಗಿದೆ.

ದೇವಿ—ಹಾಗಾದರೆ ನನ್ನ ಮನೆಯಲ್ಲಿ ಇದ್ದು ಬಿಡುವುದು, ಮತ್ತೇನು? ಎರಡು ಕೋಣೆಗಳಿವೆ. ಮುಂದಿನಿಂದ ಅಂಗಳವಿದೆ, ಮೇಲೆಯೆ ಒಂದು ಕೊಠಡಿಯಿದೆ. ಇವತ್ತು ಮಾರಿದರೆ ಹತ್ತು ಸಾವಿರ ಸಿಕ್ಕೀತು. ಒಂದು ಕೊಠಡಿ ನಿಮಗೆ ಕೊಡುತ್ತೇನೆ. ಕೆಲಸ ಸಿಕ್ಕಿದ ಮೇಲೆ ಬೇಕಾದರೆ ಮನೆ ನೋಡಿಕೊಳ್ಳಬಹುದು. ಮನೆಯಿಂದ ಹೌರಾಕ್ಕೆ ಓಡಿಹೋಗಿ ಇವತ್ತಿಗೆ ಐವತ್ತು ವರ್ಷಗಳಾದುವು. ಅಂದಿನಿಂದ ಎಷ್ಟೋ ದು:ಖಗಳನ್ನೂ ಸುಖಗಳನ್ನೂ ಕಂಡಿರುತ್ತೇನೆ. ಈಗ ದೇವರ ಹತ್ತಿರ, ನನ್ನನ್ನು ಒಯ್ಯಪ್ಪಾ, ಎಂದಿಷ್ಟೇ ಪ್ರಾರ್ಥಿಸಿಕೊಳ್ಳುತ್ತಿದ್ದೇನೆ. ಆದರೆ ಮುದುಕಿಯನ್ನು ಅಮರಳ

ಸ್ನಾಗಿ ಮಾಡಿಬಿಡು. ಇಲ್ಲವಾದರೆ ಅವಳ ಅಂಗಡಿ, ಮನೆ ಆಭರಣ, ಇವಕ್ಕೆಲ್ಲ ಗತಿಯಾರು ?

ಹೀಗೆಂದು ದೇವಿದೀನನು ಮತ್ತೆ ನಗತೊಡಗಿದನು—ಅವನ ನಗುಪ್ರವೃತ್ತಿಯನ್ನೂ, ಪ್ರಸನ್ನಚಿತ್ತವನ್ನೂ ಕಂಡು ರಮಾನಾಥನಿಗೆ ಆಶ್ಚರ್ಯ ಉಂಟಾಯಿತು. ಸುಮ್ಮಸುಮ್ಮನೆ ನಗಬಾರದಲ್ಲಿ ನಗುವನು; ಬೇರೆಯವರು ಅಳುವಂತಹ ಸಂಗತಿಗೆ ನಗಹತ್ತುವನು; ಯಾವ ತರುಣನಿಗೂ ಇಂತಹ ನಗು ಬರಲಿಕ್ಕಿಲ್ಲ. ಬಹು ಬೇಗನೆ ಅವನು ರಮಾನಾಥನೊಡನೆ ವರ್ಷಗಟ್ಟಲೆ ಪರಿಚಯ ಉಳ್ಳವನಂತೆ ಮಾತಾಡುತ್ತ, ಆಡುತ್ತ ತನ್ನ ಬಾಳಿನ ಕಥೆಯನ್ನೆಲ್ಲಾ ಕೇಳಿಸಿದನು. ಆ ಬಳಿಕ ರಮಾನಾಥನಿಗೂ ತನ್ನ ವಿಷಯ ಒಂದು ಕಾಲ್ಪನಿಕ ಕಥೆಯನ್ನು ಹೇಳಬೇಕಾಗಿ ಬಂದಿತು.

ದೇವೀದೀನ— ಹಾಗಾದರೆ ಮನೆಯಿಂದ ಓಡಿಬಂದಿರುವೆಯಾ ? ತಿಳಿಯಿತು. ಮನೆಯಲ್ಲಿ ಜಗಳ ಬಿದ್ದಿರಬೇಕು. ಅತ್ತೆ ಸೊಸೆಯರಲ್ಲಿ ಮನಸ್ಸು ಕೆಟ್ಟಿರಬೇಕು. ಇದೇ ಆಚರಣದ ವಿಷಯದಲ್ಲಿ ಮತ್ತೇನು ? ಅವರ ಜಗಳ ಕೇಳಿ, ಕೇಳಿ ಮನಸ್ಸು ಕೆಟ್ಟಿರಬೇಕು.

ರಮಾ—ಹೌದು, ಇದು ನಿಮಗೆ ಹೇಗೆ ತಿಳಿಯಿತು ?

ದೇವಿದೀನನು ನಗುತ್ತ ಹೇಳಿದನು—ಇದೊಂದು ದೊಡ್ಡ ಮಂತ್ರವಪ್ಪಾ, ಮಹಾ ಮಂತ್ರ; ಇನ್ನೂ ಮಕ್ಕಳು, ಪಿಳ್ಳೆ ಇರಲಿಕ್ಕಿಲ್ಲ.

ರಮಾ-- ಇಲ್ಲ.

ದೇವಿ--ತಮ್ಮಂದಿರು ಇರಬಹುದಷ್ಟೆ ?

ರಮಾ—ಹೌದು, ಹೌದು, ನಿಮಗೆ ಹೇಗೆ ತಿಳಿಯಿತು ಸ್ವಾಮೀ ?

ದೇವೀದೀನನು ಮರಳಿ ಗಹಗಹಿಸಿ ನಕ್ಕು ಹೇಳಿದನು—ಅತ್ತೆಯ ಮನೆಯಲ್ಲಿ ತುಂಬಾ ಇರಬಹುದು.

ರಮಾ—ಅಹುದು, ಬೇಕಾದಷ್ಟು ಇರುವುದೇನೋ ಸಹಜ.

ದೇವಿ—ಆದರೆ ಎಲ್ಲ ಲೋಭಿಗಳು.

ರಮಾ—ಸರಿ ನೀವಂದುದು ನಿಜ. ಮದುವೆಯಾದಮೇಲೆ ಒಮ್ಮೆಯೂ ಮಗಳನ್ನು ಮನೆಗೆ ಕರೆದುಕೊಂಡು ಹೋಗಲಿಲ್ಲ. ಅಂಥವರು ಬೇರೇನು ಮಾಡಿಯಾರು ?

ದೇವಿ—ತಿಳಿಯಿತಪ್ಪ, ಎಲ್ಲವೂ ತಿಳಿಯಿತು. ಪ್ರಪಂಚದ ನಿಯಮವೇ ಅಂತಹುದು. ಮಗನಿಗಾಗಿ ಬೇಕಾದರೆ ಕಳವು, ಸುಲಿಗೆ, ಏನು ಮಾಡಲಿಕ್ಕೂ ಸಿದ್ಧರು. ಆದರೆ ಮಗಳಿಗೆ ಕೊಡುವುದಕ್ಕೆ ಒಂದು ಒಡಕು ಚಿಕ್ಕಾಸೂ ಇರುವುದಿಲ್ಲ ಮನೆಯಲ್ಲಿ.

ರಮಾನಾಥನಿಗೆ ಚಿಂತೆಯ ದೆಸೆಯಿಂದ ಮೂರುದಿನ ನಿದ್ದೆಯಿರಲಿಲ್ಲ. ಮಾತಾಡುತ್ತ ತೂಕಡಿಗೆ ಬರಹತ್ತಿತು. ದೇವಿದೀನನು ಒಂದು ಗಂಟನ್ನು ಬಿಚ್ಚಿ, ಅದರಿಂದ ಒಂದು ಚಾಪೆ ತೆಗೆದು ಅದನ್ನು ಸೀಟಿನಮೇಲೆ ಹಾಸಿ ಹೇಳಿದನು.—ಬಾರಪ್ಪಾ, ಇಲ್ಲಿ ಮಲಗಿಕೋ. ನಿನ್ನ ಸೀಟಿನಲ್ಲಿ ನಾನು ಕೂಡ್ರುವೆನು.

ರಮಾನಾಥನು ಮಲಗಿದನು. ಮುದುಕನು ಸ್ನೇಹಪೂರಿತ ನೇತ್ರಗಳಿಂದ ತನ್ನ ಮಗನು ಪರದೇಶದಿಂದ ಬಂದರೆ ಹೇಗೋ ಹಾಗೆ, ಬಹಳ ಹೊತ್ತಿನವರೆಗೆ ಅವನನ್ನೆ ನೋಡುತ್ತಿದ್ದನು.

## ೨೨

ಜಾಲಪಳು ರಮಾನಾಥನ ಪತ್ರವನ್ನು ಸಂಪೂರ್ಣ ಓದಿ ಮುಗಿಸಿದಳು. ತನ್ನಲ್ಲಿಯೂ, ಇಂಥ ಛಲ, ಕಪಟಗಳೆ, ಎಂದವಳು ಉರಿದೆದ್ದಳು. ಕೆಳಗೆ ಹೋಗಿ ರಮಾನಾಥನಿಗೆ ನಾಲ್ಕು ಮಾತುಗಳನ್ನು ಹೇಳುವೆನೆಂದು ಕೆಳಗೆ ಬಂದಳು. ಅಲ್ಲಿ ರಮಾನಾಥನಿರಲಿಲ್ಲ. ಪರಿಸ್ಥಿತಿಯ ಭಯಂಕರತೆಯನ್ನು ಅನುಮಾನಿಸಿ ಅವಳಿಗೆ ಕ್ರೋಧದ ಬದಲು ಭಯದ ಸಂಚಾರವಾಯಿತು. ಅವಳ ಹೃದಯದಲ್ಲಿ ಒಂದು ಅಜ್ಞಾತಶಂಕೆಯು ಅಂಕುರಿಸಿತು. ಸ್ಟ್ಯಾಕಲು ಇದ್ದಲ್ಲೆ ಇತ್ತು. ಅವಳು ಒಂದು ಟಾಂಗಾ ಮಾಡಿಕೊಂಡು ಮುನಿಸಿಪಲ್ ಕಚೇರಿಯ ಕಡೆಗೆ ಹೋದಳು. ಅಲ್ಲಿ ಪೇದೆಯ ಹತ್ತಿರ ಕೇಳಿದಳು. ಅವನು ಬಂದಿಲ್ಲವೆಂದನು. ಆಮೇಲೆ ರಮೇಶಬಾಬುಗಳನ್ನು ವಿಚಾರಿಸಿದಳು. ಅವರೆಂದರು—ಆಫೀಸಿನ ಹೊತ್ತಿಗೆ ಅಡ್ಡಾಡುವದಕ್ಕೆ ಹೋಗುವವನಲ್ಲ ಅವನು. ಏನು, ಮನೆಯಿಂದ ಹೊರಟಿದ್ದನೆ ?

ಜಾಲಪ—ಅವರು ಎಷ್ಟು ರೂಪಾಯಿ ಕೊಡಬೇಕಾಗಿದೆ ?

ರಮೇಶ--ಮುನ್ನೂರು ರೂಪಾಯಿ. ಇವೊತ್ತು ತರಲಿಕ್ಕೆ ಹೇಳಿದ್ದೆ. ನಿಮ್ಮ ಹತ್ತಿರ ಇದುವರೆಗೂ ಹೇಳಿಲ್ಲವೆಂದು ತೋರುತ್ತದೆ. ರೂಪಾಯಿ ಮನೆಯಲ್ಲಿದ್ದೀತೆ ?

ಜಾಲಪ—ಮುನ್ನೂರಲ್ಲವೆ, ನಾನೀಗಲೇ ತರುತ್ತೇನೆ.

ಎಂದವಳೇ ಜಾಲಪಳು ಪುನಃ ಟಾಂಗವನ್ನೇರಿ ಒಬ್ಬ ಸರಾಫನ ಬಳಿಗೆ ಹೋದಳು. ಅಲ್ಲಿ ತನ್ನ ಎಂಟುನೂರು ರೂಪಾಯಿಗಳ ಚಂದ್ರಹಾರವನ್ನು ನಾಲ್ಕುನೂರು ರೂಪಾಯಿಗಳಿಗೆ ಮಾರಿದಳು ಯಾವ ಹಾರವನ್ನವಳು ಅಷ್ಟು ಬಯಕೆಯಿಂದ ಕೊಂಡಿದ್ದಳೋ, ಬಾಲ್ಯದಿಂದಲೋ ಯಾವುದರ ಸಲುವಾಗಿ ಕಾತರಪಡುತ್ತಿದ್ದಳೋ, ಅಂಥ ಹಾರವನ್ನು, ಅದರ ಅಸಲುಬೆಲೆಯ ಅರ್ಧಕ್ಕೆ ಮಾರುವುದರಲ್ಲಿ ಅವಳಿಗೊಂದು ಗರ್ವಮಯ ಹರುಷದ ಅನುಭವವಾಗುತ್ತಿತ್ತು. ತಾನು ರೂಪಾಯಿ ಸಲ್ಲಿಸಿದೆನೆಂದು ರಮಾನಾಥನಿಗೆ ತಿಳಿದು ಬಂದಾಗ ಅವನಿಗೆಷ್ಟು ಆನಂದವಾಗಲಿಕ್ಕಿಲ್ಲ ? ರಮೇಶಬಾಬುಗಳಿಗೆ ಹಣವನ್ನು ಸಲ್ಲಿಸಿ ಮನೆಗೆ ಹೋದಳು

ನಾಲ್ಕು ಗಂಟೆಯವರೆಗೆ ಅವಳಿಗೆ ವಿಶೇಷ ಚಿಂತೆಯುಂಟಾಗಲಿಲ್ಲ. ಆದರೆ ಹಗಲು ಇಳಿಯುತ್ತ ಬಂದಂತೆ ಚಿಂತೆ ಏರುತ್ತಾ ಬಂದಿತು. ಯಾವಾಗ ಸಾಯಂಕಾಲವಾದರೂ, ರಮಾನಾಥನು ಬರಲಿಲ್ಲವೋ, ಆಗ ಅವಳ ಎದೆ ಗಾಬರಿಗೊಂಡಿತು. ದೀಪ ಹಚ್ಚುವ ಹೊತ್ತಾದರೂ ರಮಾನಾಥನಿಲ್ಲ. ಎಲ್ಲಿಯಾದರೂ ರತನಳ ಮನೆಯಲ್ಲಿರಬಹುದೆಂದು ಅಲ್ಲಿಗೆ ಹೋದಳು. ಅಲ್ಲಿಯೂ ಇಲ್ಲ. ಅಲ್ಲಿಂದ ರಮಾನಾಥನು ಸಂಚಾರಕ್ಕೆ ಹೋಗುತ್ತಿದ್ದ, ಎಲ್ಲ ಪಾರ್ಕು ಮೈದಾನುಗಳನ್ನೂ ಹುಡುಕಾಡಿ ನಿರಾಶೆಯಿಂದ ಮನೆಗೆ ಹಿಂತೆರಳಿದಳು.

ಕಚೇರಿಯ ಸಂಗತಿ ಅತ್ತೆಯ ಹತ್ತಿರ ಹೇಳಿದರೆ ಬೊಬ್ಬೆ ಹಾಕುತ್ತಿದ್ದ ರಾದುದರಿಂದ ಆ ವಿಷಯ ಅವರೊಡನೆ ಪ್ರಸ್ತಾಪಿಸಲೇ ಇಲ್ಲ. ಸೀದಾ ಮೇಲೆ ಹೋಗಿ ಮಲಗಿದಳು ಎದೆಯಲ್ಲಿ ಮುಳ್ಳೇಳುವಂತೆ ಅನುಭವವಾಯಿತು. ಇಲ್ಲದೆ, ತನ್ನಗೆಸ್ವ್ತುದ ಫಲವೆಂದು ಇಂದು ಮೊದಲ ಬಾರಿ ಆಕೆಯ ಮನವು ಒಪ್ಪಿಕೊಂಡಿತು. ಅವಳು ಆಭರಣಗಳಿಗಾಗಿ ಅಗ್ರಹ ಮಾಡಲಿಲ್ಲ ವೇನೋ ಹೌದು; ಆದರೆ ಸ್ಪಷ್ಟವಾಗಿ ಬೇಡವೆಂದೂ ಹೇಳಿರಲಿಲ್ಲ. ಮನಸ್ಸಿನ ಈ ದುರ್ಬಲ ಅವಸ್ಥೆಯಲ್ಲಿ ಜಾಲಪಳು ಕೊನೆಗೆ ತನ್ನ ಮೇಲೆ ಹೊರಲಾಗುವು

ದಕ್ಕಿಂತ ಹೆಚ್ಚಿನ ಭಾರವನ್ನು ಹಾಕಿಕೊಳ್ಳತೊಡಗಿದಳು. ತಾನು ಸ್ವತ: ಏಕೆ ಹಾಸುಗೆಯಿಂದ ಹೊರಗೆ ಕಾಲು ಚಾಚಿದೆ ? ದಿನಾಲೂ, ಅಡ್ಡಾಡುವುದಕ್ಕೆ ಸಖಿಯರನ್ನೆಲ್ಲಾ ಒಟ್ಟುಗೂಡಿಸಿ ಏಕೆ ಹೋಗುತ್ತಿದ್ದೆ ? ರಮಾನಾಥನು ಯುಪಕರ. ಸ್ವಭಾವಕ್ಕನುಸಾರವಾಗಿ ತನ್ನನ್ನು ಪ್ರಸನ್ನಳಿಸುರಿವುದಕ್ಕಾಗಿ ಏನೇನೋ ಮಾಡುತ್ತಿದ್ದನು ? ಹಾಗಿದ್ದೂ, ಅವಳವನನ್ನು ಬೇಡವೆಂದೇಕೆ ತಡೆಯಲಿಲ್ಲ ? ಆದಾಯಕ್ಕಿಂತ ಅಧಿಕವಾಗಿ ವ್ಯಯ ಮಾಡುವುದರ ಫಲವನ್ನು ಒಂದು ದಿನ ಉಣಬೇಕಾದೀತೆಂಬ ಅರಿವು ಆಕೆಗೆ ಈ ಮೊದಲು ಏಕೆ ಬರಲಿಲ್ಲ ?

ಮನೆಯವರೆಲ್ಲರೂ ಮಲಗಿದ್ದರು. ಜಾಲಪಳು ಚಿಂತಾಕ್ರಾಂತಳಾಗಿ ಕುಳಿತಿದ್ದಳು. ಇಡಿ ರಾತ್ರಿ ಕಳೆಯಿತು. ಬೆಟ್ಟದಂತಹ ರಾತ್ರಿ. ಒಂದೊಂದು ಕ್ಷಣವೂ ಒಂದೊಂದು ವರ್ಷಕ್ಕೆ ಸಮಾನ.

ಒಂದು ವಾರ ಕಳೆದರೂ ರಮಾನಾಥನ ಪತ್ತೆಯೇ ಇಲ್ಲ. ದಯಾನಾಥರು ಅವನು ಆತ್ಮಹತ್ಯೆ ಮಾಡಿಕೊಂಡನೆಂದೇ ನಂಬಿದ್ದರು. ಆದರೆ ಯಾರೊಡನೆಯೂ ಬಾಯಿ ಬಿಡುತ್ತಿದ್ದಿಲ್ಲ. ಅಂದರೆ ರಮಾನಾಥನು ಸುಮಾರು ಹನ್ನೊಂದು ಗಂಟೆಯ ಸಮಯಕ್ಕೆ ಸ್ಟೇಶನ್ನಿನ ಕಡೆಗೆ ಹೋಗುತ್ತಿದ್ದನೆಂಬುದಿಷ್ಟೇ ಅವನ ವಿಷಯ ತಿಳಿದು ಬಂದ ಸಂಗತಿ ಜಾಲಪಳನ್ನಂತೂ ಎಲ್ಲರೂ ದೋಷಿಯೆಂದೇ ನಿರ್ಧರಿಸಿದ್ದರು. ಅವಳ ದೆಸೆಯಿಂದಾಗಿಯೇ ಮಗನ ಪ್ರಾಣ ಹೋಯಿತೆಂದು ರಾಮೇಶ್ವರಿಯು ನೆಲಕ್ಕೆ ಕೈ ಬಡಿದು ಹೇಳುತ್ತಿದ್ದಳು. ಜಾಲಪಳಿಗಂತೂ ಅತ್ತತ್ತು ಕಣ್ಣುಗಳು ಊದಿಕೊಂಡಿದ್ದುವು. ರಮೇಶಬಾಬುಗಳೊಬ್ಬರೇ ಆಕೆಯ ತತ್ಪರತೆಯನ್ನೂ ಸದ್ಬುದ್ಧಿಯನ್ನೂ ಹೊಗಳುತಿದ್ದವರು.

ಒಂದು ದಿನ ದಯಾನಾಥರು ವಾಚನಾಲಯದಿಂದ ಮನೆಗೆ ಬಂದರು, ಮುಖವೆಲ್ಲ ಗಂಟಿಕ್ಕಿಕೊಂಡಿತ್ತು. ರಾಮೇಶ್ವರಿಯೊಡನೆ ಹೇಳುತ್ತಿದ್ದರು— ಇಲ್ಲಪ್ಪಾ, ಇಲ್ಲ. ಹೆಜ್ಜೆ ಹೆಜ್ಜೆಗೆ ತಗಾದೆ. ಎಷ್ಟು ಸಾಲ ಮಾಡಿಟ್ಟಿರುವನೋ ದೇವರೇ ಬಲ್ಲ. ನಾನಿವತ್ತು ಸ್ಪಷ್ಟವಾಗಿ ಹೇಳಿಬಿಟ್ಟೆ. ಯಾರಿಗೂ ಕೊಡುವವನಲ್ಲ, ಬೇಕಾದರೆ ಮೇಮ್ ಸಾಹೇಬರನ್ನು ಕೇಳಿರೆಂದು.

ಈ ಮಾತುಗಳು ಜಾಲಪಳ ಕಿವಿಗೂ ಬಿದ್ದುವು. ಅವಳೆಂದಳು ಸರಿ. ಅವರನ್ನೆಲ್ಲಾ ನನ್ನ ಬಳಿಗೇ ಕಳುಹಿಸಿರಿ. ಎಲ್ಲಾ ನಾನೇ ತೀರಿಸುವೆನೆಂತ

ಒಬ್ಬನಿಗೆ ಏಳ್ನೂರು ಕೊಡುವುದಿದೆ ಎಂದಿರಲ್ಲ ಅವನ ಬಳೆಯನ್ನೇ ಹಿಂದೆ ಕೊಡುವ ಅದರಲ್ಲೇನು ? ಹತ್ತೆಂಟು ರೂಪಾಯಿ ಕಡಮೆ ಬಂದೀತು. ಅಷ್ಟೇ ಅಲ್ಲವೆ ?

ಅಷ್ಟು ಹೊತ್ತಿಗೆ ರತನಳು ಬಂದಳು. ಜಾಲಪಳನ್ನು ಕಂಡೊಡನೆ ಹೇಳಿದಳು—ಏನು, ಇನ್ನೂ ಪತ್ತೆಯಾಗಲಿಲ್ಲವೆ ?

ಜಾಲಪ—ಇಲ್ಲಕ್ಕಾ ಇಲ್ಲ.

ರತನ—ನಿನಗೂ ಅವರಿಗೂ ಮಾತುಕತೆಯೇನೂ ನಡೆಯಲಿಲ್ಲವಷ್ಟೆ ?

ಜಾಲಪ—ಪ್ರಮಾಣ ಮಾಡಿ ಹೇಳುತ್ತೇನೆ. ಹಾಗೇನೂ ಇಲ್ಲ. ಅವರೊಂದು ಸೂಚನೆ ಕೊಟ್ಟಿದ್ದರೆ ನಾನವರಿಗೆ ರೂಪಾಯಿ ಕೊಡುತ್ತಿದ್ದೆ.

ರತನ—ತಿಳಿಯಿತು. ಯಾರ ಮೇಲೋ ಕಣ್ಣು ಬಿದ್ದಿರಬೇಕು. ನೋಡು, ನಾನು ಹೇಳಿದ ಮಾತು ಸತ್ಯವಲ್ಲವಾದರೆ ನೀನು ಕೇಳಿದ್ದನ್ನು ಕೊಟ್ಟೇನು. ಇನ್ನು ಹತ್ತು ದಿನಗಳಲ್ಲಿ ಬಾರದೆ ಎಲ್ಲಿಗೆ ಹೋಗುವರು ?

ಜಾಲಪ—ಅದನ್ನು ನಾನು ನಂಬಲಾರೆ. ಅವರಲ್ಲಿ ಬೇರಾವ ದೋಷಗಳೂ ಇದ್ದಿರಬಹುದು. ಆದರೆ ಇದಕ್ಕೆ ಮಾತ್ರ ನಾನು ಸಮ್ಮತಿಸಲಾರೆ.

ರತನ—ಹಾಗಾದರೆ ನಿನಗೆ ಗೊತ್ತಿಲ್ಲ. ಗಂಡಸರ ಜಾತಿ ಈ ಕಲೆಯಲ್ಲಿ ಬಹಳ ನಿಪುಣರು.

ಜಾಲಪ—ಅವರು ಆ ಕಲೆಯಲ್ಲಿ ನಿಪುಣರಾದರೆ ನಾವು ಹೃದಯ ಪರೀಕ್ಷೆಯಲ್ಲಿ ಕಡಮೆ ನಿಪುಣರಲ್ಲ. ನಾನೊಪ್ಪಲಾರೆ. ಅವರು ನನ್ನ ಸ್ವಾಮಿಯಾಗಿದ್ದರೆ ನಾನವರ ಸ್ವಾಮಿನಿಯಾಗಿದ್ದೆ.

ರತನ—ಇರಲಿ ಬಿಡು, ಹೊರಗೆ ಅಡ್ಡಾಡಿಕೊಂಡು ಬರೋಣವಂತೆ.

ಜಾಲಪ—ಬೇಡವಮ್ಮ ಬೇಡ—ನಾನು ಬರಲಾರೆ. ಹೀಗಿದ್ದೆ ಮನೆಯವರು ಜೀವ ಹಿಂಡುತ್ತಾರೆ. ಇನ್ನು ತಿರುಗಾಟಕ್ಕೆ ಹೊರಟೆನೆಂದರೆ ಮುಗಿಯಿತು. ಎಲ್ಲಿಗಾದರೂ ಹೋಗಬೇಕಾಗಿದೆಯೆ ?

ರತನ—ನಿನ್ನ ಕೈಯಲ್ಲಿರುವಂತಹ ಬಳೆಗಳನ್ನು ಕೊಳ್ಳಬೇಕಾಗಿದೆ.

ಜಾಲಪ—ಯಾಕೆ, ನನ್ನದನ್ನೆ ನಾನು ಕೊಡುತ್ತಿದ್ದೇನಲ್ಲ ?

ರತನಳು ಸಂತೋಷದಿಂದ ಹಾರಿ ಹೇಳಿದಳು—ನಿನ್ನದು ಸಿಕ್ಕಿದರೆ ನನ್ನ ಭಾಗ್ಯವನ್ನೇನು ಹೇಳುವುದು ? ಆರುನೂರಲ್ಲವೆ ಅವಕ್ಕೆ ಬಿದ್ದದ್ದು ?

ಜಾಲಪ—ಹೌದು, ನಿನ್ನ ಸಲುವಾಗಿ ಅವನ್ನು ಕೊಟ್ಟು ಬಿಡುತ್ತೇನೆ.

ರತನ— ಹೀಗಾದರೆ ಪೂರಾ ಹಣ ಈಗ ಸಿಗುವುದಿಲ್ಲ. ಈ ನಾಲ್ನೂರು ರೂಪಾಯಿಗಳಿರಲಿ ಉಳಿದುದನ್ನು ಆಮೇಲೆ ಕೊಡುತ್ತೇನೆ

ಜಾಲಪಳು ಬಳೆಯ ಪೆಟ್ಟಿಗೆಯನ್ನು ಅವಳಿಗೆ ಕೊಡುವುದಕ್ಕೆ ತೆಗೆದಾಗ ಅವಳ ಹೃದಯ ಒಡೆದಂತಾಯಿತು. ರಮಾನಾಥನು ಈ ಬಳೆಗಳನ್ನು ಅವಳ ಕೈಯಲ್ಲಿ ಕಂಡು ಎಷ್ಟು ಸಂತೋಷಪಡುತ್ತಿದ್ದನು! ಇಂದವನು ಇದ್ದಿದ್ದರೆ ಈ ಒಡವೆಯು ಹೀಗೆಯೆ ಜಾಲಪಳ ಕೈ ಬಿಡುತ್ತಿತ್ತೆ? ಯಾರಿಗೆ ಗೊತ್ತು, ಇನ್ನು ಬಳೆಯನ್ನು ಕೊಡುವ ಸೌಭಾಗ್ಯ ಆಕೆಗೆ ಇದೆಯೋ, ಇಲ್ಲವೊ? ಅವಳೆಷ್ಟು ಒತ್ತಿ ಹಿಡಿದರೂ ಕಣ್ಣಲ್ಲಿ ನೀರು ತುಂಬಿ ಬಂದಿತು.

ರತನಳು ಅವಳ ಕಣ್ಣೀರನ್ನು ಕಂಡು ಹೇಳಿದಳು—ಈಗ ನಿನ್ನ ಹತ್ತಿರವೇ ಇರಲಿ ತಂಗೀ, ಮತ್ತೆಂದಾದರೂ ಕೊಂಡು ಹೋಗುವೆನು.

ಜಾಲಪಳು ಅವಳ ಕಡೆಗೆ ಪೆಟ್ಟಿಗೆಯನ್ನು ನೀಡಿ ಹೇಳಿದಳು—ಯಾಕೆ, ನನ್ನ ಕಣ್ಣೀರನ್ನು ನೋಡಿ ಹಾಗೆನ್ನುವಿಯಾ? ನಿನ್ನ ಸಲುವಾಗಿ ಕೊಡುತ್ತಿರುವೆನಲ್ಲದೆ ಅನ್ಯ ಇಲ್ಲ. ಇಲ್ಲವಾದರ ನನ್ನ ಪ್ರಾಣಕ್ಕಿಂತ ಪ್ರಿಯವಾದ ವಸ್ತುವನ್ನು ಯಾರಿಗಾದರೂ ಕೊಡುತ್ತೇನೆಯೆ? ಇರಲಿ. ತಂಗೀ, ದಿನಾಲೂ ಒಂದೆರಡು ತಾಸು ಇಲ್ಲಿಗೆ ಬರುತ್ತಿರು. ಸ್ವಲ್ಪ ಮನಸ್ಸಿಗೆ ಸಮೃದ್ಧಿಯುಂಟಾಗುವುದು. ಏನೋ ಆಗುವುದೆಲ್ಲ ಆಯಿತು. ಆದರೂ ಅವರು ನನಲ್ಲಿಷ್ಟು ಸಂಕೋಚವೇತಕ್ಕೆ ಮಾಡಿದರೋ ತಿಳಿಯದು. ಇರಬಹುದು. ನನ್ನಲ್ಲಿ ಯಾವುದೋ ಒಂದು ವಿಷಯವನ್ನು ಕಂಡು ಅವರು ಹೀಗೆ ಮಾಡಿದ್ದರಬಹುದು. ಆವರ ನಿಜವಾದ ಸ್ನೇಹವನ್ನು ಸಂಪಾದಿಸಲಾರೆನಾದೆನಲ್ಲ, ಎಂಬುದೊಂದೇ ನನ್ನ ದುಃಖವಲ್ಲದೆ ಬೇರೆ ಇಲ್ಲ. ನಮಗೆ ಪ್ರೇಮವಿದ್ದವರೊಡನೆ ನಾವು ಭೇದ ಮಾಡುತ್ತೇವೆಯೆ?

ಜಾಲಪಳು ಎಷ್ಟು ಒತ್ತಾಯ ಪಡಿಸಿದರೂ, ರತನಳು ಆ ದಿನ ಬಳೆಗಳನ್ನೊಯ್ಯಲಿಲ್ಲ. ಅವಳು ಹೋದಮೇಲೆ ಜಾಲಪಳು ಐನೂರು ರೂಪಾಯಿಗಳನ್ನು ತಂದು ದಯಾನಾಥರ ಮುಂದಿಟ್ಟು ಹೇಳಿದಳು— ಇಗೊಳ್ಳಿ, ಇದನ್ನು ನಾರಾಯಣದಾಸರಲ್ಲಿ ಕಳಿಸಿರಿ.

ದಯಾನಾಥರು ನಾಚುತ್ತ ಹೇಳಿದರು—ರೂಪಾಯಿಗಳು ಎಲ್ಲಿ ಸಿಕ್ಕಿವವು ?

ಜಾಲಪ—ಬಳೆಗಳನ್ನು ರತನಳಿಗೆ ಮಾರಿಬಿಟ್ಟೆ.

ದಯಾನಾಥರು ಅವಳ ಮುಖವನ್ನೆ ದಿಟ್ಟಿಸತೊಡಗಿದರು ಮಾತ್ರ.

ಹೀಗೆ ಒಂದು ತಿಂಗಳ ಕಾಲ ಉರುಳಿತು. ಪತ್ತೆ ಹಚ್ಚಿಕೊಟ್ಟವರಿಗೆ ಐನೂರು ರೂಪಾಯಿ ಇನಾಮೆಂದು ವೃತ್ತಪತ್ರಗಳಲ್ಲಿ ಪ್ರಚಾರಿತವಾಗಿದ್ದರೂ ಎಲ್ಲಿಂದಲೂ ಸುದ್ದಿ ಇದ್ದಿರಲಿಲ್ಲ. ಜಾಲಪಳು ದಿನಕಳೆದಂತೆ ಕ್ಷೀಣಳಾಗುತ್ತಿದ್ದಳು. ದಯಾನಾಥರು ಸಹಿಸದೆ ಕೊನೆಗೆ ಕೆಲದಿನಗಳ ಮಟ್ಟಿಗಾದರೂ ವಧುವನ್ನು ಮನೆಗೆ ತಂದುಕೊಳ್ಳಬೇಕೆಂದು ದೀನದಯಾಳರಿಗೆ ಬರೆದರು. ದೀನದಯಾಳರು ಬಂದು ಮಗಳ ದಶೆಯನ್ನು ನೋಡಿ ಕಂಗೆಟ್ಟರು.

ಜಾಲಪಳು ' ನನಗೆ ಇಲ್ಲಿ ಯಾವ ಕಷ್ಟವೂ ಇಲ್ಲ. ಸುಖವಾಗಿದ್ದೇನೆ. ನಿಮ್ಮ ದಯೆಯಿಂದ ಯಾವುದಕ್ಕೂ ಕಡಿಮೆಯಿಲ್ಲ ' ಎಂದಳು.

ದಯಾನಾಥ ರಾಮೇಶ್ವರಿ ಎಲ್ಲರೂ ಸಂತೈಸಿದರು. ಕೊನೆಗೆ ದಯಾನಾಥರು ಸಿಟ್ಟುಗೊಂಡೆಂದರು—ದಿನವೆಲ್ಲ ಇಲ್ಲಿ ಅಳುತ್ತಾ ಕೂತಿರುವುದಕ್ಕಿಂತ, ಎರಡು ದಿನ ಅಲ್ಲಿದ್ದು ಬಂದರೆ ಒಳಿತಲ್ಲವೆ ?

ಜಾಲಪ—ಅದೇನು ಹೊಸಲೋಕವೆ? ಅಲ್ಲಿಗೆ ಹೋಗಿ ನಾನು ಹೊಸಬಳಾಗುವುದಿಲ್ಲವೆಂಬುದು ಖಂಡಿತ. ಎಂದ ಮೇಲೆ ಅಲ್ಲೇನು ? ಅಳುವುದಕ್ಕೆ ನಾನೇಕೆ ಹೆದರಬೇಕು ? ನಗುವ ಕಾಲವಿದ್ದಾಗ ನಕ್ಕೆನು, ಈಗ ಅಳುವ ಸಮಯ ಬಂದಿದೆ. ಅಳಬಾರದೆ? ಅವರು ಬೇಕಾದರೆ ನೂರು ಹರದಾರಿ ದೂರದಲ್ಲೇ ಇರಲಿ, ನನಗವರು ಇಲ್ಲೇ ಕುಳಿತಿರುವಂತೆ ಕಾಣುವುದು. ಸ್ವಯಂ ಅವರೇ ಇಲ್ಲದಿದ್ದರೂ, ಇಲ್ಲಿಯ ಒಂದೊಂದು ವಸ್ತುವಿನಲ್ಲಿಯೂ ಅವರು ಇದ್ದಾರೆ. ಈ ಮನೆಯನ್ನು ಬಿಟ್ಟೆನಾದರೆ ನಾನು ಹುಚ್ಚಿಯಾದೇನು.

ಈ ಅಭಿಮಾನಿನಿಯು ತನ್ನ ಹಟವನ್ನು ಬಿಡಲೊಲ್ಲಳೆಂದು ದೀನದಯಾಳರಿಗೆ ತಿಳಿಯಿತು. ಹೊರಡುವ ಕಾಲಕ್ಕೆ ಐವತ್ತು ರೂಪಾಯಿಗಳನ್ನು ಜಾಲಪಳ ಕಡೆಗೆ ನೀಡಿ ಹೇಳಿದರು—ಇದನ್ನಿರಿಸಿಕೊ. ಸಮಯ ಬಂದಾಗ ಉಪಯೋಗಕ್ಕೆ ಬಿದ್ದೀತು.

ಜಾಲಪ—ತಂದೆ, ಬೇಡ, ನನಗಿದು ಅವಶ್ಯವಿಲ್ಲ. ನಿಮ್ಮ ಆಶೀರ್ವಾದವೊಂದಿದ್ದರೆ ಅದೇ ನನಗೆ ಸಾಕು. ಆದರಿಂದಲೇ ಸಣ್ಣ ಕಲ್ಯಾಣವಾದರೂ ಆಗಬಹುದು

ದೀನದಯಾಳರು ಕಣ್ಣಲ್ಲಿ ನೀರು ತುಂಬಿ, ನೋಟನ್ನಲ್ಲಿಯೇ ಮಂಚದ ಮೇಲಿಟ್ಟು ಎದ್ದು ಹೊರಗೆ ಹೋದರು.

ಆಶ್ವಿನದ ತಿಂಗಳು ಹಿಡಿದಾಗಿತ್ತು. ಜಲವಿಹೀನ ಮೇಘಳ ತುಣುಕುಗಳು ಆಗಸದಲ್ಲಿ ಅತ್ತಿತ್ತ ಅಲೆದಾಡುತ್ತಿವೆ. ಜಾಲಪಳು ಮಹಡಿಯ ಮೇಲಿಂದ ಅವುಗಳ ಆಟವನ್ನು ನೋಡುತ್ತಿರುತ್ತಾಳೆ. ಚಿಂತಾವ್ಯಥಿತ ಪ್ರಾಣಿಗಳಿಗೆ ಇದಕ್ಕೂ ಮಿಗಿಲಾದ ಮನೋರಂಜನೆಯ ಸಾಮಾಗ್ರಿ ಇನ್ನಾವುದಿದೆ? ಮೋಡಗಳ ತುಣುಕುಗಳು ಆಗಾಗ ಬಣ್ಣ ಬದಲಿಸುತ್ತಿವೆ; ರೂಪ ಬದಲಿಸುತ್ತಿವೆ. ಒಮ್ಮೆ ಪ್ರೇಮದಿಂದ ಒಂದಾಗುತ್ತವೆ, ಮರುಕ್ಷಣ ಸಿಟ್ಟಿನಿಂದ ದೂರವಾಗುತ್ತವೆ, ಒಮ್ಮೆ ಓಡುತೊಡಗುತ್ತವೆ, ಇನ್ನೊಮ್ಮೆ ಕಾಲು ಕೀಲಿಸಿದಂತೆ ನಿಂತುಬಿಡುತ್ತವೆ. ರಮಾನಾಥನು ಸಹ ಈ ಮೇಘಕ್ರೀಡೆಯನ್ನು ಎಲ್ಲಿಂದಲಾದರೂ ನೋಡುತ್ತಿರಬಹುದೆಂದು ಜಾಲಪಳು ಪದೇ ಪದೇ ಯೋಚಿಸುತ್ತಿದ್ದಳು ಈ ಯೋಚನೆಯೇ ಅವಳಿಗೆ ಆನಂದವನ್ನು ನೀಡುತಿತ್ತು. ತೋಟಿಗನೊಬ್ಬನಿಗೆ ತಾನು ಹಚ್ಚಿದ ಗಿಡಗಳ ಮೇಲೆ ಎಷ್ಟು ಮಮತೆಯಿರುವುದೋ, ಮಗುವಿಗೆ ತಾನು ಕಟ್ಟಿದ ಆಟದ ಮನೆಯ ಮೇಲೆ ಎಷ್ಟು ಒಲ್ಮೆಯಿರುವುದೋ, ಅಷ್ಟೇ ಮಮತೆ ಜಾಲಪಳಿಗೆ ಈ ಆಕಾಶಗಾಮಿ ಜೀವಗಳನ್ನು ಕಂಡಾಗ ಉಂಟಾಗುತಿತ್ತು. ವಿಪತ್ತಿನ ಸಮಯ ನಮ್ಮ ಮನಸ್ಸು ಅಂತರ್ಮುಖಿಯಾಗುವುದು. ತಾನು ಮಾಡಿದ ಪಾಪಕರ್ಮಗಳ ದಂಡನೆಯನ್ನು ತಾನೀಗ ಅನುಭವಿಸುತ್ತಿದ್ದೇನೆಂದು ಜಾಲಪಳು ಶಂಕಿಸುತ್ತಿದ್ದಳು! ಪತಿಯು ಬಡವರ ಕೊರಳನ್ನು ಕುಯ್ದು ತಂದ ಹಣದಿಂದ ಮಾಡಿಸಿದ ಒಡವೆಗಳನ್ನು ಕಂಡರೆ ಅವಳಿಗೀಗ ಸ್ವಲ್ಪವೂ ಸೇರುತ್ತಿದ್ದಿಲ್ಲ. ಇವುಗಳ ದೆಸೆಯಿಂದಲೇ ಅಲ್ಲವೆ ರಮಾನಾಥನು ವಿದೇಶದ ಹಾದಿ ಹಿಡಿಯಬೇಕಾಗಿ ಬಂದದು?

ಒಂದು ದಿನ ಅವಳು ಆ ವಿಲಾಸದ ಸಾಮಗ್ರಿಗಳನ್ನೆಲ್ಲ ಗಂಟು ಕಟ್ಟಿದಳು. ಮಖಮಲ್ಲಿನ ಸ್ಲಿಪರ್, ಪಿನ್, ಬಾಚಣಿಗೆ, ಕನ್ನಡಿ ಇತ್ಯಾದಿ ಸರಿ, ಒಂದು ದೊಡ್ಡ ಮೂಟೆಯೇ ಆಯಿತು. ಅವಳು ಇಂದು ಈ ವಸ್ತುಗಳನ್ನು

ಗಂಗಾಜಿಯಲ್ಲಿ ಮುಳುಗಿಸುವಳು, ಹೊಸ ಬಾಳ್ವೆಯ ಸೂತ್ರಪಾತವನ್ನು ಮಾಡುವಳು. ಮಾಯೂಜಾಲವನ್ನು ನಾಶಗೈದು ಬಿಡುವಳು. ನಟ್ಟಿರುಳ ತನಕವೂ ಕೆಲಸ ಸಾಗಿತ್ತು—ವಸ್ತುಗಳನ್ನೆಲ್ಲಾ ಒಂದೊಂದಾಗಿ ತೆಗೆದಿಡುವ ಕೆಲಸ. ಇವಳ ಈ ಕಸುಬನ್ನು ನೋಡಿದರೆ ಎಲ್ಲಿ ಯಾತ್ರೆಗೆ ಹೊರಡುತ್ತಿರುವಳೋ ಎಂದು ತೋರುತ್ತಿತ್ತು. ಹೌದು, ವಾಸ್ತವಕ್ಕೂ ಇದೊಂದು ಯಾತ್ರೆಯಲ್ಲವೇನು ?—ಕತ್ತಲಿಂದ ಬೆಳಕಿಗೆ, ಮಿಥ್ಯೆಯಿಂದ ಸತ್ಯಕ್ಕೆ.

ನಾಲ್ಕು ಗಂಟೆ ಹೊಡೆದು ಜನರು ದಾರಿಯಲ್ಲಿ ಹೋಗುವ-ಬರುವ ಸದ್ದು ಕೇಳಿಸಲಾರಂಭಿಸಿದೊಡನೆ ಜಾಲಪಳು ಬ್ಯಾಗ ಹಿಡಿದುಕೊಂಡು ಗಂಗಾಸ್ನಾನಕ್ಕೆ ಹೊರಟಳು. ಬ್ಯಾಗ್ ಬಹಳ ಭಾರವಿದ್ದುದರಿಂದ ತುಸು ದೂರ ಹೋಗುವಷ್ಟರಲ್ಲೇ ಕೈಗಳು ಸೋತುವು. ಬೆನ್ನ ಮೇಲಿರಿಸಿಕೊಂಡು ನಡೆದಳು. ಟಾಂಗದವರು ಕೂಗಿ ಕೂಗಿ ಕರೆಯುತ್ತಿದ್ದರೂ, ಅವಳು ಅತ್ತ ಕಡೆ ಕಿವಿಗೊಡುತ್ತಿರಲಿಲ್ಲ. ಯಾರೂ ಗುರುತು ಹಿಡಿಯಬಾರದೆಂದು ಮುಖಕ್ಕೆ ಮುಸುಕೆಳೆದುಕೊಂಡಿದ್ದಳು. ಸ್ನಾನಘಟ್ಟಕ್ಕೆ ಸಮೀಪಿಸುವಷ್ಟು ಹೊತ್ತಿಗೆ ನಸುಕು ಹರಿದು ಬೆಳ್ಳಗೆ ಬೆಳಗಾಗಿತ್ತು. ಸಹಸಾ ಅವಳಿಗೆ ರತನಳು ಮೋಟರಿನಲ್ಲಿ ಬರುತ್ತಿರುವುದು ಕಂಡಿತು. ರತನಳು ದೂರದಿಂದಲೇ ಆಕೆಯ ಗುರುತು ಹಿಡಿದು ಕೇಳಿದಳು—ತಂಗೀ, ಇದೆಲ್ಲಿಗೆ ಹೊರಟಿರುವಿ ? ಬೆನ್ನ ಮೇಲೆ ಬ್ಯಾಗ್ ಏತರದು ?

ಜಾಲಪ—ಗಂಗಾಸ್ನಾನಕ್ಕೆ ಹೊರಟಿದ್ದೇನೆ.

ರತನಳು ಒತ್ತಾಯದಿಂದ ಅವಳನ್ನು ಕಾರಿನಲ್ಲಿ ಕೂರಿಸಿದಳು. ಕುತೂಹಲವಶಳಾಗಿ ಆ ಬ್ಯಾಗಿನಲ್ಲೇನಿರಬಹುದೆಂದು ತೆರೆದು ನೋಡಿದಳು. ಬೆಕ್ಕಸ ಬೆರಗಾದಳು !

'ಇದೇನು ತಂಗೀ, ನಿನಗೆ ಹುಚ್ಚು ಹಿಡಿದಿರುವುದೆ ? ಮನೆಯ ಕಡೆಗೆ ಹೋಗಿ ಇವನ್ನು ಅಲ್ಲಿರಿಸಿ ಬರೋಣವಂತೆ.'

ಜಾಲಪಳು ದೃಢತೆಯಿಂದ ಹೇಳಿದಳು—ಆಗದು; ಅಕ್ಕಾ, ನಾನಿವನ್ನು ಗಂಗೆಯಲ್ಲಿ ಮುಳುಗಿಸಿಯೇ ಮನೆಗೆ ಹೋಗುವೆನು.

ರತನ—ಅದೇಕೆ ? ಹೇಳು.

ಜಾಲಪ—ನಿನಗೆ ಇಷ್ಟನ್ನೂ ತಿಳಿದುಕೊಳ್ಳುವ ಸಾಮರ್ಥ್ಯವಿಲ್ಲವೆ? ಈ ವಸ್ತುಗಳಿಂದ ನನಗಿನ್ನೇನಾಗಬೇಕಾಗಿದೆ? ನೋಡುವವರಿಲ್ಲವಾದ ಬಳಿಕ, ಇವುಗಳನ್ನಿಟ್ಟುಕೊಂಡು ಫಲವೇನು?

ರತನ—ಜಾಲಪಾ, ನಿನ್ನ ಪತಿದೇವನು ಈ ವಸ್ತುಗಳನ್ನು ಎಷ್ಟು ಉತ್ಸಾಹದಿಂದ ತಂದಿರುವನು! ನಿನ್ನ ಅಂಗಗಳಲ್ಲಿ ಇವು ಶೋಭಿಸುವುದನ್ನು ಕಂಡು ಹೇಗೆ ಪ್ರಸನ್ನನಾಗುತ್ತಿದ್ದನು? ಒಂದೊಂದು ಒಡವೆಯೂ ರಮಾನಾಥರ ಪ್ರೇಮದ ನೆನಹನ್ನು ಸಾರತಕ್ಕವು. ಹೀಗಿರುವಾಗ ನೀನು ಇವನ್ನು ನೀರಿಗೆಸೆದು ಪತಿಪ್ರೇಮವನ್ನು ಎಷ್ಟು ಅನಾದರಿಸುತ್ತಿರುವೆಯೆಂಬುದರ ಅರಿವಾದರೂ ನಿನಗಿವೆಯೆ? ಸುಮ್ಮನೆ ಹುಚ್ಚಿಯಂತೆ ವರ್ತಿಸಬೇಡ.

ಜಾಲಪಳು ತುಸು ಹೊತ್ತು ವಿಚಾರಮಗ್ನಳಾಗಿದ್ದು, ಮತ್ತೆ ಸಾವರಿಕೊಂಡು ಎಂದಳು—ಹಾಗಲ್ಲಕ್ಕಾ,. ಇವೇ ನನ್ನ ವಿಪತ್ತಿನ ಗ್ರಂಥಿಗಳು. ಇವು ಪ್ರೇಮ ಸ್ಮೃತಿಗಳಲ್ಲ. ಆ ಪ್ರೇಮವು ನನ್ನ ಹೃದಯಾವಲ್ಲಿ ಅಂಕಿತವಾಗಿರುವುದು.

ರತನ—ಎಷ್ಟು ಕಠಿಣ ಹೃದಯಿಯೇ ನೀನು?

ಜಾಲಪ—ಅದೇನೇ ಇರಲಿ, ಅವರು ನನ್ನ ವಿಷಯದಲ್ಲಿ ಬಹು ದೊಡ್ಡ ಅನ್ಯಾಯವೆಸಗಿರುವರು. ಮುಚ್ಚುಮರೆಯಿಲ್ಲದೆ ಒಂದು ಸಂಗತಿಯನ್ನಾದರೂ ಅವರು ನನ್ನೊಡನೆ ಹೇಳಿದ್ದರೆ........

ರತನ—ನೀನೇನು ಮುಚ್ಚುಮರೆ ಇಲ್ಲದೆ ವರ್ತಿಸಿದೆಯಾ? ಇಲ್ಲ. ನಾನು ನಂಬಲಾರೆ ನಿನ್ನ ಮನಸ್ಸಿನೊಳಗೂ ಕಳ್ಳನಿದ್ದಿರಬೇಕು. ಏನನ್ನುವೆ?

ಜಾಲಪ—ಇಲ್ಲವಮ್ಮಾ ಇಲ್ಲ, ನನ್ನ ಮನಸ್ಸಿನಲ್ಲಿ ಅಂಥಾದ್ದೇನೂ ಇರಲಿಲ್ಲ.

ರತನ—ಸುಳ್ಳು, ಪೂರಾ ಸುಳ್ಳು.

ಕಪಟದ ಮೂಲವು ತನ್ನಿಂದಲೇ ಆರಂಭವಾಗಿತ್ತೆಂದು ಜಾಲಪಳಿಗೆ ಇಂದು ಜ್ಞಾತವಾಯಿತು.

ಗಂಗೆಯ ತಡಿ ಬಂದಿತು. ರತನಳು ಕೊನೆಯ ಬಾರಿ ಬೇಡಿಕೊಂಡಳು—ಇರಲಿ, ತಂಗೀ ನನ್ನ ಮೇಲೆ ದಯೆದೋರಿಯಾದರೂ ಬ್ಯಾಗನ್ನು ನೀರಿಗೆಸೆವ ಹವ್ಯಾಸವನ್ನು ತೊರೆ.

ಜಾಲಪ—ಅಕ್ಕಾ, ನಿನ್ನ ಕಾಲು ತೊಳೆಯಲೂ ನಾನು ಸಿದ್ಧಳಿರುವೆ. ಆದರೆ ಈ ಕಂಟಕವನ್ನು ನನ್ನ ಹೃದಯದಲ್ಲಿರಿಸಿಕೊಂಡಿರಲಾರೆ.

ರತನಳು ವಿರಕ್ತಿಯಿಂದ ಮೊಗದಿರುಹಿದಳು. ಜಾಲಪಳು ತನ್ನ ಕರ್ತವ್ಯವನ್ನು ನೆರವೇರಿಸಿದಳು. ಆಗ ಅವಳಿಗುಂಟಾದನಿತು ಆನಂದವು ಅವು ಗಳನ್ನು ಪಡೆವಾಗಲೂ ಆಗಿದ್ದಿಲ್ಲ. ಅಲ್ಲಿ ಆಗ ಅಸಂಖ್ಯಾತ ಜನರು ಸ್ನಾನ ಮಾಡುತ್ತಿದ್ದರಾದರೂ, ಅವರಲ್ಲಿ ಯಾರ ಹೃದಯದಲ್ಲೂ ಜಾಲಪಳಿಗಾ ದಷ್ಟು ಪ್ರಕಾಶದ ಅನುಭವವಾಗಿರಲಿಕ್ಕಿಲ್ಲ. ಪ್ರಭಾತಕಾಲದ ಸ್ವರ್ಣಮಯ ದಿವ್ಯಜ್ಯೋತಿಯು ಅವಳ ಹೃದಯಕುಹರವನ್ನು ಹೊಕ್ಕು ರೋಮ ರೋಮ ವನ್ನೂ ವ್ಯಾಪಿಸಿಕೊಂಡಿತು.

## ೨೩

ರಮಾನಾಥನು ಕಲಕತ್ತೆಗೆ ಬಂದು ಎರಡು ತಿಂಗಳಾದುವು; ಅವನಿನ್ನೂ ದೇವೀದೀನನ ಮನೆಯಲ್ಲೇ ಬಿದ್ದುಕೊಂಡಿರುವನು. ತಲೆಯಲ್ಲಿ ಯಾವಾಗಲೂ ಒಂದೇ ಯೋಚನೆ—ಹಣವನ್ನೆಲ್ಲಿಂದ ತರುವುದು ? ತರತರದ ಗಾಳಿಗೋಪು ರಗಳನ್ನು ಕಟ್ಟುವನು, ಬಗೆಬಗೆಯ ಕಲ್ಪನೆಗಳಲ್ಲಿ ವಿಹರಿಸುವನು; ಆದರೆ ಮನೆಯಿಂದ ಹೊರ ಬರುವಂತಿಲ್ಲ. ಹಾ, ಚೆನ್ನಾಗಿ ಕತ್ತಲಾದ ಬಳಿಕ ಆ ಕೇರಿಯಲ್ಲಿದ್ದೊಂದು ವಾಚನಾಲಯಕ್ಕೆ ಹೋಗಿ ತನ್ನ ಊರಿನ ಸಮಾಚಾ ರಗಳನ್ನೋದುವನು. ದಯಾನಾಥರು ಪತ್ರಿಕೆಗಳಲ್ಲಿ ಅಚ್ಚು ಹಾಕಿಸಿದ ಆ ನೋಟಿವನ್ನೂ ಕಂಡನು; ಆದರೆ ಅವನಿಗೆ ವಿಶ್ವಾಸವಾಗಲಿಲ್ಲ. ಇದೂ ಪೋಲೀಸರ ಒಂದು ಕುಯುಕ್ತಿಯಾಗಿರಬಾರದೇಕೆ ? ರೂಪಾಯಿಗಳು ಸಲ್ಲುವುದೆ ? ಯಾರಿಂದ ? ಹೇಗೆ ? ಛಿ, ಅಸಂಭವ !

ಒಂದು ದಿವಸ ಅದೇ ಪತ್ರದಲ್ಲಿ ಜಾಲಪಳು ಪ್ರಕಟಿಸಿದ್ದ ಇನ್ನೊಂದು ನೋಟೀಸಿದ್ದಿತು. ಬಹಳ ಆಗ್ರಹಪೂರ್ವಕವಾಗಿ ಎಲ್ಲಿದ್ದರೂ ಮನೆಗೆ ಬರಬೇ ಕೆಂದು ಬೇಡಿದ್ದಳು. ‘ ನಿಮ್ಮ ಲೆಕ್ಕಗಳೆಲ್ಲಾ ತೀರಿ ತೀರಿಹೋಗಿವೆ. ನಿಮಗೆ ಯಾರೂ ಏನೂ ಹೇಳುವುದಿಲ್ಲ. ’ ವೆಂದು ಬರೆದಿದ್ದಳು. ಇದನ್ನೋದಿ ರಮಾ ನಾಥನ ಮನಸ್ಸು ಚಂಚಲವಾಯಿತು. ‘ಇದಾದರೂ ಪೋಲೀಸರ ಕುಹಕವೇ

ಸರಿ; ಜಾಲಪಳೀ ಈ ಪತ್ರ ಬರೆದಳೆಂಬುದಕ್ಕೆ ಪ್ರಮಾಣವೇನು? ಇರಲಿ, ಮನೆಯವರೇ ರೂಪಾಯಿಗಳನ್ನು ತುಂಬಿಸಿದ್ದರೂ, ಅವನು ಈ ತನ್ನ ಸ್ಥಿತಿಯಲ್ಲಿ ಅತ್ತಕಡೆ ತೆರಳಬಲ್ಲನೆ? ಪಟ್ಟಣದಲ್ಲೆಲ್ಲಾ ಹಾಳು ಹೆಸರು ಹಡಿಯಾಯಿತು. ಪೋಲೀಸರಿಗೂ ಗೊತ್ತಾಗದಿರದು. ಆದ್ದರಿಂದ ಅವನು ಹೋಗುವುದಿಲ್ಲವೆಂದೇ ನಿರ್ಧರಿಸಿದನು. ಕಡಮೆಯೆಂದರೆ ಹತ್ತು ಸಾವಿರವಾದರೂ ಕೈಯಲ್ಲಾಗಬೇಕು. ಆಮೇಲೆ ಹಿಂತೆರಳುವ ವಿಚಾರ. ಎಲ್ಲಾದರೂ ರೂಪಾಯಿಗಳು ಸಲ್ಲದ್ದಿದ್ದು, ಪೋಲೀಸರು ನನ್ನನ್ನು ಹುಡುಕುತ್ತಿರುವುದು ನಿಜವಾದರೆ, ಮನೆಗೆ ಹೋಗುವುದೇ ಸುಳ್ಳು. ಇಲ್ಲ, ಎಂದೆಂದಿಗೂ ಇಲ್ಲ.

ದೇವೀದೀನನ ಮನೆಯ ಮೇಲಿನ ಕೊಠಡಿಯಲ್ಲಿ ರಮಾನಾಥನು ಇಳಿಕೊಂಡಿದ್ದನು. ರಾತ್ರಿಸಮಯ ದೇವೀದೀನನೂ ಅಲ್ಲೇ ಮಲಗುತ್ತಿದ್ದನು. ಚಿಲುಮೆ ಎಳೆಯುವುದು, ಹಗಲಿಡೀ ಹರಟೆ ಕೊಚ್ಚುವುದು ಇವೇ ಅವನ ಕೆಲಸಗಳು ಅಂಗಡಿಯ ಕೆಲಸವೆಲ್ಲ ಮುದುಕಿಯೇ ಮಾಡುತ್ತಿದ್ದಳು. ದೇವೀದೀನನಿಗೆ ಗಿರಾಕಿಗಳ ಪರಿಚಯು ಕೂಡ ಇಲ್ಲ. ಅಲ್ಪಸ್ವಲ್ಪ ಹಿಂದಿ ಬರುತ್ತಿತ್ತು. ಕಾಲಹರಣಕ್ಕೋಸ್ಕರ ರಾಮಾಯಣವೋ, ತೋತಾಮೈನವೊ, ಅಲ್ಲದಿದ್ದರೆ ರಾಸಲೀಲೆಯೋ ಮುಂತಾದುವನ್ನು ಓದುತ್ತಿದ್ದನು. ರಮಾನಾಥನು ಬಂದಮೇಲೆ ಅವನಿಗೆ ಇಂಗ್ಲೀಷ್ ಕಲಿಯಬೇಕೆಂದು ಮನಸ್ಸಾಗಿಬಿಟ್ಟಿತ್ತು. ಮುಂಜಾನೆ ಎದ್ದು ಪುಸ್ತಕ ಹಿಡಿದು ಕೂತನೆಂದರೆ, ಒಂಭತ್ತು ಹತ್ತುಗಂಟೆಯವರೆಗೆ ಅಕ್ಷರಗಳನ್ನೋದುವ ಕೆಲಸ ಸಾಗುತ್ತಿತ್ತು. ಆದರೆ ರಮಾನಾಥನು ತಮ್ಮ ಮನೆಯಲ್ಲಿ ಬೇರುಬಿಟ್ಟುದು ಜಗ್ಗಿಗೆ ಅಷ್ಟೊಂದು ರುಚಿಸುತ್ತಿರಲಿಲ್ಲ. ಲೆಕ್ಕವಿಡುವ ಕೆಲಸವನ್ನು ಅವನಿಗೆ ಹಚ್ಚಿದ್ದಳೇನೋ ಹೌದು. ಆದರೆ ಇಷ್ಟು ಚಿಕ್ಕ ಕೆಲಸಕ್ಕೆ ಜನ ಮಾಡಿಕೊಳ್ಳುವುದು ವ್ಯರ್ಥವೆಂದು ಅವಳ ಎಣಿಕೆ. ಈ ಕೆಲಸ ಗಿರಾಕಿಗಳು ಪುಕ್ಕಟೆ ಮಾಡಿಕೊಡುತ್ತಿದ್ದರು. ರಮಾನಾಥನ ಇರವು ಆಕೆಗೆ ಕೆಟ್ಟುದನಿಸುತ್ತಿತ್ತು. ಆದರೆ ರಮಾನಾಥನ ಸೇವಾತತ್ಪರತೆ, ಧರ್ಮನಿಷ್ಠೆ ನಮ್ರತೆಗಳ ದೆಸೆಯಿಂದ ಆಕೆ ಸ್ಪಷ್ಟರೂಪದಿಂದ ವಿರೋಧಿಸುವಂತಿಲ್ಲ. ಹಾಂ, ಬೇರೊಬ್ಬರಿಗೆ ಹೇಳುವಹಾಗೆ, ಶ್ಲೇಶರೂಪಗಾಗಿ, ಅವನಿಗೆ ಹೇಳುವುದನ್ನು ಹೇಳಿ ತನ್ನ ಮನಸ್ಸನ್ನು ಹಗುರುಮಾಡಿಕೊಳ್ಳುತ್ತಿದ್ದಳು. ಮುದುಕಿಯ ವರ್ತನೆಯ ಒಳಗುಟ್ಟು ರಮಾನಾಥ

ನಿಗೆ ತಿಳಿಯಲ್ಲಿಲ್ಲವೆಂದಲ್ಲ. ಆದರೆ ಮಾಡುವುದೇನು? ನಿರ್ಲಜ್ಜನಾಗದೆ ಗತ್ಯಂತರವಿಲ್ಲ. ಪರಿಸ್ಥಿತಿಯು ಅವನ ಆತ್ಮಗೌರವವನ್ನು ಅಪಹರಿಸಿತ್ತು.

ಒಂದು ದಿನ ವಾಚನಾಲಯದಲ್ಲಿ ಕೂತಿದ್ದಂತೆ, ಅವನಿಗೆ ರತನಳು ಕಾಣಿಸಿಕೊಂಡಳು. ಯಾರನ್ನೋ ಹುಡುಕುವವಳಂತೆ ಒಳಗೆ ಕಾಲಿಟ್ಟಳು. ರಮಾನಾಥನು ಮೆಲ್ಲ ಮೆಲ್ಲನೆ ಹಿಂದೆ ಸರಿದು ಮುರಕಲು ಕುರ್ಚಿ-ಮೇಜುಗಳನ್ನಿಟ್ಟಿದ್ದ ಸ್ಥಳದತ್ತ ಸೇರಿಕೊಂಡನು. ಅಲ್ಲಿ ಅವಳಿಗೆ ತೋರದಂತೆ ಕುತ್ತಿಗೆಯನ್ನೆತ್ತಿ ಎತ್ತಿ ನೋಡುತ್ತಿದ್ದನು. ಎದೆ ಧಕ್ ಧಕ್ ಎನ್ನುತ್ತಿತ್ತು. ರತನಳ ಕೂಡೆ ಅವನಿಗೆ ಎಷ್ಟೋ ವಿಷಯಗಳನ್ನು ಕೇಳುವುದಿತ್ತು; ಆದರೆ ಸಂಕೋಚವು ಅವನನ್ನು ಅಡಗಿಕೊಡುವಂತೆ ಪ್ರೇರಿಸಿತು. ಅಯ್ಯೋ, ಕೇಳಬೇಕಾದ ಎಷ್ಟು ಮಾತುಗಳಿವೆ? ಅವುಗಳಲ್ಲಿ ಮುಖ್ಯವಾದುದೆಂದರೆ ಜಾಲಪಳು ತನ್ನ ಕುರಿತಾಗಿ ಏನು ಚಿಂತಿಸುತ್ತಿದ್ದಾಳೆಂಬುದು. ತನ್ನ ನಿಷ್ಠುರ ವರ್ತನೆಗಾಗಿ ಅಳುತ್ತಿರುವಳೆ? ತನ್ನ ಉದ್ದಂಡತೆಯನ್ನು ಕಂಡು ಕ್ಷುಬ್ಧಳಾಗಿರುವಳೆ? ತನ್ನನ್ನು ಧೂರ್ತನೆಂದೂ, ವಿಶ್ವಾಸಘಾತಕನೆಯೆಂದೂ ಬಗೆಯುತ್ತಿಲ್ಲವೆ? ಸೊರಗಿ ಕ್ಷೀಣಳಾಗಿರುವಳೆ? ಉಳಿದವರ ಮನಸ್ಸು ಹೇಗಿದೆ? ಇಂತಹ ಸಾವಿರ ವಿಷಯಗಳನ್ನು ಕೇಳಬೇಕಾಗಿತ್ತು. ಆದರೆ ಮುಖ ತೋರಿಸುವುದೆಂತು? ಅವನು ಇಣಿಕಿ ಇಣಿಕಿ ನೋಡುತ್ತಲೇ ಇದ್ದನು. ರತನಳು ಹೋದುದನ್ನು ಕಂಡು ಅವನಿಗೆ ಜೀವದಲ್ಲಿ ಜೀವ ಬಂತು. ಅಂದಿನಿಂದ ಒಂದು ವಾರದತನಕ ಅವನು ವಾಚನಾಲಯದ ಕಡೆ ಹೋಗಲಿಲ್ಲ. ಹೆಚ್ಚೇಕೆ ಮನೆಯಿಂದ ಹೊರಗೆ ಕಾಲಿಡಲಿಲ್ಲ.

ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಅವನ ತಲೆಯಲ್ಲಿ ಒಂದು ಯೋಚನೆ ಹೊಳೆಯುವುದು, ಪೋಲೀಸರಿಗೆ ಇದ್ದ ಸಂಗತಿಯನ್ನು ತಿಳಿಸಿ ಬಿಡುವುದು. ಎರಡು ವರ್ಷಗಳ ಕಾರಾವಾಸವು ಈ ಆಜೀವನ ಕಾರಾವಾಸಕ್ಕಿಂತ ಮಿಗಿಲಲ್ಲವೆ? ಆಮೇಲೆ ಹೊಸಬನಂತೆ ಜೀವನ ಸಂಗ್ರಾಮವನ್ನು ಪ್ರವೇಶಿಸಿ, ಹಾಸುಗೆಯಿದ್ದಷ್ಟೇ ಕಾಲು ಚಾಚಿಕೊಂಡು ಸಾಗಿದರೆ ಸರಿ. ಆದರೆ ಒಂದೇ ಕ್ಷಣದಲ್ಲಿ ಅವನ ಧೈರ್ಯವೆಲ್ಲ ಗಾಳಿಗೆ ಹಾರಿ ಹೋಗುವುದು.

ಹೀಗಿಯೆ ಇನ್ನೆರಡು ತಿಂಗಳು ಕಳೆಯಿತು. ಚಳಿ ಕಾಲಿಟ್ಟಿತು. ರಮಾನಾಥನ ಹತ್ತಿರ ಚಳಿಗೆ ಬೇಕಾದ ಬಟ್ಟೆಗಳೇನೂ ಇಲ್ಲ. ಇದುವರೆಗೆ ಉಡುವ

ಧೋತಿಯೇ ರಾತ್ರಿಯು ಹೊದಿಕೆಯ ಕೆಲಸ ಮಾಡುತ್ತಿತ್ತು; ಈಗ ಕಂಬಳಿಯಂತಹುದೇನಾದರೂ ಇಲ್ಲದೆ ಇರಲು ಬೆಳಗಾಗುವುದಿಲ್ಲ. ರಾತ್ರಿಯಿಡೀ ಮುದುಡಿಕೊಂಡು ಮಲಗುವನು. ಚಳಿ ಅತಿಯಾದರೆ ದೇವೀದೀನನು ಕೊಟ್ಟದ್ದೊಂದು ಹರಕು ಜಮಖಾನೆಯನ್ನು ಹೊದ್ದುಕೊಳ್ಳುವನು ಹಾಸಿಕೊಳ್ಳುವುದಕ್ಕೂ ಅದೇ, ಹೊದೆಯಲೂ ಅದೇ. ದೇವೀದೀನನ ಶ್ರೇಣಿಯ ಜನಗಳ ಸ್ವಭಾವವೇ ಹಾಗೆ ಆಭರಣಗಳಿಗೋಸ್ಕರ ಹತ್ತು ಸಾವಿರ ಖರ್ಚು ಮಾಡಿಯಾರು? ಮದುವೆ-ಮುಂಜಿಗಳಿಗೆ ನೀರಿನಂತೆ ವೆಚ್ಚ ಮಾಡಿಯಾರು, ಆದರೆ ಮಲಗುವ ಹಾಸುಗೆಯನ್ನು ಹರಕು-ಮುರುಕಾಗಿಯೇ ಇಟ್ಟುಕೊಳ್ಳುವರು. ರಮಾನಾಥನು ಸಂಕೋಚಕ್ಕೊಳಗಾಗಿ ಏನನ್ನೂ ಹೇಳುವಂತಿಲ್ಲ; ದೇವೀದೀನನಿಗೆ ಇವನ ಚಳಿಯ ವಿಚಾರ ತಲೆಗೆ ಹೋಗುವಂತೆಯೂ ಇಲ್ಲ. ಹಗಲು ಕಳೆದ ಹಾಗೆ ರಮಾನಾಥನಿಗೆ ಇರುಳು ಕಳೆವುದು ಹೇಗೆಂಬ ಚಿಂತೆ ತೊಡಗುವುದು ರಾತ್ರಿಯಿಡಿ ಯಾವಾಗ ಬೆಳಗಾಗುವುದೆಂದು ಆಗಾಗ ಕಿಟಕಿ ಬಾಗಿಲನ್ನು ತೆರೆದು ನೋಡುತ್ತಲೇ ಇರುವನು.

ಒಂದು ದಿನ ಸಾಯಂಕಾಲ ರಮಾನಾಥನು ವಾಚನಾಲಯದಿಂದ ಮರುಳುತ್ತಿದ್ದಾಗ ಒಂದು ಕೋಠಿಯ ಮುಂದುಗಡೆ ಜನರು ಗುಂಪುಗೂಡಿ ನಿಂತುದನ್ನು ಕಂಡನು. ಗುಂಪಿನೊಳಹೊಕ್ಕಾಗ ಇದು ಕರೋಡೀಮಲ ಸೇಠಜೀಯವರು 'ಮಹಾಕಂಬಳಿದಾನ ಸಮಾರಂಭ'ವೆಂದು ತಿಳಿದುಬಂತು. ತಾನೂ ಒಂದು ಕಂಬಳಿಗೆ ಕೈಯೊಡ್ಡಿದರೇನಾಗುವುವೆಂದು ರಮಾನಾಥನಿಗೆ ಒಮ್ಮೆ ತೋರಿತು. ಆದರೆ ಮರುಕ್ಷಣವೇ ಅವನ ಆತ್ಮಸಮ್ಮಾನವು ಜಾಗ್ರತವಾಯಿತು. ಅವನು ಅಲ್ಲಿಂದ ಮುಂದುವರಿದನು ಅವನ ಹಣೆಯತಿಲಕವನ್ನು ಕಂಡು ಮುನೀಮರು ಇವನಾರೋ ಬ್ರಾಹ್ಮಣನೆಂದರಿತು—'ಪಂಡಿತಜೀ, ಎಲ್ಲಿಗೆ ಹೊರಟಿರಿ? ಈ ಕಂಬಳಿಯನ್ನೊಯ್ಯಬಾರದೆ'? ಎಂದರು. ಸಂಕೋಚದಿಂದ ರಮಾನಾಥನ ಕಾಲು' ಹೂತುಹೋಯಿತು. ಅವನ ಬಾಯಿಯಿಂದ—'ಇಲ್ಲ, ನನಗೆ ಬೇಕಿಲ್ಲ ಎಂದು ಇಷ್ಟೇ ಶಬ್ದ ಹೊರಟಿತು. ಹೀಗೆಂದು ಅವನು ಮತ್ತೆ ಮುಂದುವರಿದನು ಮುನೀಮರು ಕಂಬಳಿ ಅಷ್ಟೊಂದು ಚೆನ್ನಾಗಿಲ್ಲವೆಂದು ಈ ಬ್ರಾಹ್ಮಣೋತ್ತಮನು ಕಾಲುಕೀಳುತ್ತಿರುವನೆಂದೆಣಿಸಿ, ಕೂಡಲೆ ಕೆಳಗಿಳಿದು ರಮಾನಾಥನ ಕೈಹಿಡಿದು ಹೇಳಿದನು—'ಬನ್ನಿರಿ, ಸ್ವಾಮೀ, ಹೀಗೆ ಬನ್ನಿ. ನಿಮಗೆ ಒಳ್ಳೆಯ ಕಂಬಳಿಯಿದೆ. ಈ ಸಾಧಾರಣದವು

ಗಳು ದರಿದ್ರರಿಗೆ ಮಾತ್ರ' ರಮಾನಾಥನು ಬಾಯಲ್ಲಿ ಬೇಡ ಬೇಡವೆನ್ನುತ್ತಿದ್ದರೂ ಮನಸ್ಸಿನಲ್ಲಿ ಅನಾಯಾಸವಾಗಿ ಪುಕ್ಕಟೆ ಸಿಗುವ ವಸ್ತುವನ್ನು ಬಿಡುವುದೇಕೆಂದೆಣಿಸಿ, ಮುನೀಮರೊಡನೆ ಒಳಗೆ ಹೋದನು. ಮುನೀಮರಿಗೆ ಇವನ ಸೌಜನ್ಯವನ್ನೂ, ಸಂತೋಷವೃತ್ತಿಯನ್ನೂ ಕಂಡು ಬಹಳ ಆನಂದವಾಯಿತು. ಇದ್ದುದರಲ್ಲಿ ಒಳ್ಳೆಯ ಕಂಬಳಿಯನ್ನು ತೆಗೆದಿತ್ತು, ಜತೆಯಲ್ಲಿ ಐದು ರೂಪಾಯಿ ದಕ್ಷಿಣೆಯನ್ನೂ ಕೊಡಬಂದನು. ಜನ್ಮಜನ್ಮಾಂತರದಿಂದ ಸಂಚಿತವಾದ ಗೌರವವು ಕಂಬಳಿ ತೆಗೆದುಕೊಂಡೇ ಆಹತವಾಗಿ ಹೋಗಿತ್ತು, ಈಗ ಈ ದಕ್ಷಿಣೆಗೆ ಕೈಯೊಡ್ಡುವುದು ಅದಕ್ಕೆ ಸಾಧ್ಯವೆ ?

ಮುನೀಮರು ದಕ್ಷಿಣೆ ಬೇಡವೆಂದು ಹೇಳುವ ಬ್ರಾಹ್ಮಣರನ್ನು ಅದುವರೆಗೆ ಕಂಡಿರಲಿಲ್ಲ ಅದುದರಿಂದ ಅವರ ಒತ್ತಾಯ ಮತ್ತಷ್ಟು ಹೆಚ್ಚಿತು. ಎಷ್ಟು ಹೇಳಿದರೂ ರಮಾನಾಥನು ಕೇಳಲಿಲ್ಲ. ಮರುದಿನ ಬರುವೆನೆಂದು ಹೇಳಿ ತಪ್ಪಿಸಿಕೊಂಡನು.

ಒಂಭತ್ತು ಗಂಟೆಗೆ ಮನೆಗೆ ಬಂದನು. ಬರುತ್ತಿರುವಾಗ ದೇವೀದೀನನು ಕೇಳಿದರೆ ಯಾರೋ ಗುರುತಿನವರಲ್ಲಿಂದ ಉದ್ದರಿ ತಂದಿರುವೆನೆಂದು ಹೇಳುವೆನೆಂದೆಣಿಸಿದನು. ದೇವೀದೀನನು ಕಂಬಳಿ ಕಂಡೊಡನೆ ಹೇಳಿದನು—'ಓಹೋ ಕರೋಡೀಮಲ್ ಸೇಠಜೀಯವರ ಹತ್ತಿರ ಹೋಗಿದ್ದಿರಾ ?'

ರಮಾನಾಥನು ಅರಿಯದವನಂತೆ ಕೇಳಿದನು—'ಹಾಗೆಂದರೆ ಯಾರು?'

'ಅರೇ, ಅದೇ ಆ ಕೆಂಪು ಕೋಠಿಯಿಲ್ಲವೇ, ಅದರ ಮಾಲಿಕ?'

ರಮಾನಾಥನಿಗೆ ನೆವವೇನೂ ಹೇಳಲಾಗಲಿಲ್ಲ. 'ಹೌದು, ಮುನೀಮನು ಹಿಡಿದವನು ಬಿಡಲೇ ಇಲ್ಲ ಬಹಳ ಧರ್ಮಾತ್ಮನಪ್ಪಾ !

ದೇವೀದೀನನು ಮುಗುಳ್ನಗುತ್ತ ಹೇಳಿದನು—ಹೌದು, ದೊಡ್ಡ ಧರ್ಮಾತ್ಮನು ! ಅವನು ಹಿಡಿದುಕೊಂಡಿರುವುದರಿಂದಲೇ ಈ ಭೂಮಿ ನಿಂತಿದೆ, ಇಲ್ಲವಾದರೆ ಇಷ್ಟರಲ್ಲಿ ಆಕಾಶಕ್ಕೆ ಹಾರಿ ಹೋಗುತ್ತಿತ್ತು.

ರಮಾ—ಧರ್ಮಾತ್ಮರಂತೆ ಕೆಲಸವನ್ನೇನೊ ಮಾಡುತ್ತಾನೆ, ಮನಸ್ಸಿನ ಸ್ಥಿತಿ ದೇವರೊಬ್ಬನಿಗೆ ಗೊತ್ತು. ಇಡೀ ದಿನ ಪೂಜಾಪಾಠ, ದಾನವ್ರತ

ಗಳಲ್ಲಿ ಕಾಲಕಳೆವವನನ್ನು ಧರ್ಮಾತ್ಮನೆಂದಲ್ಲವಾದರೆ ಇನ್ನು ಹೇಗೆ ಕರೆಯ ಬೇಕು?

ದೇವಿ:—ಅವನನ್ನು ಪಾಪಿಯೆಂದೆನ್ನಬೇಕು, ಮಹಾಪಾಪಿಯೆಂದು ದಯೆ ಅವನ ಗಂಟಲಲ್ಲಿ ಇಳಿಯುವುದೇ ಇಲ್ಲ. ಅವನ ಗಾಳಿ ಸೋಂಕಿದರೆ ಅದಕ್ಕಾಗದು. ಸಣಬಿನ ಗಿರಣಿಯೊಂದನ್ನು ನಡೆಸುತ್ತಿದ್ದಾನೆ. ಕೂಲಿಯವರಿಗೆ ಇವನ ಗಿರಣಿಯಲ್ಲಿ ತೋರಿಸುವಷ್ಟು ನಿರ್ದಯತೆ ಬೇರೆಲ್ಲಿಯೂ ಇರಲಾರದು. ಮನುಷ್ಯರಿಗೆ ಚಾಬೂಕಿನಿಂದ ಹೊಡೆಯಿಸುತ್ತಾನೆ, ಚಾಲಾಕಿಯಿಂದ ತುಪ್ಪಕ್ಕೆ ಚರ್ಬಿ ಸೇರಿಸಿ ಲಕ್ಷಾಂತರ ರೂಪಾಯಿ ಸಂಪಾದಿಸಿರುವನು. ಯಾರಾದರೂ ನೌಕರನೊಬ್ಬನು ಹೊತ್ತಿಗಿಂತ ಒಂದು ಮಿನಿಟು ತಡಮಾಡಿ ಬಂದರೂ ಸಂಬಳದಲ್ಲಿ ಕಡಿತ ಹಾಕುತ್ತಾನೆ. ವರ್ಷಕ್ಕೆ ನಾಲ್ಕಾರು ಸಾವಿರ ರೂಪಾಯಿ ದಾನ ಮಾಡದಿದ್ದರೆ ಪಾಪದ ಧನವು ಜೀರ್ಣಿಸುವುದೆ? ಒಳ್ಳೆಯ ಬ್ರಾಹ್ಮಣರು ಅವನ ಬಾಗಿಲ ಕಡೆ ಕಣ್ಣೆತ್ತಿಯೂ ನೋಡುವುದಿಲ್ಲ. ನೀನಲ್ಲದೆ ಯಾರಾದರೂ ಬೇರೆ ಪಂಡಿತರು ಅಲ್ಲಿದ್ದರೇ? ಹೇಳು.

ರಮಾನಾಥನು ತಲೆಯಲ್ಲಾಡಿಸಿದನು.

'ಅಲ್ಲಿ ಯಾರೂ ಹೋಗುವುದಿಲ್ಲ. ಹಾಂ, ಲೋಭಿಗಳೂ ಲಂಪಟರೂ ಹೋಗದಿರುವುದಿಲ್ಲವೆನ್ನು. ಎಷ್ಟು ಮಂದಿ ಅರ್ಚಕರನ್ನು ಕಂಡೆನೋ, ಎಲ್ಲರೂ ಕಲ್ಲುಗಳಾಗಿದ್ದುದೇ ನನಗೆ ಕಂಡು ಬಂದಿರುವುದು. ಕಲ್ಲನ್ನು ಪೂಜಿಸಿ ಪೂಜಿಸಿ ಇವರ ಹೃದಯಗಳೂ ಕಲ್ಲಾಗುತ್ತವೆ. ಇವನು ಮೂರು ಮೂರು ಧರ್ಮಶಾಲೆಗಳನ್ನು ಕಟ್ಟಿಸಿರುವನು. ಆದರೆ ಭಯಂಕರ ಪಾಖಂಡಿಯಿರುವನು. ಮನುಷ್ಯನು ಬೇರೇನು ಮಾಡದಿದ್ದರೂ ಚಿಂತಿಲ್ಲ, ಮನಸ್ಸಿನಲ್ಲಿ ದಯೆಯನ್ನಿಟ್ಟಿರಲಿ. ನೂರುಧರ್ಮಗಳಲ್ಲೊಂದು ಧರ್ಮವೆಂದರೆ ಇದೇ.

ರಮಾನಾಥನು ಹಗಲಿನ ರೊಟ್ಟಿಗಳನ್ನು ತಿಂದು ಮಲಗಿದನು. ಅವನ ಮನಸ್ಸಿಗೆ ಬಹಳ ಗ್ಲಾನಿಯು ಅನುಭವವಾಗುತ್ತಿತ್ತು. ಅನ್ನ ಬಟ್ಟೆಗಳಿಗಾಗಿ ನಾನು ದಾನವನ್ನೂ ಸ್ವೀಕರಿಸಬೇಕಾಯಿತಲ್ಲ? ನಾನೆಷ್ಟು ದೀನನಾಗಿರವೆನು? ಒಮ್ಮೆ ಪೋಲೀಸಿಗೆ ಈಗಲೆ ಹೋಗಿ ತಿಳಿಸಿ ಬಿಡುವೆನೆಂದೆಣಿಸಿದನು ಮತ್ತೊಮ್ಮೆ ಎಲ್ಲಾದರೂ ಬಾವಿಗೆ ಬಿದ್ದು ಸಾಯುವೆನೆಂದು ಬಗೆದನು. ಈ

ತರದಲ್ಲಿ ಜೀವಿಸಿ ಫಲವೇನು ? ಮನೆಗೆ ಮಾರಿ ಊರಿಗೆ ಉಪಕಾರಿಯಾಗಿದ್ದು ಕೊಂಡೂ ಬಾಳ್ವೆ ನಡೆಯಿಸುವುದೆ ?

ನಾಳೆ ನಿಶ್ಚಿಂತೆಯಿಂದ ಕೆಲಸ ಹುಡುಕಲು ಹೋಗುವೆನೆಂದು ಮನಸ್ಸಿನಲ್ಲಿ ದೃಢನಿರ್ಧಾರವನ್ನು ಮಾಡಿದನು. ಬರುವುದೇನಿದ್ದರೂ ಬರಲಿ.

## ೨೪

ರಮಾನಾಥನು ಮುಖ ತೊಳೆದುಕೊಂಡಿದ್ದನಷ್ಟೆ, ದೇವೀದೀನನು ಪ್ರಾಯಿಮರನ್ನು ಹಿಡಿದುಕೊಂಡು ಅವನ ಬಳಿ ಬಂದನು. 'ಮಾರಾಯಾ' ಈ ನಿನ್ನ ಇಂಗ್ಲಿಷಿನ ಅವಾಂತರ ನೋಡಬಾರದೆ ? ಎಸ್-ಆಯ್-ಆರ್, 'ಸರ್' ಅಂತೆ, ಆದರೆ ಪಿ-ಆಯ್-ಟಿ 'ಪಿಟ್' ಅಂತೆ ಬೀ-ಯು-ಟಿ 'ಬಟ್' ಆಗುತ್ತದೆ. ಆದರೆ ಪಿ-ಯೂ-ಟಿ 'ಪುಟ್' ಆಗುವುದು ಹೇಗೆ ? ನಿನಗೂ ಬಹಳ ಕಷ್ಟವೆನಿಸುತ್ತಿರಬಹುದಲ್ಲವೆ ?

ರಮಾನಾಥನು ಮುಗುಳ್ನಕ್ಕು ಎಂದನು—ಮೊದ ಮೊದಲು ಸ್ವಲ್ಪ ಕಷ್ಟವಾಗುತ್ತಿತ್ತು, ಈಗ ಅಭ್ಯಾಸವಾಗಿ ಬಿಟ್ಟಿದೆ.

ದೇವಿ—ಈ ಪ್ರಾಯಿಮರ್ ಮುಗಿದ ದಿನ ಆಂಜನೇಯನ ಗುಡಿಗೆ ಹೋಗಿ ಹತ್ತು ಸಲ ಹಣ್ಣು ಕಾಯಿ ಮಾಡಿಸುವೆನು ಪರಾಯಿ-ಮರ್ ಎಂಬುದರ ಅರ್ಥ, ಇನ್ನೊಬ್ಬನ ಹೆಂಡತಿ ಸತ್ತುಹೋಗಲಿ ಎಂದು. ನನಗೆ ಮಾತ್ರ ನನ್ನವಳು ಸತ್ತರಾಗಬಹುದೆಂದಿದೆ. ಅಲ್ಲ ಬೇರೆಯವರ ಹೆಂಡತಿ ತೀರಿಕೊಂಡರೆ ನಮಗೇನು ಸುಖ ? ನಿನಗೆ ಮಕ್ಕಳು ಮರಿಗಳಾಗಿಪೆಯಲ್ಲವೆ, ತಮ್ಮಾ ?

ರಮಾನಾಥನು ಇದ್ದರೂ ಇಲ್ಲದ ಹಾಗೆ ಎಂಬ ಭಾವದಿಂದ ಹೇಳಿದನು—ಹಾಂ, ಇದ್ದಾರೆ !

'ಏನಾದರೂ ಕಾಗದ-ಪತ್ರ ಬಂದಿತ್ತೆ ?'

'ಇಲ್ಲ !'

'ನೀನೂ ಬರೆಯಲಿಲ್ಲ. ಮೂರು ತಿಂಗಳಾದರೂ ಪತ್ರ ಬರೆಯಬೇಡವೆ? ಮನೆ ಮಂದಿ ಎಷ್ಟು ಗಾಬರಿಸುತ್ತಿರಬಹುದು ?

‘ ಇಲ್ಲಿ ಒಂದು ಠಾವು ದೊರೆಯದೆ ಏನೆಂದು ಬರೆಯಲಿ ? ’

‘ ಒಳ್ಳೆಯ ಜನ ನೀನು. ನಾನು ಕ್ಷೇಮವಾಗಿದ್ದೇನೆ ಎಂದಿಷ್ಟನ್ನಾದರೂ ಬರೆದು ಹಾಕು. ಮನೆಯಿಂದ ಓಡಿ ಬಂದಿರುವೆ. ಅವರಿಗೆಷ್ಟು ಚಿಂತೆ ಹತ್ತಿರಬಹುದು ? ತಂದೆ ತಾಯಿಗಳಿರುವರಲ್ಲವೆ ? ’

‘ ಹಾಂ, ಇದ್ದಾರೆ. ’

ದೇವೀದೀನನು ಗುಡುಗುಟ್ಟಿದನು—ಹಾಗಾದರೆ ಬರಿ, ಇಂದೇ ಬರೆದು ಹಾಕು.

ರಮಾನಾಥನು ದೇವೀದೀನನೊಡನೆ ಈ ವರೆಗೂ ತನ್ನ ನಿಜ ಸ್ಥಿತಿಯನ್ನು ತಿಳಿಸಿರಲಿಲ್ಲ. ಆದರೆ ಈಗ ದೇವೀದೀನನ ಸದ್ಭಾವವು ಅವನನ್ನು ಪರಾಭೂತನನ್ನಾಗಿ ಮಾಡಿತು. ಅವನೆಂದನು—ಮನೆಯಿಂದ ಓಡಿ ಬಂದಿರುವೆ, ತಂದೆ.

ದೇವೀದೀನನು ಮೀಸೆಯಡಿಯಿಂದ ನಗೆಯನ್ನು ಬೀರಿ ಹೇಳಿದನು—ಅದು ನನಗೆ ಗೊತ್ತು. ತಂದೆಯ ಹತ್ತಿರ ಜಗಳವಾಯಿತೆ ?

‘ ಇಲ್ಲ ’

‘ ತಾಯಿ ಏನಾದರೂ ಹೇಳಿದಳೆ ? ’

‘ ಅದೂ ಇಲ್ಲ ! ’

‘ ಹಾಗಾದರೆ ಮನೆಯಾಕೆಯೊಡನೆ ಜಗಳಗಂಟು ಬಿದ್ದಿರಬೇಕು ಅವಳು ಬೇರೆ ಮನೆಮಾಡಿಕೊಂಡಿರೋಣ ಎಂದೆನ್ನುತ್ತಿರಬೇಕು ನೀನು ಅದು ಸಾಧ್ಯವಿಲ್ಲ, ತಂದೆತಾಯಿಗಳಿಂದ ನಾನು ದೂರವಾಗಿರಲಾರೆ ಎಂದು ಹೇಳುತ್ತಿರಬೇಕು. ಅಥವಾ ಆಭರಣಕ್ಕಾಗಿ ಹಟ ಹಿಡಿಯುತ್ತಿರಬೇಕು. ಏನು, ಹೀಗಲ್ಲವೆ ? ’

ರಮಾನಾಥನು ನಾಚಿಕೊಂಡು ಹೇಳಿದನು—ಹಾಗೇನೂ ಇಲ್ಲ, ತಂದೆ. ಆಭರಣ ಬೇಕೆಂದು ಅವಳದೇನೂ ಒತ್ತಾಯವಿರಲಿಲ್ಲ. ಸಿಕ್ಕಿದರೆ ಸಂತೋಷಪಡುತ್ತಿದ್ದಳು. ನಾನು ಪ್ರೇಮತರಂಗದಲ್ಲಿ ಸಿಕ್ಕುಬಿದ್ದು ಹಿಂದು-ಮುಂದು ನೋಡುತ್ತಿದ್ದಿಲ್ಲ.

ದೇವೀದೀನನ ಮುಖದಿಂದ ತಾನಾಗಿ ಹೊರಟಿತು—ಸರಕಾರಿ ಹಣವನ್ನು ಹಾರಿಸಿರುವೆ ಏನು ?

ರಮಾನಾಥನಿಗೆ ರೋಮಾಂಚವಾಯಿತು. ಎದೆಯೊಮ್ಮೆ ಧಕ್ ಎಂದು ಕೂಕಂತಾಯಿತು. ಅವನು ದೇವೀದೀನನಿಗೆ ಈ ಸಂಗತಿಯನ್ನು ಹೇಳುವುದಿಲ್ಲವೆಂದು ಮಾಡಿದ್ದನು. ಆದ್ದರಿಂದ ಅವನ ಮುಖದ ಬಣ್ಣ ಬದಲಾಯಿತು, ಒಮ್ಮೆಲೇ ಏನು ಉತ್ತರ ಹೇಳಬೇಕೆಂದು ಅವನಿಗೆ ತೋಚಲಿಲ್ಲ.

ದೇವೀದೀನನು ಅವನ ಮನಸ್ಸಿನ ಭಾವವನ್ನರಿತು ಹೇಳಿದನು—ಪ್ರೇಮವು ಶ್ರಮರಹಿತವಾದದ್ದು. ಎಂತೆಂಥವರು ಜಾರಿ ಬೀಳುತ್ತಾರೆ. ನೀನಿನ್ನೂ ಹುಡುಗನು. ಇಂತಹ ದ್ರವ್ಯಾಪಹಾರದ ಮೊಕದ್ದಮೆಗಳು ವರ್ಷಕ್ಕೆಷ್ಟೋ ಆಗುತ್ತವೆ. ವಿಚಾರಣೆ ಮಾಡಿ ನೋಡಿದರೆ ಎಲ್ಲದರ ಮೂಲದಲ್ಲಿಯೂ ಇರುವ ಕಾರಣವೊಂದೇ—ಆಭರಣ. ಹತ್ತಿಪ್ಪತ್ತು ಘಟನೆಗಳನ್ನು ನಾನು ಕಣ್ಣಿನಿಂದ ಕಂಡುದುಂಟು. ಸ್ತ್ರೀ ಬಾಯಿಯಿಂದ ಹೇಳದಿದ್ದರೂ, ತಂದರೆ ಆನಂದ ಪರವಶಳಾಗಿ ಕುಣಿಯಲಿಕ್ಕೆ ಹತ್ತುವಳು. ಇಲ್ಲೊಬ್ಬರು ಅಂಚೆಮನೆಯ ಬಾಬುಗಳಿದ್ದರು. ಚೂರಿಯಿಂದ ಕುತ್ತಿಗೆ ಕುಯ್ದುಕೊಂಡರು. ಇನ್ನೊಬ್ಬರಿಗೆ ಐದು ವರ್ಷ ಸಜೆಯಾಯಿತು. ಮೂರನೆಯವರೊಬ್ಬರು ಪಂಡಿತರು ಅಫೀಮು ತಿಂದು ಪ್ರಾಣ ಕಳಕೊಂಡರು. ಬೇರೆಯವರಿಗೆ ಏಕೆ ಹೇಳಲಿ ? ನಾನು ಸಹ ಜೈಲಿನಲ್ಲಿ ಮೂರು ವರ್ಷ ಕಳೆದುಬಂದವನೇ. ಯೌವನಕಾಲದ ಮಾತದು ನಾನು ಪೋಸ್ಟ್‌ಮ್ಯಾನ್ ಆಗಿದ್ದೆ. ಇವಳು ಕಿವಿಯ ಓಲೆಗಳಿಗಾಗಿ ಪ್ರಾಣ ಬಿಡುತ್ತಿದ್ದಳು. ಒಂದು ಬಾರಿ ಸುಳ್ಳು ದಸ್ಕತು ಮಾಡಿ ಮನಿಯಾರ್ಡರಿನ ಮೂವತ್ತು ರೂಪಾಯಿಗಳನ್ನು ಎಬ್ಬಿಸಿದೆ. ಓಲೆ ಮಾಡಿಸಿದೆ. ಒಂದು ತಿಂಗಳಲ್ಲಿ ನನ್ನ ಕಳ್ಳತನವು ಪತ್ತೆಯಾಯಿತು. ಮೂರು ವರ್ಷ ಜೇಲಿಗೆ ಹೋಗಿ ಬಂದೆ. ಮನೆಗೆ ಒಂದು ಪತ್ರ ಹಾಕಿ ಬಿಡು; ಆದರೆ ಪೋಲೀಸಿನವರು ನಿನ್ನ ತಲಾಶಿಯಲ್ಲಿದ್ದರೆ ಮಾತ್ರ ಅನರ್ಥವಾದೀತು. ನಾನೇ ಯಾರ ಕೈಯಿಂದಾದರೂ ಬರೆಯಿಸಿ ಹಾಕುತ್ತೇನೆ.

ರಮಾನಾಥನು ಆಗ್ರಹಪೂರ್ವಕವಾಗಿ ಹೇಳಿದನು— ಬೇಡಪ್ಪಾ, ಬೇಡ. ಪೋಲೀಸರಿಗಿಂತ ಹೆಚ್ಚು ನನಗೆ ಮನೆಮಂದಿಯ ಭಯವಿದೆ.

ದೇವೀ—ಸಮಾಚಾರ ತಿಳಿಯುತ್ತಲೇ ಓಡಿ ಬರುವರು. ಅವರ ವಿಷಯ ಬಿಟ್ಟುಬಿಡು. ಈ ಪೋಲೀಸರ ವಿಷಯಮಾತ್ರ ಜಾಗ್ರತೆಯಿರಬೇಕು.

ರಮಾ—ಸಜೆಗೆ ನಾನು ಸ್ವಲ್ಪವೂ ಬೆದರುವುದಿಲ್ಲ ಹೇಳಿದೆನಲ್ಲವೆ, ಮೊನ್ನೆ ವಾಚನಾಲಯದಲ್ಲಿ ನಮ್ಮ ಪರಿಚಯದಾಕೆಯೊಬ್ಬಳು ಸಿಕ್ಕಿದಳೆಂದು ಆದರೆ ಆಕೆಯನ್ನು ಕಾಣುತ್ತಲೇ ನಾನು ಅಡಗಿ ಕೂತೆ. ಬೇಕಾದರೆ ಮನೆಯ ಸಮಾಚಾರವೆಲ್ಲ ಅವಳಿಂದ ತಿಳಿದುಕೊಳ್ಳಬಹುದಿತ್ತು. ಆದರೆ ಧೈರ್ಯವೇ ಬರಲಿಲ್ಲ. ಈಗ ಬೇಕೆಂದರೂ ಅವಳನ್ನು ನೋಡುವಂತಿಲ್ಲ.

ದೇವೀ—ಅವಳಿಗೇ ಒಂದು ಪತ್ರ ಬರೆಯಲ್ಲ?

ರಮಾ—ಅದು ಮಾತ್ರ ನನ್ನಿಂದಾಗದು.

ದೇವೀ—ಎಷ್ಟು ದಿನ ಬರೆಯದಿರುವಿ?

ರಮಾ—ನೋಡಬೇಕು.

ದೇವೀ—ಪೋಲೀಸರು ನಿನ್ನನ್ನು ಹುಡುಕಾಡುತ್ತಿರಬಹುದು.

ದೇವೀದೀನನು ಚಿಂತಾಮಗ್ನನಾದನು. ಬಹುಶಃ ಪೋಲೀಸರ ಭಯವು ಇವನನ್ನು ಕಾಡಿಸುತ್ತಿರಬೇಕೆಂದು ಭ್ರಮಿಸಿ ರಮಾನಾಥನೆಂದನು—ನನಗೂ ಆ ಭಯ ಇದ್ದೇ ಇದೆ. ಆದಕ್ಕೋಸ್ಕರವೇ ನಾನು ಕತ್ತಲಾಗದೆ ಹೆಚ್ಚು ಹೊರಗೆ ಹೊರಡುತ್ತಿಲ್ಲ. ಆದರೆ ನನ್ನ ಜತೆಯಲ್ಲಿ ನಿನ್ನನ್ನೂ ಎಳೆದುಕೊಂಡು ಹೋಗುವುದಿಲ್ಲವೆಂಬುದು ಖಂಡಿತ. ನಾನು ಹೇಗೂ ಹೋಗತಕ್ಕವನು, ನಿನ್ನನ್ನೂ ಏಕೆ ಪೇಚಿನಲ್ಲಿ ಸಿಲುಕಿಸಲಿ? ಪೋಲೀಸರ ಗಂಧ ಗಾಳಿಯಿಲ್ಲದ ಯಾವುದಾದರೊಂದು ಹಳ್ಳಿಗೆ ಹೋಗಿದ್ದರಾದೀತೆಂದು ತೋರುತ್ತದೆ.

ದೇವೀದೀನನು ಗರ್ವದಿಂದ ತಲೆಯೆತ್ತಿ ಹೇಳಿದನು—ನನ್ನ ವಿಷಯದ ಚಿಂತೆ ನಿನಗೆ ಬೇಡ., ಇಲ್ಲಿ ಪೋಲೀಸಿಗೆ ಹೆದರುವವರಾರೂ ಇಲ್ಲವೆಂದು ತಿಳಿ, ಪರದೇಶಿಯೊಬ್ಬನನ್ನು ಮನೆಯಲ್ಲಿರಿಸಿಕೊಳ್ಳುವುದು ಪಾಪವಲ್ಲ. ಯಾರ ಹಿಂದೆ ಪೋಲೀಸರಿದ್ದಾರೆಂದು ನಮಗೇನು ಗೊತ್ತು ಅದು ಪೋಲೀಸರ ಕೆಲಸ? ನಾನು ಪೋಲೀಸರ ಸಹಾಯಕನಲ್ಲ, ಗುಪ್ತಚರನಲ್ಲ. ನೀನು ಅವರ ಕೈಗೆ ಸಿಗದ ಹಾಗೆ ಇರು, ದೇವರು ಏನು ಮಾಡುವನೋ ನೋಡುವ. ಆದರೆ ಮುದುಕಿಯ ಹತ್ತಿರ ಎಲ್ಲಾದರೂ ಹೇಳಿಬಿಟ್ಟೀಯೆ, ಜೋಕೆ, ಅವಳ ಹೊಟ್ಟೆಯಲ್ಲಿ ಇಂತಹ ಮಾತುಗಳು ಕರಗುವುದು ಸ್ವಲ್ಪ ಕಠಿಣ

ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಿದ್ದರು. ಸಹಸಾ ದೇವೀದೀನ ನೆಂದನು—ಯಾಕೆ? ಹೀಗೆ ಮಾಡಿದರೇನಾಗುವುದು? ನಿಮ್ಮ ಮನೆಗೆ ಹೋಗಿ ಎಲ್ಲಾ ಸಮಾಚಾರ ತಿಳಿದುಕೊಂಡು ಬರುವೆ, ನಿನ್ನ ತಂದೆ, ತಾಯಿ, ಹೆಂಡತಿ ಎಲ್ಲರೊಡನೆಯೂ ಮಾತಾಡಿಕೊಂಡು ಬಂದು ನಿನಗೆ ತಿಳಿಸುವೆ. ಆಮೇಲೆ ಹೇಗೆ ಮನಸ್ಸಾಯಿತೋ ಹಾಗೆ ಮಾಡು.

ರಮಾನಾಥನ ಕಣ್ಣುಗಳು ಮನೋಲ್ಲಾಸದಿಂದ ಹೊಳಪೇರಿದುವು. ಅವನ ಮನಸ್ಸು ಮಧುರ ಕಲ್ಪನೆಗಳ ಲೋಕವನ್ನು ತಲುಪಿತು. ಜಾಲಪಾ ಎಷ್ಟು ಉತ್ಸಾಹದಿಂದ ತನ್ನ ಕುರಿತು ಪ್ರಶ್ನಿಸಬಹುದು? ತಂದೆ ಸರ್ಕಾರಿ ಹಣವನ್ನು ಮುಟ್ಟಿಸಿರುವರೆಂದಾದರೆ, ಇನ್ನೇನು, ಎಲ್ಲವೂ ಸುಖಮಯ ವಾಗುವುದು

ದೇವೀದೀನನು ಕೇಳಿದನು—ಆಗಬಹುದಲ್ಲವೆ?

ರಮಾ—ನಿನ್ನನ್ನೇತಕ್ಕೆ ಕಷ್ಟಪಡಿಸಲಿ, ತಂದೆ?

'ಮಾಘಸ್ನಾನವೂ ಆಗುವುದು. ಕಷ್ಟವಿಲ್ಲದೆ ಪುಣ್ಯ ಸಿಗುವುದೆ? ನೀನೂ ಬಂದರೆ ಒಳ್ಳೆಯದೆಂದು ನನ್ನ ಅಭಿಪ್ರಾಯ. ಅಲ್ಲಿಯ ವಾತಾವರಣ ಚೆನ್ನಾಗಿದ್ದರೆ ಸೇರಿಕೊಂಡು ಬಿಡು. ಇಲ್ಲವಾದರೆ ನನ್ನ ಹಿಂದೆಯೇ ಬಂದು ಬಿಡು.

ರಮಾನಾಥನು ನಗುತ್ತ ಎಂದನು—ಎಲ್ಲಿಗೆ ಹೋಗುವುದೋ ಏನೋ ಹೀಗೆ ನಾನು ಎಂದೂ ಹೋಗಲಾರೆ, ಸ್ಟೇಶನ್ನಿನಲ್ಲಿಯೆಯುತ್ತಲೆ ಪೋಲೀಸರು ಬಂದು ಹಿಡಿದರೆ?

ದೇವೀದೀನನು ಗಂಭೀರವಾಗಿ ಹೇಳಿದನು—ಏನು ಹಾಗೆಲ್ಲಾ ಹಿಡಿಯುವುದೆಂದರೆ ತಮಾಷೆ ತಂದು ಮಾಡಿದಿಯಾ? ಬೇಕಾದರೆ ನಿನ್ನನ್ನು ಪ್ರಯಾಗದ ಪೋಲೀಸಠಾಣೆಯ ಇದಿರು ನಿಲ್ಲಿಸಿಯೇನು, ಯಾರಾದರೂ ನಿನ್ನನ್ನು ಕಡೆಗಣ್ಣಿಂದ ನೋಡಿದರೂ ಅವರ ಮೀಸೆ ಕಿತ್ತು ಕೈಯಲ್ಲಿ ಕೊಟ್ಟೇನು. ಏನು ಹೇಳುತ್ತಿಯೋ ಏನೋ, ನೋಡು ಈ ಕಲ್ಕತ್ತೆಯಲ್ಲೇ ನಿನಗೆಷ್ಟು ಮಂದಿ ಖೂನಿಗಳು ಬೇಕು. ಪೋಲೀಸರಿಗೆ ಗೊತ್ತಿಲ್ಲವೆಂಬ ವಿಷಯ ಬಿಡು. ಅವರೊಡನೆ ಪೋಲೀಸ ಆಫೀಸರರು ಭೋಜನ ಮಾಡುತ್ತಾರೆ. ರೂಪಾಯಿಗಿರುವಷ್ಟು ಸಾಮರ್ಥ್ಯ ಇನ್ನಾವುದಕ್ಕಿದೆ?

ರಮಾನಾಥನು ಉತ್ತರ ಕೊಡಲಿಲ್ಲ. ದೇವೀದೀನನು ಬರೀ ಬಾಯಿ ಮಾತಿನವನಲ್ಲವೆಂಬುದು ಅವನಿಗೆ ಗೊತ್ತು. ಹಾಗಾದರೆ ಇವನೊಡನೆ ಮನೆಗೆ ಹೋಗುವುದೇ ಎಂದು ಯೋಚಿಸಿದನು. ಅಲ್ಪ ಸ್ವಲ್ಪ ಹಣವಿದ್ದರೆ ಹೊಸ ಕೂಟು ಹೊಲಿಸಬಹುದಿತ್ತು. ಗೋಪಿ, ವಿಶ್ವಂಭರರು ಕಂಡೊಡನೆ ಅನ್ನಬೇಕು. ಅಣ್ಣ ಬಂದ, ಅಣ್ಣ ಬಂದ! ತಂದೆಯವರು ಓಡಿ ಬರುವರು ತಾಯಿಗೆ ಮೊದಲು ವಿಶ್ವಾಸವಾಗುವುದಿಲ್ಲ. ತಂದೆ ಹೋಗಿ ಬಂದನೆಂದ ಹೇಳಿದಾಗ ಅಳುತ್ತಾ ಹೊರಬರುವಳು. ಜಾಲಪಳು ಅಲ್ಲಿಗೆ ಬರಲಿಕ್ಕಿಲ್ಲ. ಸಿಟ್ಟಿನಿಂದ ಸೆಡವಿಕೊಂಡು ಎಲ್ಲೋ ಕೂತಿರುತ್ತಾಳೆ. ರಮಾನಾಥನು ಅವಳಿಗ ತಾನು ಹೇಳಬೇಕಾದ ಮೊದಲ ವಾಕ್ಯವನ್ನು ಈಗಲೇ ಮನಸ್ಸಿನಲ್ಲೆಣಿಸಿ ಗಟ್ಟಿಮಾಡಿಕೊಂಡನು. ರೂಪಾಯಿಯ ಪ್ರಸ್ತಾವವೇ ಬರಲಿಕ್ಕಿಲ್ಲ. ನಮ್ಮ ಪ್ರಿಯಜನರಿಂದ ಏನಾದರೂ ಅಪರಾಧವಾದರೆ ನಾವು ಅದನ್ನು ಮರಳಿ ಮರಳಿ ಕೆದಕಿ ಅವನನ್ನು ಕೆಣುಕುತ್ತೇವೆಯೆ?

ದೇವೀದೀನನು ಕೇಳಿದನು—ಏನನ್ನೆಣಿಸುತ್ತಿರುವೆ? ಹೊರಡುವಿಯಲ್ಲವೆ?

ರಮಾ— ನೀನಿಷ್ಟು ಹೇಳುವಾಗ ನಾನು ಕೇಳದಿರುವುದಕ್ಕಾಗುತ್ತದೆಯೆ ಆದರೆ ನನಗೆ ಬಟ್ಟೆ ಬರೆಗಳಿಗೆ ಸ್ವಲ್ಪ ಹಣ ಬೇಕು, ಮನೆಗೆ ಹೋದ ಮೇಲೆ ನಿನ್ನ ಹಣ ನಿನಗೆ ಹಿಂದೆ ಕೊಡುವೆನು.

‘ನಿನ್ನ ಗುರುದಕ್ಷಿಣೆಯನ್ನು ನಾನಲ್ಲಿಯೇ ಸಲ್ಲಿಸುವೆನು’

‘ಗುರುದಕ್ಷಿಣೆ ಕೊಡಬೇಕಾದುದು ನೀನಲ್ಲ. ನಾನು ನಾಲ್ಕಕ್ಷರ ಇಂಗ್ಲಿಷು ಕಲಿಸಿದರೆ, ಏನು ದೊಡ್ಡ ಉಪಕಾರ ಮಾಡಿದಂತಾಯಿತೆ. ಆದರೆ ನೀನು ನನಗೆ ಕಲಿಸಿದ ಪಾಠವನ್ನು ಮಾತ್ರ ನಾನು ನನ್ನ ಜೀವಮಾನವಿಡೀ ಮರೆವಂತಿಲ್ಲ. ನಡುನೀರಿನಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದ ನನ್ನನ್ನು ಉದ್ಧರಿಸಿದವನು ನೀನು. ತಂದೆ ತಾಯಿಗಳನ್ನು ಬಿಟ್ಟರೆ ನಿನ್ನ ಮೇಲಿರುವಷ್ಟು ಪ್ರೇಮ ಇನ್ನಾರ ಮೇಲೂ ಇಲ್ಲವೆಂದು ತಿಳಿ. ನೀನು ನನ್ನ ರಕ್ಷಣೆಗೆ ಬಾರದಿದ್ದರೆ ನನ್ನ ಗತಿ ಏನಾಗುತಿತ್ತೋ ದೇವರೇ ಬಲ್ಲ.’

‘ಅದಿರಲಿ ಬಿಡು. ಹೋಗುವುದು ನಿಶ್ಚಯವಾಯಿತಲ್ಲವೆ?

'ಸರಿ, ಅಂಗಡಿ ತೆರೆದ ಮೇಲೆ ಬಟ್ಟೆ ತೆಗೆದುಕೊಳ್ಳಲು ಹೋಗುವ ಇಂದೇ ಹೊಲಿಯಲಿಕ್ಕೆ ಹಾಕಿಬಿಡುವ.'

ದೇವೀದೀನನು ಹೋದ ಮೇಲೆ ಬಹಳ ಹೊತ್ತಿನ ವರೆಗೆ ರಮಾನಾಥನು ಆನಂದ ಕಲ್ಪನೆಗಳಲ್ಲಿ ಮಗ್ನನಾಗಿ ಕೂತಿದ್ದನು. ಯಾವ ಭಾವನೆಗಳಿಗೆ ಅವನು ಇದು ವರೆಗೆ ಎಂದೂ ಮನಸ್ಸಿನಲ್ಲಿ ಆಶ್ರಯವನ್ನೀಯುತ್ತಿರಲಿಲ್ಲವೋ, ಯಾವುವುಗಳ ಆಳ ವಿಸ್ತಾರ ದ್ವೇಗಗಳನ್ನು ಕಂಡು ಇಳಿದರೆ ಎಲ್ಲಿ ಮುಳುಗಿ ಹೋಗುವೆನೋ! ಎಂದು ತಲ್ಲಣಿಸಿ ತನ್ನ ಚಂಚಲಮನವನ್ನು ಆ ಕಡೆ ಸುಳಿಯಗೊಡುತ್ತಿದ್ದಿಲ್ಲವೋ, ಆ ಅನಂತ, ಅಸೀಮ ಕಲ್ಪನಾ ಸಾಗರದಲ್ಲಿ ಅವನಿಂದು ಸ್ವಚ್ಛಂದ ರೂಪದಿಂದ ಕ್ರೀಡಿಸತೊಡಗಿದನು. ಈಗ ಅವನಿಗೊಂದು ನೌಕೆ ದೊರೆತಿತ್ತು. ಆ ತ್ರಿವೇಣಿಯ ವಿಹಾರ, ಆ ಅಲ್ಫ್ರೆಡ್ ಪಾರ್ಕಿನ ಶೋಭೆ, ಆ ಸುತ್ತಲಿನ ತರತರದ ಸಮಾರಂಭಗಳು, ಎಲ್ಲವೂ ನೆನಪಿಗೆ ಬಂದು ಬಂದು ಹೃದಯವು ಗದಗದಿಸಹತ್ತಿತು.

ದೇವೀದೀನನು ಮರಳಿಬಂದನು. ಸೇಟಿಯ ಕಡೆಗೆ ಹೋಗಿ ಬೇಕಾದ ಬಟ್ಟೆಯನ್ನು ತರೋಣವೆಂದು ಎಷ್ಟು ಹೇಳಿದರೂ ರಮಾನಾಥನು ಕೇಳಲಿಲ್ಲ.

'ನೀನು ಮೆಚ್ಚಿ ತಂದುದೇ ನನಗೂ ಮೆಚ್ಚು.'

'ಪೋಲೀಸರ ಭಯವೇ? ನಾನಿರುವಾಗ ಏತಕ್ಕೆ ಅಂಜುವೆ? ಬಾ'

'ಇಲ್ಲ ತಂದೇ, ಭಯವೇನೂ ಇಲ್ಲ. ಬರುವ ಇಚ್ಛೆ ಇಲ್ಲ, ಅಷ್ಟೆ.'

'ಹೆದರಿಕೆ ಇಲ್ಲವಾದರೆ ಬರಲು ನೆವವನ್ನೇಕೆ ಒಡ್ಡುತ್ತಿದೆ! ನಿನಗೆ ಏನೂ ಆಗಲಾರದು. ಬಾ, ನನ್ನ ಜತೆಯಲ್ಲಿ.'

ದೇವೀದೀನನು ಎಷ್ಟು ಆಶ್ವಾಸನೆಯಿತ್ತರೂ ರಮಾನಾಥನ ಹೊರಡಲಿಲ್ಲ. ಯಾರಾದರೊಬ್ಬ ಪೋಲೀಸನ ಕೈಗೆ ಸಿಕ್ಕಿದರೆ ಪಾಪ, ದೇವೀದಿನನೇನು ಮಾಡಿಯಾನು? ಇವನು ಬೇಡಿಕೊಂಡರೂ ಅವನು ಬಿಡಲಾರ. ಆಗ ಪ್ರಯಾಗದ ಬದಲು ಜೈಲು ಪ್ರಯಾಣವಾದೀತು.

ದೇವೀದೀನನು ಒಂದು ತಾಸಿನ ಬಳಿಕ ಹಿಂತಿರುಗಿ ಬಂದು ಉಣ್ಣೆ ಮತ್ತು ರೇಶ್ಮೆ ಬಟ್ಟೆಗಳ ಹತ್ತೆಂಟು ನಮೂನೆಗಳನ್ನು ರಮಾನಾಥನ ಮುಂದೆ ಹಾಕಿದನು.

ರಮಾನಾಥನು ಅವುಗಳನ್ನು ತಿರುಗಿಸಿ ತಿರುಗಿಸಿ ನೋಡುತ್ತಾ ಕೇಳಿದನು—ಇಷ್ಟು ಕ್ರಯದ ಬಟ್ಟೆಗಳನ್ನೇತಕ್ಕೆ ತಂದೆ? ಅಗ್ಗದವಿರಲಿಲ್ಲವೆ?

'ಇದ್ದುವು. ಆದರೆ ಅವು ವಿಲಾಯತಿ ವಸ್ತ್ರಗಳಾಗಿದ್ದುವು.'

'ನೀನು ವಿಲಾಯತಿ ವಸ್ತ್ರಗಳನ್ನು ತೊಡುವುದಿಲ್ಲವೆ?'

'ಈಗ ಇಪ್ಪತ್ತು ವರ್ಷಗಳಿಂದ ಇಲ್ಲ. ಅದಕ್ಕೆ ಹಿಂದಿನ ಕತೆ ಹೇಳಲಾರೆ. ಏನೋ ಸ್ವಲ್ಪ ಹೆಚ್ಚು ಬೆಲೆ ಕೊಡಬೇಕಾಗುತ್ತದೆ ನಿಜ. ಆದರೆ ಹಣ ದೇಶದಲ್ಲೇ ಉಳಿಯುವುದಲ್ಲವೆ?'

ರಮಾನಾಥನು ನಾಚಿಕೆಯಿಂದ ಹೇಳಿದನು—ನೀನು ವೃದ್ಧನಿಯಮವಶನಾಗಿದ್ದೀಯೆ.

ದೇವೀದೀನನ ಮುಖಮುದ್ರೆಯು ಒಮ್ಮೆಲೆ ತೇಜಃಪೂರ್ಣವಾಯಿತು. ಕಂದಿದ್ದ ಕಣ್ಣುಗಳು ಥಳಥಳಿಸಿದುವು. ಎತ್ತಿದ ಸ್ವರದಲ್ಲಿಂದನು—ಯಾವ ನಾಡಿನಲ್ಲಿ ವಾಸ ಮಾಡುತ್ತೇವೆಯೋ, ಯಾವುದರ ಅನ್ನನೀರಿನಿಂದ ಬೆಳೆಯುತ್ತೇವೆಯೋ ಆ ಪುಣ್ಯಭೂಮಿಗೆ ಇಷ್ಟೂ ಮಾಡದಿದ್ದರೆ, ನಮ್ಮ ಬಾಳುವೆಗೆ ಧಿಕ್ಕಾರವಿರಲಿ! ಈ ಸ್ವದೇಶಿಯ ಒಲಿಸೀಕೆಯಲ್ಲಿ ಇಬ್ಬರು ತರುಣ ಪುತ್ರರನ್ನು ಒಪ್ಪಿಸಿರುವೆನು. ಎಷ್ಟು ಬಲಿಷ್ಠರಿದ್ದರು ಗೊತ್ತೆ? ಇಬ್ಬರೂ ವಿದೇಶೀ ವಸ್ತ್ರದ ಅಂಗಡಿಯ ಮುಂದೆ ನಿಯುಕ್ತರಾಗಿದ್ದರು. ಒಬ್ಬ ಗಿರಾಕಿಗೂ ಅಂಗಡಿಯ ಮೆಟ್ಟಿಲು ಹತ್ತುವ ಧೈರ್ಯ ಬರಬೇಕೆ? ಕೈಮುಗಿದು ದೈನ್ಯದಿಂದ ಬೇಡಿ, ಗದರಿಸಿ, ನಾಚಿಕೆಗೊಳಿಸಿ ಎಲ್ಲರನ್ನೂ ಹಿಂತಿರುಗಿಸುತ್ತಿದ್ದರು. ಕಮಿಶನರ್ ಸಾಹೇಬರು ಇಪ್ಪತ್ತು ಮಂದಿ ಬಿಳಿ ಸೈನಿಕರನ್ನು ಕಳುಹಿದರು. ಅವರು ಬಂದು ಇಬ್ಬರು ಸೋದರರಿಗೆ ಹೇಳಿದರು—ಇಲ್ಲಿಂದ ಹೊರಡಿರಿ ಆದರೆ ಅವರು ತಮ್ಮ ಸ್ಥಳದಿಂದ ಒಂದಕ್ಕಿಯ ಕಾಳಷ್ಟೂ ಕದಲಲಿಲ್ಲ. ಗುಂಪು ಸೇರಿತು. ಸಿಪಾಯಿಗಳು ಅವರ ಮೈಮೇಲೆ ಕುದುರೆಯನ್ನು ದೂಡುತ್ತಿದ್ದರೂ, ಯಾರೂ ತಮ್ಮ ಸ್ಥಳವನ್ನು ಬಿಡುತ್ತಿರಲಿಲ್ಲ. ಕಲ್ಲಾಗಿ ನಿಂತ ಅವರ ಮೇಲೆ ತಮ್ಮ ಈ ಉಪಾಯ ನಡೆಯದ್ದನ್ನು ಕಂಡು ಸಿಪಾಯಿಗಳು ಲಾಠಿಯಿಂದ ಹೊಡೆಲಾರಂಭಿಸಿದರು. ಇಬ್ಬರು ವೀರರೂ ಪೆಟ್ಟು ತಿನ್ನುತ್ತಿದ್ದರೆ ಹೊರತು ಜಾಗ ಬಿಟ್ಟು ತೊಲಗಲಿಲ್ಲ. ದೊಡ್ಡವನು ಬಿದ್ದೊಡನೆ ಚಿಕ್ಕವನು ಹೋಗಿ ಅವನ ಸ್ಥಾನದಲ್ಲಿ ನಿಂತನು ಇವರಿಬ್ಬರು ಕೋಲನ್ನೆತ್ತಿ

ದ್ದರೆ ಆ ಇಪ್ಪತ್ತು ಮಂದಿಯೂ ಬೆನ್ನು ಹಾಕಿ ಓಡಬೇಕಿತ್ತು. ಆದರೆ ಕೋಲೆತ್ತುವುದಂತಿರಲಿ, ತಲೆಯನ್ನು ಕೂಡಾ ಎತ್ತಿದವರಲ್ಲ. ಕೊನೆಗೆ ಕಿರಿಯವನೂ ಅಲ್ಲೇ ಬಿದ್ದನು. ಇಬ್ಬರನ್ನೂ ಆಸ್ಪತ್ರೆಗೆ ಸಾಗಿಸಿದರು. ಅಂದು ರಾತ್ರಿಯೇ ಅವರ ಕತೆ ಮುಗಿಯಿತು. ನಿನ್ನ ಕಾಲುಮುಟ್ಟಿ ಹೇಳುತ್ತೇನೆ-ತಮ್ಮಾ, ಆಗ ನನ್ನ ಮನಸ್ಸಿನ ಆನಂದಕ್ಕೆ ಮೇರೆ ಇರಲಿಲ್ಲ. ಎದೆಯುಬ್ಬಿ ಹೋಗಿತ್ತು. ಕಾಲು ನೆಲದ ಮೇಲೆ ನಿಲ್ಲುತ್ತಿರಲಿಲ್ಲ. ದೇವರು ಬೇರೆಯವರನ್ನೂ ಈ ಹಿಂದೆಯೇ ಕರೆಸಿಕೊಳ್ಳದಿದ್ದಲ್ಲಿ ಅವರನ್ನೂ ಈ ಸಂದರ್ಭದಲ್ಲಿ ಕಳುಹುತ್ತಿದ್ದೆನೆಂದು ಅನಿಸುತ್ತಿತ್ತು. ಶವಗಳ ಮೆರವಣಿಗೆ ಹೊರಟಾಗ ಒಂದು ಲಕ್ಷ ಜನ ಸೇರಿದ್ದರು. ಮಕ್ಕಳನ್ನು ಗಂಗೆಯ ಮಡಿಲಲ್ಲಿರಿಸಿ ನಾನು ನೇರಾಗಿ ಜವಳಿಪೇಟೆಯ ಕಡೆ ತೆರಳಿದೆನು. ಆ ಇಬ್ಬರ ರಕ್ತವು ಹರಡಿದ್ದ ಸ್ಥಳದಲ್ಲೇ ಹೋಗಿ ನಿಂತೆನು. ಎಂಟು ದಿನಗಳ ವರೆಗೆ ಗಿರಾಕಿಗಳಂತಿರಲಿ, ಒಂದು ನಾಯಿಪಿಳ್ಳೆ ಕೂಡ ಆತ್ತಕಡೆ ಸುಳಿಯಲಿಲ್ಲ. ಮುಚ್ಚಂಜೆಯಾಗುವ ಹೊತ್ತಿಗೆ ಮನೆಗೆ ಬಂದು ಬೇಗ ಬೇಗನೆ ಮಿಂದು ಎರಡು ತುತ್ತು ಉಂಡು ಮತ್ತೆ ಕಾವಲಿರುತ್ತಿದ್ದೆ. ಒಂಭತ್ತನೆಯದಿನ ಸಾಹುಕಾರರು ವಿದೇಶೀವಸ್ತ್ರ ಮಾರುವುದಿಲ್ಲವೆಂದು ಪ್ರಮಾಣ ಮಾಡಿದರು. ಆ ಮೇಲೆ ಕಾಲವನ್ನು ತೆಗೆದೆವು. ಅಂದಿನಿಂದ ಪರದೇಶದ ಬೆಂಕಿಪೆಟ್ಟಿಗೆಯೂ ನನ್ನ ಮನೆಯೊಳಗೆ ಬರಲಿಲ್ಲ.

ರಮಾನಾಥನು ತುಂಬಿದ ಎದೆಯಿಂದ ಹೇಳಿದನು—ತಂದೆ, ನೀನು ನಿಜವಾದ ವೀರನು, ಆ ನಿನ್ನ ಇಬ್ಬರು ಮಕ್ಕಳು ನಿಜವಾದ ಯೋಧರು. ನಿನ್ನ ದರ್ಶನದಿಂದ ಕಣ್ಣುಗಳು ಪವಿತ್ರವಾದುವು.

ದೇವೀದೀನನು ಈ ಹೊಗಳಿಕೆಯು ಅತಿಶಯೋಕ್ತಿಯಲ್ಲವೆಂಬ ಭಾವದಿಂದ ಅವನನ್ನು ನೋಡಿ ಗರ್ವದಿಂದ ಹೇಳಿದನು. ಈ ದೊಡ್ಡ ದೊಡ್ಡ ಮನುಷ್ಯರಿಂದ ಏನೂ ಕೆಲಸ ಸಾಗದು. ಇವರಿಗೆ ಅಳುವುದಕ್ಕೊಂದು ಗೊತ್ತು; ಚಿಕ್ಕ ಹುಡುಗಿಯರಂತೆ ಅಳುತ್ತಿರುವುದರಹೊರತು ಇವರಿಂದ ಬೇರೇನೂ ಆಗದು. ಈ ದೇಶಭಕ್ತರಿಗೆ ವಿಲಾಯತೀ ಶರಾಯಿ ಇಲ್ಲದೆ ನಡೆಯುವುದಿಲ್ಲ. ಇವರ ಮನೆಯೊಳಗೆ ನೋಡಿದರೆ ದೇಶೀವಸ್ತು ಒಂದೂ ಸಿಗಲಿಕ್ಕಿಲ್ಲ. ತೋರಿಸುವುದಕ್ಕಾಗಿ ಹತ್ತಿಪ್ಪತ್ತು ಥಪ್ಪದ ಅಂಗಿಗಳನ್ನು ಮಾಡಿಸಿದರಾಯಿತು,

ಎಲ್ಲರೂ ಭೋಗ ವಿಲಾಸದಿಂದ ಕುರುಡಾಗಿರುವರು, ಚಿಕ್ಕವರೂ, ದೊಡ್ಡ ವರೂ, ಇಂಥವರು ದೇಶೋದ್ಧಾರ ಮಾಡುತ್ತಾರಂತೆ, ಮೊದಲು ತಮ್ಮ ಉದ್ಧಾರ ಮಾಡಿಕೊಳ್ಳಲಿ! ಬಡವರನ್ನು ಸುಲಿದು ವಿಲಾಯತಿಯ ಖಜಾನೆ ತುಂಬುವ ಕೆಲಸ ಇವರದು. ಆದಕ್ಕೆಂದೇ ನೀವು ಈ ದೇಶದಲ್ಲಿ ಹುಟ್ಟಿದ್ದು ಹಾಂ, ಅಳುವುದನ್ನು ಬಿಡಬೇಡಿ, ವಿಲಾಯತಿ ಶರಾಬನ್ನು ಕುಡಿಯುತ್ತಿರಿ ವಿಲಾಯತಿ ಮೋಟಾರು ನಡಿಸುತ್ತಿರಿ, ವಿಲಾಯತಿ ಪಾತ್ರೆಗಳಲ್ಲಿ ಊಟ ಮಾಡಿ, ವಿಲಾಯತಿ ಔಷಧಿಗಳನ್ನು ಕುಡಿಯಿರಿ, ಆದರೆ ದೇಶದ ಹೆಸರಿನಲ್ಲಿ ಅಳುವುದನ್ನು ಮಾತ್ರ ಬಿಡಬೇಡಿ. ಈ ಅಳುವುದರಿಂದ ಏನಾಗುವುದು ಅತ್ತರೆ ತಾಯಿ ಮಗುವಿಗೆ ಹಾಲು ಕುಡಿಸಿಯಾಳು; ಹುಲಿ ತನ್ನ ಕೊಳ್ಳಿ ಯನ್ನು ಬಿಡಲಾರದು. ದಯಾ ಧರ್ಮಗಳು ಯಾರಲ್ಲಿವೆಯೋ ಅಂಥವರ ಮುಂದೆ ಅಳಬೇಕು. ಇನ್ನು ಗದರಿಸಿಯಾದರೂ ಮಾಡುವುದೇನು? ನಿಮ್ಮ ಗದರಿಕೆಯಲ್ಲಿ ಬಲವಿದ್ದರಲ್ಲವೆ ಇದಿರಾಳಿಗಳು ಬೆದರುವುದು? ಒಂದು ಸಲ ಇಲ್ಲಿ ಒಂದು ದೊಡ್ಡ ಸಭೆ ಸೇರಿತ್ತು. ಒಬ್ಬರು ಮಹಾವೀರರು ಬಹಳ ಕುಣಿ ದಾಡಿದರು. ಅವರು ಮಂಚದಿಂದ ಕೆಳಗಿಳಿದು ಬಂದಮೇಲೆ ನಾನು ಕೇಳಿದೆ— ಮಹಾಶಯರೆ, ಸತ್ಯ ಹೇಳಿರಿ, ನೀವು ಸ್ವರಾಜ್ಯದ ಹೆಸರೆತ್ತುವಾಗ ಅದರ ಎಂತಹ ರೂಪವು ನಿಮ್ಮ ಕಣ್ಣ ಮುಂದೆ ಬರುತ್ತದೆ? ನೀವೂ ತುಂಬ-ತುಂಬ ಸಂಬಳವನ್ನು ಪಡೆವಿರಿ, ಇಂಗ್ಲಿಷರಂತೆ ಬಂಗಲೆಗಳನ್ನು ಕಟ್ಟಿಕೊಂಡು ವಾಸ ಮಾಡುವಿರಿ, ಇಂಗ್ಲಿಷರ ದರ್ಪವನ್ನೂ ಮೀರಿಸುವಿರಿ, ಇಷ್ಟೇ ಅಲ್ಲವೆ? ಇದರಿಂದ ದೇಶಕ್ಕೆ ಕಲ್ಯಾಣವಾಗುವುದೇ ಸ್ವಾಮೀ? ನಿಮ್ಮ ಮತ್ತು ನಿಮ್ಮ ಸಂಬಂಧಿಕರ ಜೀವನ ಸುಖಮಯವಾಗಿ ಸಾಗೀತು. ಆದರೆ ಇದರಿಂದ ದೇಶ ಕ್ಕೇನು ಪ್ರಯೋಜನ? ನೀವು ದಿವಕ್ಕೈದು ಬಾರಿ ಉತ್ತಮೋತ್ತಮವಾದ ಊಟ ಉಣ್ಣುವಿರಿ; ಬಡ ರೈತನಿಗೆ ಒಂದು ಹೊತ್ತು ಒಣಕಲು ರೊಟ್ಟಿಗೂ ಗತಿ ಇಲ್ಲವಾದರೂ ಚಿಂತಿಲ್ಲ. ಅವನ ನೆತ್ತರನ್ನು ಹೀರಿಯೇ ಸರಕಾರವು ನಿಮಗೆ ಸಂಬಳ ಕೊಡುವುದಲ್ಲವೆ? ಎಂದಾದರೂ ನಿಮ್ಮ ದೃಷ್ಟಿ ಆ ಕಡೆ ಹೋದುದಿ ದೆಯೇ? ನಿಮ್ಮ ಕೈಯಲ್ಲಿ ರಾಜ್ಯವಿಲ್ಲ ಇನ್ನೂ. ನಿಮ್ಮ ರಾಜ್ಯದ ಕಾಲ ಬರುವಾಗ ನೀವು ಬಡವರ ರಕ್ತವನ್ನು ಕುಡಿಯಲು ಹಿಂದೆ-ಮುಂದೆ ನೋಡ ಲಿಕ್ಕಿಲ್ಲವೆಂಬುದು ಖಂಡಿತ.

ರಮಾನಾಥನಿಗೆ ಭದ್ರಸಮಾಜದ ಮೇಲೆ ಈ ಅಕ್ಷೇಪವು ಒಳ್ಳೆಯದಕಿಸ ಲಿಲ್ಲ. ಅವನೂ ಭದ್ರಸಮಾಜದ ಒಂದು ಅಂಗವಲ್ಲವೆ?

'ವಿದ್ಯಾವಂತರು ರೈತರನ್ನು ಕಡೆಗಣಿಸುತ್ತಾರೆಂಬುದು ನಿಜವಲ್ಲ. ತಂದೆ, ಅವರಲ್ಲಿ ಎಷ್ಟೋ ಮಂದಿ ಸ್ವತಃ ಕಿಸಾನರಿದ್ದರು; ಈಗಲೂ ಇರು ವರು. ತಾವು ಸ್ವಲ್ಪ ಕಷ್ಟ ಸಹಿಸುವುದರಿಂದ ರೈತರ ಹಿತ ಸಾಧಿಸುವುದೆಂದು ಇವರಿಗೆ ನಂಬುಗೆಯುಂಟಾದರೆ, ಆ ಮೇಲೆ ಇವರು ಕಡಮೆ ವೇತನಕ್ಕೆ ಕೆಲಸ ಮಾಡಲು ಆನಂದದಿಂದ ಒಪ್ಪುವರು. ಉಳಿತಾಯ ಬೇರೆಯವರ ಪಾಲಾಗುತ್ತಿರುವುದನ್ನು ಕಂಡು ಇವರಾದರೂ ತಾವೇಕೆ ತಿನ್ನಬಾರದೆಂದು ಯೋಚಿಸುತ್ತಿದ್ದಾರೆ. ಅಷ್ಟೆ ?

ದೇವೀ—ಹಾಗಾದರೆ ಸ್ವರಾಜ್ಯ ಸಿಕ್ಕಮೇಲೆ ಈ ಐದೈದು ಹತ್ತು-ಹತ್ತು ಸಾವಿರ ಸಂಬಳದ ಆಫೀಸರರು ಇರುವುದಿಲ್ಲವೆ ? ವಕೀಲರ ಸುಲಿಗೆ ಇಲ್ಲವಾ ಗುವುದೆ ? ಪೋಲೀಸರ ದರೋಡೆ ನಿಲ್ಲವುದೆ ?

ರಮಾನಾಥನಿಗೆ ಒಂದು ಕ್ಷಣ ಏನು ಹೇಳಬೇಕೆಂಬು ತೋಚಲಿಲ್ಲ. ಕೊನೆಗೆ ಒಂದು ದಾರಿ ಹೊಳೆಯಿತು. 'ಆಗ ಎಲ್ಲ ಕೆಲಸವೂ ಬಹುಮತ ದಿಂದ ಸಾಗುವುದು. ಬಹುಮತವು ಕರ್ಮಚಾರಿಗಳ ವೇತನವನ್ನು ಕಡಮೆ ಮಾಡಬೇಕೆಂದು ನಿರ್ಣಯಿಸಿದರೆ ಹಾಗೆಯೇ ಆಗುವುದು. ಕೀಲಿಕೈ ಬಹು ಮತದ ವಶವಾಗುವುದು. ಇನ್ನು ಹತ್ತು ಹದಿನೈದು ವರ್ಷಗಳತನಕ ಇಲ್ಲದಿ ದ್ದರೂ, ಆ ಮೇಲಾದರೂ ಬಹುಮತವು ರೈತ—ಮಜೂರರ ವಶವಾಗದಿರದು.'

ದೇವೀದೀನನು ನಸುನಗೆಯಿಂದ ಹೇಳಿದನು—ತಮ್ಮಾ, ನಿನಗೂ ಈ ವಿಷಯಗಳೆಲ್ಲ ಗೊತ್ತಿವೆ. ಇನ್ನೂ ಕೆಲವು ದಿನ ದೇವರು ನನ್ನನ್ನು ಈ ಭೂಮಿಯಲ್ಲಿರಿಸಲೆಂದು ಭಗವಂತನನ್ನು ಪ್ರಾರ್ಥಿಸುತ್ತಿದ್ದೇನೆ. ವಿಲಾಯತಿ ವಸ್ತುಗಳಮೇಲೆ ಇಮ್ಮಡಿ ಸುಂಕ ವಸೂಲ ಮಾಡಬೇಕೆಂದೂ, ಮೋಟರು ಗಳ ಮೇಲೆ ನಾಲ್ಕು ಪಟ್ಟು ಸುಂಕ ಹಾಕಬೇಕೆಂದೂ ನಾನು ಮತ ಕೊಡು ತ್ತೇನೆ. ಇರಲಿ, ಈಗ ಊಟ ತೀರಿಸು. ಸಂಜೆ ಹೋಗಿ ಇವನ್ನು ದರ್ಜಿಗೆ ಕೊಟ್ಟು ಬರುವ.

ಸಾಯಂಕಾಲವಾದೊಡನೆ ದೇವೀದೀನನು ಬಂದು—ಹೊರಡು. ಕತ್ತ ಲಾಯಿತು. ಎಂದಾಗ ರಮಾನಾಥನು ತಲೆಯಮೇಲೆ ಕೈಯಿಟ್ಟುಕೊಂಡು ಕೂತಿದ್ದನು. ಮುಖದಲ್ಲಿ ಬೇಸರವು ತಳಊರಿತ್ತು. ಹೇಳಿದನು—ತಂದೇ, ನಾನು ಮನೆಗೆ ಹೋಗುವುದಿಲ್ಲ.

ದೇವೀದೀನನು ಚಕಿತನಾಗಿ ಎಂದನು — ಏಲೆಯ್, ಇದೇನು ಹೀಗೆ?

ರಮಾನಾಥನ ಕಣ್ಣುಗಳು ಸಜಲವಾದುವು. ಯಾವ ಮುಖ ಹಿಡಿದು ಕೊಂಡು ಹೋಗಲಿ, ಇದಕ್ಕಿಂತ ಮುಳುಗಿ ಸಾಯುವುದು ನನಗೆ ಹಿತವೆನಿಸುತ್ತದೆ.'

ಹೀಗೆ ಹೇಳುತ್ತ ಹೇಳುತ್ತ ಅವನು ಗೋಳೋ ಎಂದು ಅತ್ತುಬಿಟ್ಟನು. ಇದುವರೆಗೆ ಮೂರ್ಛಿತವಾಗಿ ಬಿದ್ದಿದ್ದ ವೇದನೆಯು ಇಂದು ಶೀತಲಜಲ ಸೇಚನೆಯಿಂದ ಸಚೇತನವಾಯಿತ; ಅದರ ಕ್ರಂದನವು ರಮಾನಾಥನ ಎಲ್ಲ ಅಸ್ತಿತ್ವವನ್ನು ಖಂಡ-ಖಂಡವಾಗಿ ಮಾಡಿ ಬಿಟ್ಟಿತು. ದುಃಖಿಸಿ ಮಾತೆಯೊರ್ವಳು ಮಗನನ್ನು ಎಬ್ಬಿಸಿದರೆ ಕೂಡಲೇ ಅವನು ತಿನ್ನಲು ಕೇಳುವನಲ್ಲಾ ಎಂದು ಬೆದರಿ ಅವನನ್ನು ಎಚ್ಚರಿಸುವ ಗೋಜಿಗೆ ಹೋಗದಿರುವಂತೆ, ಇವನಾದರೂ ಆ ಕ್ರಂದನವನ್ನು ಎಚ್ಚರಿಸ ಹೋಗದೆ ಸಂಯತ ವಿಸ್ಮೃತಿಯಿಂದ ಅದು ಎಂದೆಂದೂ ಅಚೇತನವಾಗಯೇ ಇರುವಂತೆ ಯತ್ನಿಸುತ್ತಿದ್ದನು.

## ೨೫

ಹಲವು ದಿನಗಳ ಮೇಲೆ ಒಂದು ದಿನ ರಮಾನಾಥನು ಎಂಟು ಗಂಟೆಯ ಹೊತ್ತಿಗೆ ವಾಚನಾಲಯದಿಂದ ಹಿಂತಿರುಗುತ್ತಿದ್ದಾಗ, ಇಬ್ಬರು ಯುವಕರು ಚದುರಂಗದ ನಕ್ಷೆಯ ಕುರಿತು ಮಾತಾಡುತ್ತ ಬರುತ್ತಿದ್ದುದನ್ನು ಕಂಡನು. ಅವನ ಕುತೂಹಲವು ಕೆರಳಿತು. ಅಂದರೆ ಚದುರಂಗದ ನಕ್ಷೆಯ ಸಮಸ್ಯೆಯನ್ನು ಬಿಡಿಸಿದವರಿಗೆ ಐವತ್ತು ರೂಪಾಯಿ ಬಹುಮಾನ ಕೊಡಲ್ಪಡುವುದೆಂದು ಅದನ್ನು ಛಾಪಿಸಿದ ದೈನಿಕ ಪತ್ರದಲ್ಲಿ ಬಂದಿತ್ತು. ಇದೆಲ್ಲ ಅವನಿಗೆ ಅವರ ಮಾತು ಕತೆಯ ಮೂಲಕ ತಿಳಿಯಿತು.

ರಮಾನಾಥನಿಗೆ ಅವರಲ್ಲಿ ಯಾರ ಪರಿಚಯವೂ ಇಲ್ಲದಿದ್ದರೂ, ಆ ನಕ್ಷೆಯನ್ನು ನೋಡುವ ಕುತೂಹಲವು ಅವನನ್ನು ಮುಂದೆ ದೂಡಿತು. ಅವನು ಕೇಳಿದನು—ನಿಮ್ಮ ಹತ್ತಿರ ಆ ನಕ್ಷೆ ಇದೆಯೆ?

ಕಂಬಳಿ ಹೊದ್ದುಕೊಂಡ ಇವನನ್ನು ನೋಡಿ ಯುವಕರಲ್ಲೊಬ್ಬನು ಹೀಗೆಂದನು—ಹಾಂ, ಇರಲಿಕ್ಕೆ ಇದೆ. ಆದರೆ ಎಂತೆಂಥವರನ್ನು ನೀರು ಕುಡಿಸುವ ಇದನ್ನು ನೀನು ಬಗೆ ಹರಿಸಬಲ್ಲೆಯಾ? ಸಾಧ್ಯವೇ ಇಲ್ಲ.

ಎರಡನೆಯವನೆಂದನು—ಅದು ಹೇಗೆ ಹೇಳುವುದು? ಇವನ ಅದೃಷ್ಟದಿಂದ ಇವನಿಗೇ ಸಿಕ್ಕಿದರೂ ಸಿಕ್ಕಬಹುದು. ತೋರಿಸುವುದಕ್ಕೇಕೆ ಅಡ್ಡಿ ಮಾಡುವಿ?

ಅವರು ತಮ್ಮ ಗುರುತಿನ ಒಂದು ಅಂಗಡಿಗೆ ಹೋಗಿ ಅಲ್ಲಿ ರಮಾನಾಥನಿಗೆ ನಕ್ಷೆಯನ್ನು ತೋರಿಸಿದರು. ರಮಾನಾಥನಿಗೆ ತಾನಿದನ್ನು ಮೊದಲೆಲ್ಲೋ ಕಂಡಿದ್ದಂತೆ ಭಾಸವಾಯಿತು. ಆದರೆ ಎಲ್ಲಿ ಎಂಬುದು ಸ್ಪಷ್ಟವಾಗಿ ತಿಳಿಯಲಿಲ್ಲ. ಕಾಗದ ಪೆನ್ಸಿಲನ್ನು ಅವರಿಂದ ಇಸುಕೊಂಡು ಅದರ ಒಂದು ನಕಲನ್ನು ತಯಾರಿಸಿ ಅಲ್ಲಿಂದ ಹೊರಟನು. ಹೊರಡುವಾಗ 'ಪ್ರಜಾಮಿತ್ರ' ದ ಸಂಪಾದಕರಿಗೆ ಕಳುಹಬೇಕೆಂಬುದನ್ನೂ ಅರಿತುಕೊಂಡನು.

ಮನೆಗೆ ಹೋಗಿ ಆ ನಕ್ಷೆಯ ಮೇಲೆ ತಲೆ ಖರ್ಚು ಮಾಡತೊಡಗಿದನು. ಆದರೆ ಕಾಯಿಗಳ ನಡಿಗೆಯ ಕುರಿತು ಯೋಚಿಸುವದರ ಬದಲು ನಾನು ಇದನ್ನು ನೋಡಿದ್ದೆಲ್ಲಿ' ಎಂಬ ಯೋಚನೆ ಬಲವಾಯಿತು. ಫಕ್ಕನೆ ಅವನ ಕಣ್ಣ ಮುಂದೆ ಮಿಂಚು ಹೊಳೆದಂತಾಯಿತು. ಮರವೆ ನೆನಹಿನಲ್ಲಿ ಪರಿವರ್ತಿತವಾಯಿತು. ರಾಜಾಸಾಹೇಬರು ಈ ನಕ್ಷೆಯನ್ನು ತೋರಿಸಿದ್ದರು. ಸರಿ, ಅಲ್ಲಿಯೇ ನೋಡಿದ್ದು. ಉಲ್ಲಾಸದ ಮದದಲ್ಲಿ ನೆಲದ ಮೇಲಿಂದ ಮೂರು ನಾಲ್ಕು ಬಾರಿ ನೆಗೆತ ಹಾಕಿ, ಮೀಸೆ ತಿಕ್ಕಿಕೊಂಡು, ವಿಜಯ ಗರ್ವದಿಂದ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡನು.

ಪ್ರಸನ್ನಮುಖದಿಂದ ದೇವೀದೀನನ ಬಳಿ ಹೋಗಿ ಕೇಳಿದನು—'ಪ್ರಜಾಮಿತ್ರ' ಪತ್ರದ ಆಫೀಸು ಎಲ್ಲಿದೆ ಎಂದು ಗೊತ್ತಿದೆಯೆ?

ದೇವೀ—ಹೋ, ಗೊತ್ತಿದೆ. ಅದಕ್ಕೊಬ್ಬ ಸಂಪಾದಕನಿದ್ದಾನೆ. ಅವನಿಗೆ ಯಾವಾಗಲೂ ಬಾಯಲ್ಲಿ ಎಲೆ-ಅಡಿಕೆ ತಪ್ಪಬಾರದು. ಮಾತಾಡುವಾಗ ಎಷ್ಟು ವಿನಯ, ಆದರೂ ಅಸೀಮ ಧೈರ್ಯಶಾಲಿ. ಎರಡು ಸಲ ಜೈಲಿಗೆ ಹೋಗಿ ಬಂದಿರುವನು.

ರಮಾ—ಈ ಹೊತ್ತು ಸ್ವಲ್ಪ ಅಲ್ಲಿಗೆ ಹೋಗಿ ಬರುವಿಯಾ?

ದೇವೀ—ಅದು ಮಾತ್ರ ನನ್ನಿಂದಾಗದು.

ರಮಾ—ಏಕೆ?

ದೇವೀ—ಇನ್ನು ಈ ಸ್ವದೇಶಿ-ವಿದೇಶಿಯ ಜಗಳದಲ್ಲಿ ಬೀಳುವುದಿಲ್ಲ ವೆಂದು ಮುದುಕಿಗೆ ಮಾತು ಕೊಟ್ಟಿರುವೆನು. ಅವಳು ಕೊಟ್ಟಿದ್ದನ್ನು ತಿನ್ನು ತ್ತಿರುವೆನೆಂದಮೇಲೆ ಅವಳ ಆಜ್ಞೆಯನ್ನು ಪಾಲಿಸಬೇಡವೆ ?

ರಮಾ—ತಂದೆ, ನೀನು ಸುಮ್ಮನೆ ಹಾಸ್ಯಕ್ಕೆ ಹೀಗೆನ್ನುತ್ತೀಯೆಂದು ನನಗೆ ಗೊತ್ತಿದೆ. ನಾನೇ ಹೋಗುತ್ತಿದ್ದೆ. ಆದರೇನು ಮಾಡಲಿ ? ಈ ಗುಪ್ತ ಪೋಲೀಸರು ಪತ್ರಿಕೆಗಳ ಆಫೀಸಿನ ಹತ್ತಿರ ಪ್ರಾಯಃ ಸುಳಿಯುತ್ತಿರುತ್ತಾರೆ. ಅಂಚೆಯಲ್ಲಿ ಕಳಿಸೋಣವೆಂದರೆ ಅದು ಅಲ್ಲಿಗೆ ತಲಪುವುದು ತಾಡಿದಾಯಿತು.

ದೇವೀ—ಚಿಂತಿಲ್ಲ. ನಾನೇ ಹೋಗುವೆ. ಒಂದು ತಾಸಿನೊಳಗೆ ಹಿಂದೆ ಬರುವೆ. ಅಷ್ಟರೊಳಗೇನೂ ಮುದುಕಿ ಬರಲಿಕ್ಕಿಲ್ಲ.

ಹೀಗೆನ್ನುತ್ತಾ ದೇವೀದೀನನು ತನ್ನ ಕರಿ ಕಂಬಳಿಯನ್ನು ಹೊದ್ದು ಕೊಂಡು, ಲಕ್ಕೋಟಿಯನ್ನು ಕೈಯಲ್ಲಿ ತೆಗೆದುಕೊಂಡು ಹೊರಗೆ ಹೋದನು.

ಜಗ್ಗೋ ತರಕಾರಿ ಮತ್ತು ಫಲಗಳನ್ನು ತರಲು ಮಂಡಿಗೆ ಹೋಗಿ ದ್ದಳು. ಅರೆತಾಸಿನಲ್ಲಿ ಒಬ್ಬ ಆಳಿನ ತಲೆಯಮೇಲೊಂದು ದೊಡ್ಡ ಬುಟ್ಟಿಯನ್ನು ಹೊರಿಸಿಕೊಂಡು ಮನೆಗೆ ಮರಳಿದಳು. ಬೆವರಿನಿಂದ ಒದ್ದೆ ಒದ್ದೆಯಾಗಿ ದ್ದಳು. ಬರುತ್ತಲೇ ಹೇಳಿದಳು—ಯಾರಿದ್ದೀರಿ ಅಲ್ಲಿ ? ಬನ್ನಿ, ಈ ಹೊರೆ ಇಳಿಸಿ.

ರಮಾನಾಥನು ಬಂದು ಆ ಹೊರಲಾರದ ಹೊರೆಯನ್ನು ಕೆಳಗಿಳಿಸಿದನು.

ಜಗ್ಗೋ ಕೇಳಿದಳು—ಎಲ್ಲಿಗೆ ಹೋಗಿದ್ದಾರೆ ?

ರಮಾ—ನನಗೆ ಗೊತ್ತಿಲ್ಲ. ಈಗ ಎಲ್ಲಿಯೋ ಹೋದ ಹಾಗಾಯಿತು.

ಮುದುಕಿಯು ಅಲ್ಲೇ ಕೂತು ಹರಕು ಬೀಸಣಿಗೆಯೊಂದನ್ನು ತೆಗೆದು ಬೀಸಿಕೊಳ್ಳುತ್ತಾ ಹೇಳಿದಳು—ಹಾಂ, ಗಾಂಜದ ನೆನಪಾಯಿತೋ ಏನೋ. ನಾನು ಇಲ್ಲಿ ಸಾಯುತ್ತಿದ್ದರೂ ಇವರಿಗೆ ಗಾಂಜಾ, ವಿನೋದ ಎಲ್ಲ ಬೇಕು.

ರಮಾನಾಥನಿಗೆ ದೇವೀದೀನನು ಗಾಂಜಾ ಸೇದುವನೆಂಬುದು ಗೊತ್ತಿ ದ್ದರೂ ಮುದಕಿಯ ಕೋಪವನ್ನು ತಣಿಸುವುದರ ಸಲುವಾಗಿ ಹೇಳಿದನು— ಎಲ್ಲಿ, ನಾನಂತೂ ನೋಡಲಿಲ್ಲ ಗಾಂಜಾ ಸೇದುವುದನ್ನು.

ಮುದುಕಿ ಬೆನ್ನಮೇಲಿನ ಸೆರಗನ್ನು ತೆಗೆದು ಬೀಸಣಿಕೆಯ ಹಿಡಿಕೆ ಯಿಂದ ಬೆನ್ನು ತುರಿಸಿಕೊಳ್ಳುತ್ತ ಹೇಳಿದಳು—ಇವರಿಗೆ ಹಿಡಿಯದ ಹುಚ್ಚೇ

ಇಲ್ಲ. ಗಾಂಜಾ ಆಗಿದೆ, ಶರಾಬು ಆಗಿದೆ. ಇನ್ನು ಅಫೀಮು ತಿಂದಿದ್ದಾರೋ ಇಲ್ಲವೋ ದೇವರಿಗೇ ಗೊತ್ತು. ನಾನೇನು ಯಾವಾಗಲೂ ಇವರ ಮೇಲ್ವಿಚಾರದಲ್ಲಿರುತ್ತೇನೆಯೆ. ಆಗಲಿ, ತಿನ್ನಲಿ, ಎಷ್ಟು ಬೇಕಾದರೂ ತಿನ್ನಲಿ. ಕೈಯಲ್ಲೊಂದು ನಾಲ್ಕು ಕಾಸಾದುದೇ ತಡ ಬೇರೆಯವರ ಮಕ್ಕಳೂ ಇವರ ಸಂಬಂಧಿಕರಾಗುವರು. ಆದರೂ ಈ ಪ್ರಾಣಿಗೆ ಎಳ್ಳಷ್ಟಾದರೂ ಚಿಂತೆ ಬೇಕೆ. ಒಮ್ಮೆ ಆ ತೀರ್ಥ ಒಮ್ಮೆ ಈ ತೀರ್ಥ ಎಂದು ಅಲೆದರಾಯಿತು. ಇಲ್ಲಿ ದುಡಿದು ದುಡಿದು ಸಾಯಬೇಕು ನಾನು. ದೇವರು ಒಯ್ದರೆ ಈ ಕುಸಂಗವಾದರೂ ತಪ್ಪೀತು. ಆಮೇಲೆ ಆಗ ಇವರಿಗೆ ತಿಳಿವು ಬಂದೀತು. ಆಗ ಇವರ ವೆಚ್ಚಕ್ಕೆ ಹಣದ ಸರಬರಾಯಿ ಮಾಡಲು ಜಗ್ಗೋ ಎಲ್ಲಿದ್ದಾಳೆ? ಇವರು ನೆತ್ತರ ಕಣ್ಣೀರನ್ನು ಸುರಿಸದಿದ್ದರೆ, ಮತ್ತೆ ಹೇಳಬೇಕು, (ಮಜೂರನ ಹತ್ತಿರ) ನಿನ್ನದೆಷ್ಟಾಯಿತು ?

ಮಜೂರನು ಬೀಡಿ ಹಚ್ಚುತ್ತಾ ಎಂದನು— ಹೊರಿ ನೋಡವ್ವಾ, ಕುತ್ತಿಗೆ ಕಡಿದಂತಾಗಿದೆ.

ಜಗ್ಗೋ ನಿರ್ದಯತೆಯಿಂದ ಎಂದಳು—ಹಾಂ, ಹಾಂ, ಕುತ್ತಿಗೆ ಮುರಿಯಿತಲ್ಲವೆ ? ಆಹಾ, ಎಷ್ಟು ಸುಕುಮಾರ ನೀನು ? ಇಗೋ, ಇನ್ನು ನಾಳೆಯೂ ಬಂದುಬಿಡು.

ಮಜೂರನು ಅಷ್ಟು ಕಡಮೆ ಸಾಲದೆಂದು ಗೊಣಗಿದನು. ಜಗ್ಗೋ ಸ್ವಲ್ಪ ಪಲ್ಯದ ಸೊಪ್ಪನ್ನು, ಕೆಲವು ಉಳ್ಳಾಗಡ್ಡೆಗಳನ್ನೂ ಕೊಟ್ಟು ಅವನನ್ನು ಕಳಿಸಿ, ರಮಾನಾಥನ ಹತ್ತಿರ ಅಂದಿನ ಲೆಕ್ಕ ಬರೆಯಹೇಳಿದನು. 'ಏನೋ ಅಪ್ಪಾ, ಇವೊತ್ತು ಬಾಜಾರಕ್ಕೆ ಬೆಂಕಿ ಹಿಡಿದಿದೆಯೋ ಏನೋ ಬೆಲೆ ಬಹಳ ವಿಪರೀತವಾಗಿ ಬಿಟ್ಟಿದೆ' ಎನ್ನುತ್ತಾ ಒಂದೊಂದೇ ಸಾಮಾನನ್ನು ಅಂಗಳಿಯಲ್ಲಿ ತಕ್ಕ ಸ್ಥಳದಲ್ಲಿ ಇಡುತ್ತಾ ರಮಾನಾಥನಿಗೆ ಲೆಕ್ಕ ಹೇಳುತ್ತಿದ್ದಳು. ಎಲ್ಲಾ ಮುಗಿದ ಮೇಲೆ ಲೆಕ್ಕವನ್ನು ಎರಡು ಬಾರಿ ಓದಿಸಿ, ಅಡ್ಡದಲ್ಲಿ ಕೂತು ಚಿಲಮು ಹಚ್ಚಿದಳು. ಅವಳು ಅದನ್ನು ಸೇದುವಾಗ ಆನಂದಕ್ಕಾಗಿ ಅಲ್ಲ, ಎದೆಯನ್ನು ಕಾವೇರಿಸುವುದಕ್ಕಾಗಿ ಸೇದುವಳೋ ಎಂದು ತೋರುತ್ತಿತ್ತು. ಒಂದು ಕ್ಷಣದ ಮೇಲೆ ಹೇಳಿದಳು—ಬೇರೊಬ್ಬಳಾಗಿದ್ದರೆ ಎಂದೋ ಓಡಿ ಹೋಗುತ್ತಿದ್ದಳು. ನಸುಕಿಗೆ ಮುಂಚೆ ಎದ್ದು ಗೆಯ್ಯಲು ತೊಡಗಿದರೆ ರಾತ್ರಿ

ಹತ್ತು ಗಂಟೆಯ ವರೆಗೆ ಬಿಡುವಿರುವುದಿಲ್ಲ. ನಾಲ್ಕು ಕಾಸು ಮಾಡಿ ಅದನ್ನು ಎಲ್ಲಿರಿಸಿದರೂ ಇವರ ಖರ್ಚಿಗೆ ಬೇಕು. ನಾನೆಲ್ಲಾದರೂ ಒಡವೆ-ತೊಡವೆ ಮಾಡಿಸಿದರೆ ಅದು ಇವರ ಕಣ್ಣಿಗೆ ಕುಕ್ಕುತ್ತದೆ. ಕಟಕಿ ಮಾತಿನಿಂದ ಪೀಡಿಸುತ್ತಿರುತ್ತಾರೆ. ಮಕ್ಕಳ ಸುಖವನ್ನು ದೇವರು ಕೊಡಲಿಲ್ಲ. ಏನು ಮಾಡಲಿ? ಹಾಗೆಂದು ಎದೆಯೊಡೆದುಕೊಂಡು ಸಾಯಲೆ? ಸಾವು ಬೇಡಿದರೂ ಬರುವುದಿಲ್ಲ. ಸುಖಭೋಗವು ನನ್ನ ಹಣೆಯಲ್ಲಿ ಬರೆದಿದ್ದರೆ ಜವ್ವನಿಗ ಮಕ್ಕಳು ಸತ್ತು ಈ ಕುಡುಕನೊಡನೆ ಕಾಲಕಳೆಯಬೇಕಿತ್ತೆ? ಸ್ವದೇಶಿಯ ಜಗಳದಲ್ಲಿ ಬಿದ್ದು ಇವರೇ ಇಬ್ಬರು ಹುಡುಗರ ಪ್ರಾಣ ತೆಗೆದವರು. ಇಲ್ಲಿ ಬಾ, ನಿನಗೆ ಅವರು ತಿರುಗಿಸುತ್ತಿದ್ದ ಮುಗ್ದರದ ಜೋಡನ್ನು ತೋರಿಸುವೆ. ಇವನ್ನು ಐನೂರು ಸುತ್ತು ತಿರುಗಿಸುತ್ತಿದ್ದರು.

ಕತ್ತಲು ಕೋಣೆಯ ನೆಲದ ಮೇಲೆ ಎರಡು ಮುಗ್ದರಗಳು ನಿಂತಿದ್ದುವು. ಮುದುಕಿ ಸಗರ್ವ ನೇತ್ರದಿಂದ ನೋಡಿ ಎಂದಳು—ಜನರು ಇವನ್ನು ಯಾರಿಗಾದರೂ ಕೊಟ್ಟುಬಿಡು ಎಂದು ಹೇಳುತ್ತಿದ್ದರು. ಆದರೆ ನಾನು ಕೊಡಲಿಲ್ಲ. ನನ್ನ ಪುತ್ರಯುಗಲವಿದು. ಇವೇ ನನ್ನಿಬ್ಬರು ಮಕ್ಕಳು.

ಮುದುಕಿಯ ವಿಷಯದಲ್ಲಿ ರಮಾನಾಥನಿಗೆ ಅಸೀಮ ಶ್ರದ್ಧೆ ಉತ್ಪನ್ನವಾಯಿತು. ಎಂತಹ ಪಾವನ ಧೈರ್ಯ! ಮರದ ತುಂಡುಗಳೆರಡಕ್ಕೆ ಜೀವನ ಪ್ರದಾನ ಮಾಡಬೇಕಾದರೆ ಆ ವಾತ್ಸಲ್ಯ ಎಷ್ಟು ವಿಶಾಲವಾಗಿರಬೇಡ! ಜಗ್ಗೋ ಮಾಯಾ-ಲೋಭಗಳಲ್ಲಿ ಪೂರ್ತ ಮುಳುಗಿದವಳೆಂದೂ, ಕಾಸಿಗಾಗಿ ಒದ್ದಾಡುವವಳೆಂದೂ, ಕೋಮಲಭಾವಗಳು ಇವಳನ್ನು ಸೋಂಕಲಾರವೆಂದೂ ರಮಾನಾಥನು ಬಗೆದಿದ್ದನು. ಇಂದು ಅವನಿಗೆ ಆಕೆಯ ಹೃದಯವು ಎಷ್ಟು ಸ್ನೇಹಮಯ, ಎಷ್ಟು ಕೋಮಲ, ಮತ್ತು ಅದೆಷ್ಟು ಮನಸ್ವಿ ಎಂಬುದರ ಅರಿವಾಯಿತು. ಮುದುಕಿಯು ಅವನ ಕಡೆಗೆ ಕಣ್ಣೆತ್ತಿ ನೋಡಿದಾಗ ಏಕೋ ಏನೋ ಆಕೆಯ ಮಾತೃ ಹೃದಯವು ಅವನನ್ನು ಎದೆಗವಚಿಕೊಳ್ಳಬೇಕೆಂದು ಅಧೀರವಾಯಿತು. ಇಬ್ಬರು ಹೃದಯಗಳೂ ಪ್ರೇಮಸೂತ್ರದಿಂದ ಒಂದಾದುವು. ಒಂದೆಡೆ ಪುತ್ರಸ್ನೇಹವಿತ್ತು, ಇನ್ನೊಂದೆಡೆ ಮಾತೃಭಕ್ತಿ. ಇಂದಿನತನಕ ಇಬ್ಬರನ್ನೂ ಪೃಥಕ್ಕಾಗಿರಿಸಿದ್ದ ಮಾಲಿನ್ಯವು, ಈಗ ಒಮ್ಮೆಗೇ ದೂರವಾಯಿತು.

ಮುದುಕಿ ಎಂದಳು— ಮುಖ ತೊಳೆದಾಗಿದೆಯಲ್ಲವೆ? ಬಲು ಸಿಹಿಯಾದ ದ್ರಾಕ್ಷೆಹಣ್ಣು ತಂದಿರುವೆ. ಒಂದು ತಿಂದು ನೋಡು.

ರಮಾನಾಥನು ಅದನ್ನು ತಿನ್ನುತ್ತಾ ಹೇಳಿದನು—ಇವೊತ್ತಿನಿಂದ ನಾನು ನಿನ್ನನ್ನು ಅಮ್ಮಾ ಎಂದು ಕರೆಯುವೆ.

ಮುದುಕಿಯ ಶುಷ್ಕ, ಜ್ಯೋತಿಹೀನ, ಕೃಪಣ ನೇತ್ರದಿಂದ ಮುತ್ತಿನಂತಹ ಎರಡು ಬಿಂದುಗಳುರುಳಿದುವು.

ಇಷ್ಟರಲ್ಲಿ ದೇವೀದೀನನು ಮೆಲುನಡೆಯಿಂದ ಒಳಗೆ ಬಂದು ನಿಂತನು. ಮುದುಕಿ ಸಿಟ್ಟಿನಿಂದ ಹೇಳಿದಳು— ರಾಯರ ಸವಾರಿ ಎಲ್ಲಿ ಹೋಗಿತ್ತು, ಇಷ್ಟು ಮುಂಜಾನೆ?

'ಎಲ್ಲೂ ಇಲ್ಲ. ಸ್ವಲ್ಪ ಕೆಲಸದ ಮೇಲೆ ಹೋಗಿದ್ದೆ.'

ಯಾವ ಕೆಲಸ, ನಾನೂ ಕೇಳುತ್ತೇನೆ. ಅಥವಾ ನಾನು ಕೇಳವಂಥಾದ್ದಲ್ಲವೊ!'

'ಹೊಟ್ಟೆ ಕಡೆಯುತ್ತಿತ್ತು. ಚೂರ್ಣ ತೆಗೆದುಕೊಳ್ಳುಲೆಂದು ವೈದ್ಯರ ಬಳಿ ಹೋಗಿದ್ದೆ'

'ಸುಳ್ಳು, ಇದು ಪೂರಾ ಸುಳ್ಳು. ನೀವು ಗಾಂಜಾ ಹುಡುಕಿಕೊಂಡು ಹೋಗಿರಲಿಲ್ಲವೆ'

'ಇಲ್ಲ. ನೀನು ಸುಮ್ಮನೆ ನನ್ನ ಮೇಲೆ ಅಪವಾದ ಹೊರಿಸುತ್ತಿರುವಿ. ನಿನ್ನ ಕಾಲು ಹಿಡಿದು ಬೇಕಾದರೆ ಪ್ರಮಾಣ ಮಾಡುತ್ತೇನೆ.'

'ಹಾಗಾದರೆ ಬೇರೆಲ್ಲಿ ಹೋಗಿದ್ದೆ?'

'ಹೇಳಿದೆನಲ್ಲವೆ ರಾತ್ರಿ ಎರಡು ತುತ್ತು ಹೆಚ್ಚು ಉಂಡುದರಿಂದ ಹೊಟ್ಟೆ ಉಬ್ಬರಿಸಿ......'

'ಸುಳ್ಳು ಖಂಡಿತ ಸುಳ್ಳು, ನೀವು ಹೇಳುವುದು ನಿಜವಲ್ಲವೆಂದು ನಿಮ್ಮ ಮೋರೆಯೇ ಹೇಳುತ್ತಿದೆ. ಈ ಮುಪ್ಪಿನಲ್ಲಿಯೂ ನಿಮಗೆ ಅಮಲೇರುತ್ತದಲ್ಲವೆ? ಇಲ್ಲಿ ನಾನು ಸತ್ತುಕೊಳ್ಳಬೇಕು. ಬೆಳಿಗ್ಗೆ ಹೋದವರು ಒಂಭತ್ತು ಗಂಟೆಗೆ ಬರುವುದು. ಇಲ್ಲಿ ಯಾರಾದರೂ ನಿಮ್ಮ ತೊತ್ತಿದ್ದಾಳೆಂದು ಬಗೆದಿರಾ? ಏನು?

ದೇವೀದೀನನು ಒಂದು ಪೊರಕೆಯನ್ನು ತೆಗೆದು ಅಂಗಡಿಯನ್ನು ಗುಡಿಸಹತ್ತಿದನು. ಆದರೆ ಮುದುಕಿ ಅವನ ಕೈಯಿಂದ ಪೊರಕೆಯನ್ನೆಳೆದು ಕೊಂಡು ಕೇಳಿದಳು. ಎಲ್ಲಿ ಹೋಗಿದ್ದಿಯೆಂದು ಹೇಳದೆ ಒಳಗೆ ಕಾಲಿಡ ಲಿಕ್ಕೆ ಬಿಡಲಿಕ್ಕಿಲ್ಲ.

ದೇವೀದೀನನು ಚಡಪಡಿಸುತ್ತ ಹೇಳಿದನು—ಒಂದು ಪತ್ರಿಕೆಯ ಕಚೇರಿಗೆ ಹೋಗಿದ್ದೆ. ಸರಿ. ಆಯಿತಲ್ಲವೆ? ಇನ್ನು ಏನು ಬೇಕಾದರೂ ಮಾಡು.

ಮುದುಕಿ ತಲೆಗೆ ಕೈಯಿಂದ ಹೊಡೆದುಕೊಂಡು ಎಂದಳು—ಪುನಃ ಆರಂಭಿಸಿದಿರಾ? ಪತ್ರಿಕೆಗಳ ಹತ್ತಿರ ಹೋಗುವುದಿಲ್ಲವೆಂದು ಕಿವಿಹಿಡಿದು ಕೊಂಡು ಹೇಳಿದುದು ಅಷ್ಟು ಬೇಗನೆ ಮರೆತು ಹೋಯಿತೆ? ಇದೇ ಬಾಯಿ ಯಿಂದಲೇ ಅಲ್ಲವೇ ಹೇಳಿದುದು?

'ವಿಷಯ ಏನೆಂದು ತಿಳಿದುಕೊಳ್ಳದೆಯೆ ಏಕೆ ಬೊಬ್ಬಿಡುತ್ತೀಯೆ?'

ಗೊತ್ತಿದೆ ವಿಷಯ ಚೆನ್ನಾಗಿ ಗೊತ್ತಿದೆ. ಅವರು ದಂಗೆ ಮಾಡುವದು; ಜೈಲಿಗೆ ಹೋಗುವದು, ಪಾಪ, ಬಡವರ ಮಕ್ಕಳು ಈಗ ಇಪ್ಪತ್ತು ವರ್ಷಗಳಿಂದ ನೋಡುತ್ತಿದ್ದೇನೆ ಅಲ್ಲಿಗೆ ಹೋಗಬರುತ್ತಿರುವವರನ್ನು ಪೋಲಿಸರು ಹಿಡಿಯುತ್ತಿದ್ದಾರೆ ಏನು, ಮುಪ್ಪಿನಲ್ಲಿ ಜೈಲಿನ ರೊಟ್ಟಿ ತಿನ್ನಬೇಕೆಂದು ಆಶೆ ಹುಟ್ಟಿದೆಯೆ? ಹೇಗೆ?

ದೇವೀದೀನನು ಒಂದು ಲಕ್ಕೋಟೆಯನ್ನು ರಮಾನಾಥನ ಕೈಯಲ್ಲಿತ್ತು ಹೇಳಿದನು—ಇಗೋ ತಮ್ಮಾ, ರೂಪಾಯಿಗಳು. ಲೆಕ್ಕ ಮಾಡಿಕೊ. ನೋಡು, ಈ ರೂಪಾಯಿಗಳನ್ನು ವಸೂಲು ಮಾಡಲು ಹೋಗಿದ್ದೆ. ಮನಸ್ಸು ಕೇಳದಿದ್ದರೆ ಇದರಲ್ಲರ್ಧ ತೆಗೆದುಕೊ.

ಮುದುಕಿಯು ಕಣ್ಣು ಹೊರಳಿಸಿಕೊಂಡು ಹೇಳಿದಳು—ಒಹ್ಹೋ! ನಿಮ್ಮ ಜತೆಯಲ್ಲಿ ಇವನನ್ನೂ ಎಳೆದುಕೊಂಡು ಹೋಗಬೇಕೆಂದು ಮಾಡಿರುವಿರಾ? ನಿಮ್ಮ ರೂಪಾಯಿ ಬೆಂಕಿಗೆ ಎಸೆಯುತ್ತೇನೆ. ನಿನಗೆ ಈ ರೂಪಾಯಿ ಬೇಡ, ಮಗೂ ಬೇಕಿದ್ದರೆ ಎಷ್ಟು ಬೇಕೋ ಅಷ್ಟು ನನ್ನ ಹತ್ತಿರ ಕೇಳು. ಈಗ ಹಣ ಕೊಟ್ಟು ಆಶೆ ಹುಟ್ಟಿಸುತ್ತಾರೆಯೇನು ಈ ಪತ್ರಿಕೆಗಳವರು? ಚೆನ್ನಾಯಿತು. ಇವರ ರೂಪಾಯಿ ತೆಗೆದು ಬಿಸಾಡು. ಹೂಂ.

ರಮಾನಾಥನು ಎಲ್ಲ ವೃತ್ತಾಂತವನ್ನು ತಿಳಿಸಿದ ಮೇಲೆ ಮುದುಕಿಯ ಚಿತ್ತವು ಶಾಂತವಾಯಿತು. ಎಂದ ಹುಬ್ಬು ಕೆಳಗಿಳಿಯಿತು. ಕಠೋರ ಮುದ್ರೆ ಕೋಮಲವಾಯಿತು. ಮೇಘಪಟವನ್ನು ಹರಿದೊಗೆದು ನೀಲಾಕಾಶವು ನಗ ತೊಡಗಿತು. ವಿನೋದಕ್ಕಾಗಿ ಹೇಳಿದಳು—ಇದರಲ್ಲಿ ನನಗೇನು ತಪುವಿ ಮಗೂ ?

ರಮಾನಾಥನು ಲಕ್ನೋಟಿಯನ್ನೇ ಆಕೆಗೆ ನೀಡಿ ಹೇಳಿದನು—ಎಲ್ಲವೂ ನಿನ್ನವೇ, ರೂಪಾಯಿ ಹಿಡಕೊಂಡು ನಾನೇನು ಮಾಡಲಿ !

'ಮನೆಗೆ ಕಳುಹಿಸಬಾರದೆ. ಬಂದು ಇಷ್ಟು ದಿನಗಳಾದರೂ ಏನೂ ಕಳುಹಿಸಲಿಲ್ಲ. ಅಲ್ಲವೆ ?'

'ಅಮ್ಮಾ, ನನ್ನ ಮನೆ ಇದೇ. ಬೇರಾವ ಮನೆಯೂ ನನಗಿಲ್ಲ ?

ಮುದುಕಿಯ ಹೃದಯವು ಗದ್ಗದವಾಯಿತು. ಅವಳ ಹೃದಯ ಈ ಮಾತೃಭಕ್ತಿಯನ್ನು ಪಡೆಯಲು ಎಷ್ಟೋ ದಿನಗಳಿಂದ ಹಾತೊರೆಯು ತ್ತಿತ್ತು ! ಈ ಕೃಪಣ ಹೃದಯದಲ್ಲಿ ಎಷ್ಟು ಪ್ರೇಮವು ಸಂಚಿತವಾಗುತ್ತಿತ್ತೋ, ಅದೆಲ್ಲಾ ತಾಯಿಯ ಸ್ತನದಲ್ಲಿ ಕೂಡಿಕೊಳ್ಳುವ ಹಾಲಿನಂತೆ ಹೊರಬರಲು ಆತುರಗೊಂಡಿತು.

ಅವಳು ನೋಟುಗಳನ್ನು ಲೆಕ್ಕಮಾಡಿ ಹೇಳಿದಳು—ಸರಿ, ಇನ್ನು ಐವತ್ತು ನಾನು ಕೊಡುವೆ. ಅದರಿಂದ ಒಂದು ಚಿಕ್ಕ ಚಹದ ಅಂಗಡಿಯನ್ನು ತೆರೆ. ಬೆಳಿಗ್ಗೆ-ಸಂಜೆ ಎರಡೆರಡು ತಾಸು ಕುಳಿತೆಯಾದರೆ ದಿನಗಳೆವುದಕ್ಕೆ ಬೇಕಾ ದಷ್ಟು ಸಿಗುವುದರಲ್ಲಿ ಸಂಶಯವಿಲ್ಲ. ನಮ್ಮ ಅಂಗಡಿಯ ಗಿರಾಕಿಗಳಲ್ಲಿ ಹೆಚ್ಚಿ ನವರು ನಿನ್ನಲ್ಲಿಯೇ ಚಹಾ ಕುಡಿವರೆಂದಿಟ್ಟುಕೋ.

ದೇವೀದೀನನೆಂದನು—ಹಾಗಾದರೆ ನನ್ನ ಚಿಲಮಿನ ಖರ್ಚು ಚಾದ ಅಂಗಡಿಯಿಂದಲೇ ನಡೆಯುವುದು.

ಮುದುಕಿ ವಿಕಸಿತ ಪುಳಕಿತ ನೇತ್ರಗಳಿಂದ ಅವನನ್ನು ನೋಡುತ್ತಾ ಎಂದಳು—ಉಂ ಹುಂ, ಕಾಸು-ಕಾಸಿನ ಲೆಕ್ಕ ತೆಗೆದುಕೊಳ್ಳುವೆ. ಹಾಗೆಲ್ಲ ಮಾಡಲಿಕ್ಕೆ ಬಿಡುತ್ತೇನೆಂದೆಣಿಸುವುದು ಬೇಡ.

ರಮಾನಾಥನು ತನ್ನ ಕೊಠಡಿಯನ್ನು ಸೇರಿದನು. ಅವನ ಮನಸ್ಸು ಬಹಳ ಪ್ರಸನ್ನವಾಗಿತ್ತು. ಇಂತಹ ಆನಂದ ಅವನ ಮನೆಯಲ್ಲಿಯೂ ಅವನಿಗೆ ಪ್ರಾಪ್ತವಾಗಿದ್ದಿಲ್ಲ. ಮನೆಯಲ್ಲಿ, ಸ್ನೇಹಸಿಕ್ಕಿದರೆ ಅದು ಅವನ ಹಕ್ಕಿನದಾಗಿತ್ತು. ಇಲ್ಲಿ ಹಾಗಲ್ಲ. ಇದು ಆಕಾಶದಿಂದ ಸುರಿದ ಸ್ನೇಹ.

ಅವನು ಸ್ನಾನಮಾಡಿ, ತಿಲಕವಿಟ್ಟುಕೊಂಡು ಹೊರಟಾಗ ಮುದುಕಿ ಎಂದಳು—ಮಗೂ. ನಿನ್ನ ಊಟವನ್ನು ನೀನೇ ತಯಾರಿಸುವುದೆಂದರೆ ಎಷ್ಟು ಪ್ರಯಾಸ? ನಮ್ಮ ನೆರೆಯಲ್ಲೇ ಒಬ್ಬಳು ಬಡ ಬ್ರಾಹ್ಮಣಿತಿ ಇದ್ದಾಳೆ. ಅವಳ ಹತ್ತಿರ ಹೇಳುವೆ ಇನ್ನು ನಿನಗೆ ಆ ತೊಂದರೆ ಬೇಡ.

ಆ ವೃದ್ಧ ಕಣ್ಣುಗಳಿಂದ ಪ್ರಗಾಢ, ಅಖಂಡ ಮಾತೃತ್ವವು ಹೊಳೆಯುತ್ತಿತ್ತು. ಎಷ್ಟು ವಿಶುದ್ಧ! ಎಷ್ಟು ಪವಿತ್ರ! ಮೇಲು-ಕೀಳು, ಜಾತಿ ಮರ್ಯಾದೆಗಳ ವಿಚಾರವು ತನ್ನಷ್ಟಕ್ಕೆ ತೊಲಗಿಹೋಯಿತು. ಅವನೆಂದನು—ನೀನು ನನ್ನ ತಾಯಿಯಾದಬಳಿಕ ಮಡಿ-ಮೈಲಿಗೆಯ ವಿಚಾರವೇಕಮ್ಮಾ? ನೀನು ಮಾಡಿದ್ದನ್ನೇ ತಿನ್ನುವೆ.

ಮುದುಕಿ ನಾಲಗೆಯನ್ನು ಹಲ್ಲಿನಿಂದ ಕಚ್ಚಿ ಹೇಳಿದಳು—ಎಲಾ, ಎಲ! ಇದೇನು ಹೇಳುತ್ತಿರುವೆ. (ನೀನು ಬ್ರಾಹ್ಮಣನು, ನಾವು ಖಟಿಕರು! ಹೀಗೆಲ್ಲಾದರೂ ಉಂಟೆ?

'ನಾನು ನಿನ್ನ ಅಡುಗೆ ಮನೆಯಲ್ಲೇ ಉಣ್ಣುವೆ. ತಂದೆತಾಯಿಗಳು ಖಟಿಕರಂತೆ ಮಗನು ಖಟಿಕನಲ್ಲವೆ? ಯಾರ ಆತ್ಮವು ಪವಿತ್ರವಿರುತ್ತದೋ ಅವನೇ ಬ್ರಾಹ್ಮಣನು.'

'ನಿನ್ನ ಮನೆಯವರೆಲ್ಲಾದರೂ ಕೇಳಿದರೆ ಏನನ್ನುವಿ?'

'ಯಾರು ಏನಂದುಕೊಳ್ಳುತ್ತಾರೆ ಎನ್ನುವುದರ ಚಿಂತೆ ನನಗಿಲ್ಲಮ್ಮಾ. ಮನುಷ್ಯನು ನೀಚನಾಗುವುದು ಪಾಪದಿಂದ, ಉಣುಸು-ತಿನಿಸಿನಿಂದಲ್ಲ. ಪ್ರೇಮದಿಂದ ದೊರೆವ ಭೋಜನವು ಪರಮಪವಿತ್ರವು. ಅದನ್ನು ದೇವತೆಗಳೂ ಸ್ವೀಕರಿಸುತ್ತಾರೆ.'

ಮುದುಕಿಯ ಹೃದಯದಲ್ಲಿಯೂ ಜಾತಿಗೌರವದ ಭಾವವು ಉದಯವಾಯಿತು.

'ಖಟಿಕರೆಂದರೆ ಅಂತಹ ನೀಚ ಜಾತಿಯವರಲ್ಲ.' ನಾನು ಬ್ರಾಹ್ಮಣರ ಕೈಯಿಂದ ತಿನ್ನುವುದಿಲ್ಲ. ಮೀನು-ಮಾಂಸ ನಮ್ಮ ಹತ್ತಿರ ಬರಕೂಡದು. ಹಲ-ಕೆಲವರು ಮರೆಯಲ್ಲಿ ಶರಾಬು ಕುಡಿಯುತ್ತಾರೆ. ಈ ದುಶ್ಚಟ ಯಾರನ್ನೂ ಬಿಟ್ಟದ್ದಲ್ಲ. ಎಂತೆಂತಹ ದೊಡ್ಡ ದೊಡ್ಡ ತಿಲಕಧಾರಿಗಳೂ ಗಟ ಗಟ ಕುಡಿದು ಬಿಡುತ್ತಾರೆ. ಆದಿರಲಿ. ನಿನಗೆ ನನ್ನ ಕೈಯಿಡಿ ರೊಟ್ಟಿ ರುಚಿಸೀತೆ ?

ರಮಾನಾಥನು ನಸುನಕ್ಕು ಹೇಳಿದನು—ಪ್ರೇಮದಿಂದ ಕೊಡುವ ರೊಟ್ಟಿಗಳಲ್ಲಿ ಅಮೃತವಿರುತ್ತದಮ್ಮಾ.

ಮುದುಕಿ ಅಲ್ಲಿಂದೆದ್ದಾಗ ಆಕೆಯ ಸೆರಗಿನಲ್ಲಿ ಆನಂದದ ನಿಧಿ ತುಂಬಿ ದಂತೆ ಕಂಡಿತು.

## ೨೬

ರಮಾನಾಥನು ಹೊರಟ ದಿನಿಂದ ರತನಳಿಗೆ ಜಾಲಪಳ ವಿಷಯ ಚಿಂತೆಗಿಟ್ಟುಕೊಂಡಿತ್ತು. ಯಾವುದಾದರೊಂದು ನೆವದಿಂದ ಆಕೆಗೆ ನೆರವಾಗ ಬೇಕೆಂದು ಬಯಸುತಿದ್ದಳು. ಜಾಲಪಳಿಗೆ ಅದು ತಿಳಿಯಬಾರದೆಂಬುದೂ ಆಕೆಯ ಬಯಕೆಯಾಗಿತ್ತು. ಜಾಲಪಳ ಕಣ್ಣೀರನ್ನು ಕಂಡು ಆಕೆಯ ಹೃದ ಯವು ತಳಮಳಿಸುತಿತ್ತು. ತನ್ನ ಮನೆಯ ಕತ್ತಲನ್ನು ನೀಗಿಕೊಳ್ಳ ಲೆಂದು ಆವಳು ಜಾಲಪಳಲ್ಲಿಗೆ ಹೋಗಿ ಬರುತ್ತಿದ್ದಳು. ಈಗ ಅಲ್ಲಿಯೂ ಅದೇ ಗತಿಯಾಯಿತು. ಅವಳ ಸ್ವಂತ ಜೀವನವು ವ್ರತದ ವೇದಿಯಲ್ಲರ್ಪಿತವಾ ಗಿತ್ತು. ತನುಮನಗಳಿಂದ ಅವಳು ವ್ರತಪಾಲನೆ ಮಾಡಲೆಳಸುತ್ತಿದ್ದಳು; ಆದರೆ ಸರಿತೆಯೊಳಗಿರುವಂತಹ ಪ್ರವಾಹವು, ತರಂಗವು, ನಾದವು, ಶಿವ ಲಿಂಗದ ಮೇಲಿರಿಸಿದ ಕಲಶದಲ್ಲಿರುವುದೇನು ? ಶಿವನ ಮಸ್ತಕವನ್ನು ತಣ್ಣಗಿ ರಿಸುವದೇ ಅದರ ಕೆಲಸ; ಆದರೆ ಸರಿತೆಯ ಪ್ರವಾಹ, ತರಂಗನಾದಗಳು ಅದ ರೊಳಗಿಂದ ಪೂರಾ ಲೋಪವಾಗಿವೆ ಎಂದು ಅರ್ಥವಲ್ಲ.

ನಗರದ ಪ್ರತಿಷ್ಠಿತ ಸಂಪನ್ನ ಮನೆಗಳೊಡನೆ ರತನಳಿಗೆ ಪರಿಚಯವಿ ದ್ದಿಲ್ಲವೆಂತಲ್ಲ; ಆದರೆ ಪ್ರತಿಷ್ಠೆ ಇದ್ದಲ್ಲಿ ಮನೋರಂಜನೆಯಿತ್ತು, ತೋರಿಕೆ ಯಿತ್ತು, ಈರ್ಷೆ ಇತ್ತು, ನಿಂದೆ ಇತ್ತು. ಕ್ಲಬ್ಬಿನ ಸಂಸರ್ಗವೂ ಅವಳಿಗೆ

ಬೇಡವಾಗಿತ್ತು. ಅಲ್ಲಿ ವಿನೋದ ಮತ್ತು ಕ್ರೀಡೆಗಳಿರುತ್ತಿದ್ದರೂ, ಜತೆಗೆ ಪುರುಷರ ಆತುರನೇತ್ರಗಳೂ, ಉನ್ಮತ್ತ ಶಬ್ದಗಳೂ ತುಂಬಿರುತ್ತಿದ್ದವು. ಜಾಲಪಳ ಮನೆಯಲ್ಲಿ ಆ ಆಡಂಬರ, ಆ ಸಿರಿವಂತಿಗೆಗಳಿಲ್ಲವಾದರೆ ಆ ತೋರಿಕೆ ಆ ಈರ್ಷೆಗಳೂ ಇರಲಿಲ್ಲ. ಜೀವನವೆಂಬ ಪೇಟೆಯಲ್ಲಿ ಬೇರೆಲ್ಲ ಅಂಗಡಿಕಾರರ ಕುಟಿಲತೆಗೆ ಹೇವರಿಸಿ ರತನಳು ಈ ಚಿಕ್ಕ ಅಂಗಡಿಯನ್ನು ಆಶ್ರಯಿಸಿದ್ದಳು; ಆದರೆ ಇದೂ ಮುರಿದುಬಿತ್ತು. ಜಾಲಪಳ ಮನಸ್ಸನ್ನು ಆನಂದಪಡಿಸುವುದಕ್ಕೆ ಅವಳು ದಿನಾಲೂ ಏನಿಲ್ಲೊಂದು ವಸ್ತುವನ್ನು ತರುವಳು. ಈಗೀಗ ಅವಳು ರಾಮೇಶ್ವರಿಯ ಹತ್ತಿರವೂ ಹರಟೆಗೆ ಕೂಡುತ್ತಿದ್ದಳು . ಗೋಪಿ-ವಿಶ್ವಂಭರರನ್ನು ತನ್ನ ಮೋಟಾರಿನಲ್ಲಿ ಕುಳ್ಳಿರಿಸಿ ಆಡ್ಡಾಡಲು ಕರಕೊಂಡು ಹೋಗುತ್ತಿದ್ದಳು. ಅವರೂ ಅವಳ ಬಂಗಲೆಗೆ ಹೋಗಿ ಆಡುತ್ತಿದ್ದರು. ವಕೀಲರಿಗಾದರೂ ರಮಾನಾಥನ ಮನೆಯವರ ಮೇಲೆ ಒಂದು ರೀತಿಯ ಆತ್ಮೀಯತೆಯುಂಟಾಗಿತ್ತು.

ಒಂದು ದಿನ ರತನಳು ಬಂದಾಗ ಅವಳ ಮುಖವು ಇಳಿದುಹೋಗಿತ್ತು. ಕಣ್ಣು ಭಾರವಾಗಿತ್ತು. ಜಾಲಪಳು ಕೇಳಿದಳು—ಏನು, ಮೈ ಚೆನ್ನಾಗಿಲ್ಲವೆ?

ರತನಳು ಕುಂಠಿತ ಸ್ವರದಲ್ಲಿ ಹೇಳಿದಳು—ಹಾಂ, ಹಾಂ, ಮೈಗೇನಾಗಿದೆ, ಚೆನ್ನಾಗಿದೆ. ಆದರೆ ರಾತ್ರಿಯಿಡೀ ನಿದ್ದೆ ಇರಲಿಲ್ಲ. ಚಳಿಗೆ ಅವರ ಕೆಮ್ಮು ಹೆಚ್ಚುತ್ತದೆ. ರಾತ್ರಿ ಸಾಲುಗಟ್ಟಿ ಬರತೊಡಗಿತೆಂದರೆ, ಅದರ ಕಷ್ಟ ದೇವರಿಗೇ ಗೊತ್ತು. ಕಲಕತ್ತೆಯಲ್ಲಿ ಹೆಸರಾಂತ ಒಬ್ಬರು ವೈದ್ಯರ ಬಳಿ ಚಿಕಿತ್ಸೆಗೆ ಹೋಗುವರಂತೆ. ನಾನು ಸಂಗಡ ಬರುವೆನೆಂದು ಹೇಳಿದೆ. ಬೇಡ ಬೇಡವೆಂದರು. ಆದರೆ ನೋಡು ಅಲ್ಲಿ ಮಾತಾಡುವುದಕ್ಕೆ ಯಾರೂ ಇಲ್ಲದಿದ್ದರೆ ಹೇಗೆ? ನನಗೆ ಕಲ್ಕತ್ತೆಯ ಹವೆ ಹಿಡಿಸುವುದಿಲ್ಲವೇನೋ ಹೌದು. ಆದರೆ ಅವರ ರೋಗವು ಗುಣವಾಗುವ ಬಗೆಯನ್ನು ನೋಡುವುದೇ, ನನ್ನ ಸುಖದ ಮೊಗವನ್ನು ಕಾಣುವುದೇ? ತಂಗೀ, ಒಮ್ಮೊಮ್ಮೆ ವಿಷಕುಡಿದು ಬಿಟ್ಟು ಶಾಂತಿಯನ್ನೊಪ್ಪಿಗೊಳುವೆನೆಂದು ತೋರುವುದು. ವಿಧಾತನಿಂದ ನನ್ನ ಇಷ್ಟು ಸೌಭಾಗ್ಯವನ್ನೂ ನೋಡಲಾಗುವುದಿಲ್ಲವೆ? ನನ್ನ ಸರ್ವಸ್ವವನ್ನು ಕೊಂಡಾದರೂ ಚಿಂತಿಲ್ಲ. ಯಾರಾದಗೂ ಒಮ್ಮೆ ಅವರ ರೋಗವನ್ನು ವಾಸಿ ಮಾಡಿದರೆ, ನನ್ನ ಬಯಕೆ ಸಿದ್ಧಿಸಿದಂತೆ.

ಜಾಲಪಳು ಸಾಶಂಕಳಾಗಿ ಎಂದಳು–ಇಲ್ಲಿ ಯಾರಿಗಾದರೂ ತೋರಿಸಿಲ್ಲವೆ ?

ರತನ—ಇಲ್ಲಿಯವರದೆಲ್ಲ ಆಯಿತು.

ಜಾಲಪ—ಹಾಗಾದರೆ ಎಂದು ಬರುವೆ ?

'ಯಾವುದೂ ನಿಶ್ಚಯವಿಲ್ಲ. ಅವರ ಮೇಲೆ ಹೊಂದಿಕೊಂಡಿದೆ. ಒಂದು ವಾರದಲ್ಲಿ ಬಂದರೂ ಬರಬಹುದು, ಎರಡು ತಿಂಗಳು ಹಿಡಿಯಲೂ ಬಹುದು. ಹೇಗೆ ನಿರ್ಧರಿಸುವುದು ? ಅಂತೂ ಈ ರೋಗದ ಮೂಲವಳಿಯದೆ ಬರುವುದಿಲ್ಲವೆಂದು ಮಾಡಿದ್ದೇನೆ.'

ವಿಧಿಯು ಆಗಸದಲ್ಲಿ ಕೂತು ನಗುತಿತ್ತು ! ಜಾಲಪಳು ಮನಸ್ಸಿನೊಳಗೆ ನಸುನಕ್ಕಳು. ತಾರುಣ್ಯದಲ್ಲಿ ಗುಣವಾಗದ ರೋಗವು, ಈ ಮುಪ್ಪಿನಲ್ಲಿ ವಾಸಿಯಾಗುವುದಿದೆಯೆ ?

'ದೇವರು ಇಚ್ಛಿಸಿದರೆ ಅಲ್ಲಿಂದ ಬೇಗನೇ ಗುಣಹೊಂದಿ ಬರುವಿರಿ, ತಂಗೀ ಎಂದಳು ಜಾಲಪಳು.

'ನೀನೂ ಬರುವುದಾದರೆ ತುಂಬ ಸಂತೋಷ.'

'ಇಲ್ಲ ನಾನು ಬರಲಾರೆ. ನನ್ನ ಸಲುವಾಗಿ ನೀನೇ ಅಲ್ಲಿ ಸ್ವಲ್ಪ ಶೋಧ ಮಾಡುವಿಯಂತೆ. ಎಲ್ಲಾದರೂ ಪತ್ತೆಯಾದರೆ ಕೂಡಲೇ ನನಗೆ ತಿಳಿಸಿಬಿಡು'

'ಅದು ನೀನು ಹೇಳಬೇಕಾಗಿಲ್ಲ, ಜಾಲಪಾ.'

'ನನಗೆ ಗೊತ್ತು. ಪತ್ರ ಬರೆಯುವಿಯಲ್ಲವೆ ?'

'ಹಾಂ, ಖಂಡಿತವಾಗಿಯೂ. ದಿನ ಬಿಟ್ಟು ದಿನ ಬರೆಯುತ್ತಿರುವೆ. ನೀನು ಉತ್ತರಿಸಬೇಕು.'

ಜಾಲಪಳು ಎಲೆ ಹೆಚ್ಚುತ್ತಿದ್ದಾಗ ರತನಳು ಅವಳ ಮುಖವನ್ನೇ ಎವೆಯಿಕ್ಕದೆ ನೋಡಿದಳು. ಜಾಲಪಳು ಅವಳ ಮನಸ್ಸಿನ ಭಾವವನ್ನರಿತು ಕೇಳಿದಳು—ಅಕ್ಕಾ, ಏನು ಯೋಚಿಸುತ್ತೀಯೆ ?

'ಏನೂ ಇಲ್ಲ. ನನ್ನ ಹತ್ತಿರ ಕೆಲವು ರೂಪಾಯಿಗಳಿವೆ. ಅದನ್ನು ನೀನಿಟ್ಟುಕೊ, ನನ್ನೊಡನಿದ್ದರೆ ಖರ್ಚಾಗುತ್ತವೆ.'

'ನಾನು ಖರ್ಚು ಮಾಡಿದರೆ ?'

'ಅವು ನಿನ್ನವೇ ಅಲ್ಲವೇ ತಂಗೀ? ಬೇರೆಯವರದಲ್ಲವಷ್ಟೆ ?'

ಜಾಲಪಳು ವಿಚಾರ ಮಗ್ನಳಾಗಿ ನೆಲವನ್ನು ನೋಡುವುದಕ್ಕೆ ತೊಡಗಿ ಧಳು. ರತನಳೆಂದಳು—ನೀನು ಉತ್ತರಿಸುವುದಿಲ್ಲವೇಕೆ? ನೀನೇಕೆ ಹೀಗೆ ನನ್ನಿಂದ ದೂರವಿರಲು ಯತ್ನಿಸುವಿಯೋ ನನಗರಿಯದು. ನನ್ನ ನಿನ್ನೊಳಗೆ ಯಾವ ತರದ ಭೇದವೂ ಇರಬಾರದೆಂದು ನನ್ನ ಬಯಕೆ. ನೀನು ಒಂದೈವತ್ತು-ನೂರು ರೂಪಾಯಿಗಳನ್ನು ವೆಚ್ಚ ಮಾಡಿದಿಯೆಂದೇ ಇಟ್ಟುಕೊಳ್ಳುವ ಏನಾಯಿತು ? ಅಕ್ಕ-ತಂಗಿಯರೊಳಗೆ ಕಾಸು-ಕಾಸಿಗೂ ಲೆಕ್ಕವಿರುವುದುಂಟೆ ?

ಜಾಲಪಳು ಗಂಭೀರಳಾಗಿ ಎಂದಳು, 'ನಾನು ಏನಾದರೂ ಹೇಳಿದರೆ ನೀನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲವಷ್ಟೆ ?'

'ಕೆಟ್ಟದನಿಸುವ ಮಾತಾದರೆ ಖಂಡಿತಕ್ಕೂ ನನಗೆ ನೋವಾಗುವುದು'

'ನಾನು ನಿನ್ನ ಹೃದಯಕ್ಕೆ ನೋವನ್ನುಂಟು ಮಾಡಲೆಂದು ಹೇಳುತ್ತಿಲ್ಲ ನಿನಗೆ ಕೆಟ್ಟದನಿಸಿದರೂ ಅನಿಸಬಹುದು ನಿನ್ನ ಮನಸ್ಸಿನಲ್ಲಿ ಯೋಚಿಸಿ ಹೇಳು, ನಿನ್ನ ಈ ಭಗಿನಿತ್ವದಲ್ಲಿ ದಯೆಯ ಭಾವವು ಬೆರೆತಿದೆಯೋ ಇಲ್ಲವೆ? ನೀನು ನನ್ನ ಬಡತನದ ಮೇಲೆ ಕರುಣಿಸಿ......'

ರತನಳು ಹಾರಿ ತನ್ನೆರಡು ಕೈಗಳಿಂದಲೂ ಜಾಲಪಳ ಬಾಯಿಯನ್ನು ಮುಚ್ಚಿ ಹೇಳಿದಳು—ಸರಿ, ಇನ್ನು ಸಾಕುಮಾಡು. ನೀನು ಏನು ಬೇಕಾದರೂ ಎಣಿಸು. ನನ್ನ ಮನಸ್ಸಿನಲ್ಲಿ ಅಂತಹ ಭಾವನೆ ಇದು ವರೆಗೆ ಮೂಡಲಿಲ್ಲ. ನನಗೆ ಹಸಿವಾದರೆ ನಾನು ನಿಸ್ಸಂಕೋಚಳಾಗಿ ನಿನ್ನೊಡನೆ ನನಗೆ ತಿನ್ನಲು ಕೊಡೆಂದು ಬೇಡುವೆ.

ಜಾಲಪಳು ನಿರ್ಮಮತೆಯಿಂದ ಹೇಳಿದಳು—ಈಗ ಹೀಗೆ ಹೇಳಬಲ್ಲೆ. ಏಕೆಂದರೆ ಇನ್ನೊಮ್ಮೆ ನನಗೆ ರೊಟ್ಟಿಯ ಬದಲು ಹಣ್ಣು ತಿನಿಸಬಲ್ಲೆಯೆಂದು ನಿನಗೆ ನಿರ್ಧಾರವಾಗಿ ಗೊತ್ತಿದೆ. ಆದರೆ (ದೇವರು ಹೀಗೆ ಮಾಡದಿರಲಿ)

ನಿನ್ನ ಮನೆಯಲ್ಲಿ ರೊಟ್ಟಿಯು ತುಣುಕಿಲ್ಲದಾಗುವಂತಹ ಕಾಲ ಬಂದಾಗ, ನೀನು ಇಷ್ಟು ನಿಸ್ಸಂಕೋಚಳಾಗಿರಬಲ್ಲೆಯೆಂದು ನಾನು ನಂಬಲಾರೆ.

ರತನಳು ದೃಢತೆಯಿಂದ ಎಂದಳು—ಆ ದಶೆಯಲ್ಲಿಯೂ ನಿನ್ನನ್ನು ಬೇಡುವುದಕ್ಕೆ ನನಗೆ ಸಂಕೋಚವಾಗದು. ಗೆಳೆತನವು ಪರಿಸ್ಥಿತಿಯ ವಿಚಾರ ಮಾಡುವುದಿಲ್ಲ. ಆದರೆ ಇಂತಹ ವಿಚಾರವಿದ್ದಲ್ಲಿ ಮೈತ್ರಿ ಇಲ್ಲವೆಂದು ತಿಳಿ. ಹೀಗೆ ಮಾತುಗಳನ್ನಾಡಿ ನೀನು ನನ್ನ ಮುಖದಲ್ಲಿಯೇ ಬಾಗಿಲು ಮುಚ್ಚುತ್ತಿರುವೆ. ನಿನ್ನ ಸಂಗಡ ಜೀವನದ ದಿನಗಳನ್ನು ಸುಗಮವಾಗಿ ಕಳೆವೆನೆಂದು ನಾನು ಬಗೆದಿದ್ದೆ. ಆದರೆ ನೀನು ಈಗಿನಿಂದಲೇ ಎಚ್ಚರಿಸುತ್ತಿರುವೆ. ನಿರ್ಭಾಗ್ಯಳಿಗೆ ಪ್ರೇಮ ಭಿಕ್ಷೆಯೂ ದೊರೆಯುವುದಿಲ್ಲ.

ಇದನ್ನು ಹೇಳಹೇಳುತ್ತ ರತನಳ ಕಣ್ಣು ನೀರಿನಿಂದ ತುಂಬಿತು. ಜಾಲಪಳು ತನ್ನನ್ನು ದುಃಖಿನಿಯೆಂದು ತಿಳಿದು ನಿರ್ಭಯ ಸತ್ಯವನ್ನಾಡುವ ಸ್ವಾಧೀನತೆಯ ಪೂರ್ಣ ಉಪಯೋಗ ಮಾಡಿಕೊಳ್ಳುತ್ತಿದ್ದಳು. ಆದರೆ ರತನಳ ಮನೋವ್ಯಥೆಯು ಅವಳ ಮನೋವ್ಯಥೆಗಿಂತ ಎಷ್ಟೋ ಹೆಚ್ಚು, ವಿದಾರಕವಾಗಿತ್ತು. ಜಾಲಪಳ ಪತಿ ಇನ್ನೂ ಯುವಕನು. ಅವನು ಹಿಂದೆ ಬಂದೊಡನೆ ಅವಳ ಆಶೆಯ ಸೂರ್ಯನು ಮರಳಿ ಉದಯಿಸುವನು; ಅವಳ ಇಚ್ಛಾ ವೃಕ್ಷವು ಮರಳಿ ಚಿಗುರುವುದು. ಭವಿಷ್ಯವು ತನ್ನೆಲ್ಲ ಆಶೆ ಆಕಾಂಕ್ಷೆಗಳನ್ನು ಜತೆಗೂಡಿಸಿಕೊಂಡು ಅವಳ ಮುಂದೆ ನಿಂತಿತ್ತು—ವಿಶಾಲ, ಉಜ್ವಲ, ರಮಣೀಯ! ರತನಳ ಭವಿಷ್ಯವೇನು? ಏನೂ ಇಲ್ಲ, ಶೂನ್ಯಾಂಧಕಾರವದು!

ಜಾಲಪಳು ಕಣ್ಣೊರಸಿಕೊಂಡು ಎದ್ದು ನಿಂತಳು. 'ಕಾಗದಗಳಿಗೆ ಉತ್ತರ ಬರೆಯಲು ಮರೆಯಬೇಡ. ರೂಪಾಯಿಗಳನ್ನಿಲ್ಲಿ ಕೊಡು' ಎಂದಳು.

ರತನಳು 'ಪರ್ಸಿ' ನಿಂದ ನೋಟಿನ ಕಟ್ಟುಗಳನ್ನು ತೆಗೆದು ಜಾಲಪಳ ಮುಂದಿಟ್ಟಳು. ಆದರೆ ಮುಖದಲ್ಲಿ ಪ್ರಸನ್ನತೆಯಿದ್ದಿಲ್ಲ. ಜಾಲಪಳು ಸರಳ ಭಾವದಿಂದ ಕೇಳಿದಳು—ಏನು ಮನಸ್ಸಿಗೆ ನೋವಾಯಿತೆ, ಅಕ್ಕಾ?

ರತನಳು ರುಷ್ಟಸ್ವರದಿಂದ ಎಂದಳು—ನೋವಾದರೆ ನಿನಗೇನು?

ಜಾಲಪಳು ಆಕೆಯ ಹೆಗಲ ಮೇಲೆ ಕೈ ಹಾಕಿದಳು. ಅನುರಾಗದಿಂದ ಆಕೆಯ ಹೃದಯ ಗದ್ಗದವಾಯಿತು. ರತನಳೊಡನೆ ಇಷ್ಟು ಪ್ರೇಮ ಅವಳಿಗೆ ಹಿಂದೆಂದೂ ಉಂಟಾಗಿರಲಿಲ್ಲ. ಇದು ವರೆಗೆ ಅವಳು ರತನಳನ್ನು

ಕಂಡು ಈರ್ಷಿಸುತ್ತಿದ್ದಳು. ಇಂದು ಅವಳಿಗೆ ರತನಳ ನಿಜವಾದ ರೂಪವೇನೆಂಬುದು ತಿಳಿಯಿತು.

ಹೌದು, ಇವಳು ನಿಜವಾಗಿಯೂ ಅಭಾಗಿನಿ, ನನಗಿಂತ ಹೆಚ್ಚಿನ ಅಭಾಗಿನಿ!

ಒಂದು ಕ್ಷಣದಲ್ಲಿ ರತನಳು ಕಣ್ಣಿನಲ್ಲಿ ಬಾಷ್ಪ ಮತ್ತು ಹಾಸ್ಯಗಳನ್ನು ತುಂಬಿಕೊಂಡು ಜಾಲಪಳಲ್ಲಿಂದ ಬೀಳ್ಕೊಂಡಳು.

## ೨೭

ಕಲ್ಕತ್ತೆಯಲ್ಲಿ ಎಲ್ಲಿ ನಿಲ್ಲಬೇಕೆಂದು ವಕೀಲರು ಮೊದಲೇ ನಿಶ್ಚಯಿಸಿದ್ದರು. ಶಹರಿಗಿಂತ ತುಸು ದೂರದಲ್ಲಿದ್ದು, ಪೇಟೆಯ ಜನರು ಗಾಳಿ ತಿನ್ನುವುದಕ್ಕೆ ಬರುವ ಪ್ರದೇಶದಲ್ಲಿತ್ತು ಅವರ ಬಂಗಲೆ. ರತನಳು ಅಡುಗೆಯವನನ್ನೂ, ಟೀಮಲನನ್ನೂ ಸಂಗಡ ಕರೆತಂದಿದ್ದಳು ಇಬ್ಬರೂ ಹಳೆಯ ಸೇವಕರು. ಹೀಗೆ ಎಲ್ಲಾ ಅಚ್ಚುಕಟ್ಟಾಗಿದ್ದರೂ ರತನಳಿಗೆ ಆ ಸ್ಥಳ ಒಗ್ಗುತ್ತಿರಲಿಲ್ಲ. ರೋಗಿಗಳ ಜತೆಯಲ್ಲಿರುವವರೂ ರೋಗಿಗಳಾಗುತ್ತಾರೆ. ಬೇಸರದಲ್ಲಿರುವವರಿಗೆ ಸ್ವರ್ಗವೂ ಉದಾಸವಾಗಿ ಕಂಡೀತು.

ಪ್ರಯಾಗದಿಂದ ಬಂದ ಮೂರು ದಿನಗಳ ವರೆಗೆ ರೋಗ ಸ್ವಲ್ಪ ಹೆಚ್ಚಿತು. ಕೂಡಲೇ ಔಷಧ ಸೇವನೆಗೆ ತೊಡಗಿದ್ದರಿಂದ ಇಳಿಮುಖವಾಗಹತ್ತಿತು. ರತನಳು ಬೆಳಗಿನಿಂದ ನಟ್ಟಿರುಳ ತನಕ ಅವರ ಸನಿಯದಲ್ಲೇ ಕುರ್ಚಿ ಹಾಕಿಕೊಂಡು ಕುಳ್ಳಿರುತ್ತಿದ್ದಳು. ಅವಳಿಗೆ ಧೈರ್ಯ ಕೊಡುವದರ ಸಲುವಾಗಿ ವಕೀಲರು ತಮ್ಮ ನಿಜಸ್ಥಿತಿಯನ್ನು ಮರೆಯಿಸುತ್ತಿದ್ದರು. ಅವಳು 'ಇಂದು ಹೇಗಿದೆ?' ಎಂದು ಕೇಳಿದರೆ 'ಹೋ, ಇವೊತ್ತು ನಿನ್ನೆಗಿಂತ ನೆಟ್ಟಗಿದೆ' ಎನ್ನುವರು. ಇಡಿ ರಾತ್ರಿ ಹಾಸುಗೆಯಲ್ಲಿ ಹೊರಳುತ್ತಾ ಬೆಳಗು ಮಾಡಿದರೂ, ಅವಳು 'ರಾತ್ರಿ ನಿದ್ದೆ ಹೇಗಿತ್ತು?' ಎಂದು ಕೇಳಿದಾಗ 'ಹೌದು, ಚೆನ್ನಾಗಿ ನಿದ್ದೆ ಬಂತಪ್ಪಾ!' ಎನ್ನುವರು ಈಗ ಇವರು ಗುಣಹೊಂದುತ್ತಿದ್ದಾರೆಂದು ರತನಳು ತಿಳಯುವಳು. ಕವಿರಾಜ(ವೈದ್ಯ)ರೊಡನೆಯೂ ಹೀಗೆಯೆ ಪ್ರಸ್ತಾವಿಸುವಳು. ಅವರಿಗೆ ಆನಂದವಾಗುವುದು.

ಒಂದು ದಿನ ವಕೀಲಸಾಹೇಬರು ರತನಳೊಡನೆಂದರು— ನಾನು ಹುಶಾರಾದ ಬಳಿಕ ನಿನಗೆ ಮದ್ದು ಮಾಡಬೇಕಾಗಿ ಬಂದೀತೆ ಎಂದು ನನಗೆ ಭಯವಾಗುತ್ತಿದೆ.

'ಇದಕ್ಕಿಂತ ಒಳ್ಳೆಯ ಸಂಗತಿ ಇನ್ನಾವುದಿದ್ದೀತು? ನಿಮ್ಮ ರೋಗವನ್ನು ನನಗೆ ಕೊಡೆಂದು ನಾನು ದೇವರನ್ನು ಪ್ರಾರ್ಥಿಸುತ್ತಲಿದ್ದೇನೆ.'

'ಸಂಜೆಗೆ ಸ್ವಲ್ಪ ಅಡ್ಡಾಡಿಕೊಂಡು ಬಾ. ರೋಗಿಷ್ಠಳಾಗಬೇಕೆಂದು ಮನಸ್ಸಿದ್ದರೂ ನಾನು ಎದ್ದ ಮೇಲೆ ಆದರೆ ಸರಿ. ಎಲ್ಲಾದರೂ ಆ ರಮಾನಾಥನ ಪತ್ತೆ ಸಿಗುವುದೋ ಎಂಬು ಕೂಡ ನೋಡುತ್ತೀರು.'

ರತನಳಿಗೆ ತಾನು ಜಾಲಪಳಿಗೆ ವಚನ ಕೊಟ್ಟುದರ ಅರಿವಾದುದು. ಈಗಲೇ. ಪತಿದೇವನ ಸುಶ್ರೂಷೆಯ ಭರದಲ್ಲಿ ಆ ವಿಷಯ ಮರೆತೇ ಹೋಗಿತ್ತು. ವಕೀಲರು ಸಾಗ್ರಹವಾಗಿ ಎಂದರು—ಹೋಗು, ಈಹೊತ್ತೇ ಹೊರಡು, ಈ ಹೊತ್ತೇಂದೇನು, ಇನ್ನು ಮುಂದೆ ನಿತ್ಯವೂ ಹೊಗುತ್ತಿರು.

ರತನಳು ಚಿಂತಿತಳಾಗಿ ಎಂದಳು—ಆದರೆ ಚಿಂತೆ ಇದ್ದೇ ಇರುವುದು.

ವಕೀಲರು ನಗುತ್ತಾ ಹೇಳಿದರು—ನನ್ನ ಚಿಂತೆಯೆ? ನಾನು ಸುಧಾರಿಸುತ್ತಿದ್ದೇನೆ.

ರತನಳು ಸಂದಿಗ್ಧ ಭಾವದಿಂದ ಹೇಳಿದಳು— ಒಳ್ಳೆಯದು, ಹೋಗಿ ಬರುವೆ.

ರತನಳಿಗೆ ನಿನ್ನೆಯಿಂದ ಪತಿಯ ವಿಷಯದಲ್ಲಿ ಸಂಶಯ ಹುಟ್ಟಿತ್ತು. ಇವರು ಸ್ವಸ್ಥರಾಗುತ್ತಿರುವ ಪಕ್ಷಕ್ಕೆ ಮುಖವೇಕೆ ದಿನದಿಂದ ದಿನಕ್ಕೆ ಕಳೆಗುಂದುತ್ತಿದೆ? ಕಣ್ಣೇಕೆ ಯಾವಾಗಲೂ ಮುಚ್ಚಿರುತ್ತಿದೆ? ದೇಹವೇಕೆ ಕ್ಷೀಣಿಸುತ್ತಿದೆ? ಅವಳಿಗೆ ಕವಿರಾಜರ ಮದ್ದಿನ ಮೇಲೆ ನಂಬುಗೆ ತೊಲಗಿ ಹೋಯಿತು.

ರತನಳು ಹೋದ ಮೇಲೆ ವಕೀಲರು ಟೀಮಲನೊಡನೆಂದರು—ಟೀಮಲ್, ನನ್ನನ್ನು ಸ್ವಲ್ಪ ಎದ್ದು ಕುಳ್ಳಿರಿಸು ನೋಡುವ. ಮಲಗಿ ಮಲಗಿ

ಸಾಕಾಯಿತು. ಒಂದು ಲೋಟಿ ಚಹಾ ಮಾಡಿ ಕೊಡು. ಈ ಪಥ್ಯ ನನ್ನನ್ನು ಕೊಲ್ಲುತ್ತಿದೆ, ಕವಿರಾಜರ ಔಷಧದಿಂದ ಕಾಸಿನ ಉಪಯೋಗವಿಲ್ಲ. ನಿನಗೆ ಹೇಗೆ ಕಾಣುವುದು ?

ಟೇಮುಲನು ವಕೀಲರನ್ನು ತಲೆಗಿಂಬಿನ ಸಹಾಯದಿಂದ ಕುಳ್ಳಿರಿಸಿ ಹೇಳಿದನು—ಬಾಬೂಜಿ, ನನಗಿದು ಮೊದಲೇ ಗೊತ್ತಾಗಿತ್ತು. ಆದರೆ ಅಮ್ಮಾವರ ಭಯದಿಂದ ಬಾಯಿ ಬಿಡಲಿಲ್ಲ.

ವಕೀಲರು ಕೆಲವು ಕ್ಷಣಗಳವರೆಗೆ ಸುಮ್ಮನಿದ್ದು ಮತ್ತೆಂದರು—ನಾನು ಸಾವಿಗಂಜುವುದಿಲ್ಲ, ಟೇಮುಲ್. ಸ್ವಲ್ಪವೂ ಅಂಜುವುದಿಲ್ಲ. ನನಗೆ ಸ್ವರ್ಗ ನರಕಗಳ ಮೇಲೆ ಇಷ್ಟಾದರೂ ವಿಶ್ವಾಸವಿಲ್ಲ. ಆದರೆ ಸಾಯುವ ಇಚ್ಛೆ ಇಲ್ಲ. ಸತ್ತರೇನಾದೀತೆಂದು ಯೋಚಿಸುತ್ತಿರುವೆ ?

ಟೇಮುಲನೆಂದನು—ಬಾಬೂಜಿ, ಆ ಮಾತು ಬಿಡಿ, ನೋಡಿಕೊಳ್ಳುವ. ದೇವರ ದಯದಿಂದ ನಿಮಗೆ ಗುಣವಾಗುವುದು ಖಂಡಿತ. ಬೇರೆ ಡಾಕ್ಟರರನ್ನು ಕರೆತಂದರಾಗಬಹುದೆ ? ನೀವೆಲ್ಲಾ ಇಂಗ್ಲೀಷ್ ಓದಿದವರು ನಮ್ಮ ಮಾತು ಕೇಳುತ್ತೀರಾ ? ನೀವು ಒಪ್ಪಿದರೆ ಒಪ್ಪಿ, ಇಲ್ಲವಾದರೆ ಬಿಡಿ. ನಾನಂತೂ ಒಬ್ಬ ಮಂತ್ರವಾದಿಯನ್ನು ಕರೆತರುವೆ. ಬಂಗಾಳದ ಮಂತ್ರವಾದಿಗಳೆಂದರೆ ಬಹಳ ಹೆಸರು ವಾಸಿ.

ವಕೀಲರು ಮುಖ ತಿರುಗಿಸಿ ಬಿಟ್ಟರು. ಮಂತ್ರವಾದಿಗಳಿಗೂ ಅವರಿಗೂ ಮೊದಲಿಂದಲೂ ಎಣ್ಣೆಸೀಗೆಯ ನಂಟು. ಆದರೆ ಈಗ ಟೇಮುಲನ ಮಾತನ್ನು ವಿರೋಧಿಸುವಷ್ಟು ಶಕ್ತಿ ಇಲ್ಲದ್ದರಿಂದ ಮುಖ ತಿರುಗಿಸಿ ಬಿಟ್ಟರು ತೀರಿತು.

ಅಡುಗೆಯವನು ಚಹಾ ತಂದನು. ವಕೀಲರು ಚಹದ ಬಟ್ಟಲನ್ನು ಕ್ಷುಧಿತನೇತ್ರಗಳಿಂದ ನೋಡಿ ಹೇಳಿದರು—ಬೇಡ. ಈಗ ಕುಡಿಯುವದಿಲ್ಲ. ಆಕೆಗೆ ಗೊತ್ತಾದರೆ ದುಃಖ ಪಡುವಳು.

ಒಂದು ನಾಲ್ಕು ವಾಕ್ಯ ಉಸುರುತ್ತಲೇ ವಕೀಲರ ತ್ರಾಣ ಕುಗ್ಗುತಿತ್ತು. ಮತ್ತೆ ಐದು ಮಿನಿಟು ಕಳೆದಮೇಲೆಯೇ ಸರಿ ಮಾತು ಹೊರಡುವುದು. ಅವರಿಗೆ ತಮ್ಮ ದಶೆಯ ಯಥಾರ್ಥ ಜ್ಞಾನವಾಗಿ ಬಿಟ್ಟಿರಬೇಕು. ಅವರ ಮುಖದ ಮೇಲೂ, ಬುದ್ಧಿಯಮೇಲೂ, ಮಸ್ತಿಷ್ಕದ ಮೇಲೂ ಸಾವಿನ ಕರಿನೆಳಲು ಬೀಳ

ತೊಡಗಿತ್ತು. ಮನಸ್ಸಿನ ದೌರ್ಬಲ್ಯವು ತನ್ನ ಅವಸ್ಥೆಯನ್ನು ಇಷ್ಟು ಕೀಳು ಕಾಣಿಸುತ್ತಿದೆ ಎಂಬುದೊಂದೇ ಅವರ ಆಸೆಯಾಗಿತ್ತು. ಉಸಿರುಗಟ್ಟಿದಂತಾಗುತ್ತಿತ್ತು. ಭೀಷಣ ಪ್ರಾಣವೇದನೆಯಾಗುತ್ತಿತ್ತು.

ಮುಂದಿನ ಉದ್ಯಾನದಲ್ಲಿ ಚಂದ್ರನು ಇಬ್ಬನಿಯ ಹೊದಿಕೆಯನ್ನು ಹಾಕಿಕೊಂಡು, ನೆಲದಲ್ಲಿ ಬಿದ್ದು ಬಿಕ್ಕುತ್ತಿದ್ದನು, ಹೂವುಗಳೂ, ಪೊದರುಗಳೂ ಮಲಿನ ಮುಖದಿಂದ, ತಲೆತಗ್ಗಿಸಿ, ಆಶೆ ಮತ್ತು ಭಯಗಳಿಂದ ವಿಕಲವಾಗಿ ತಿಂಗಳನ ವಕ್ಷದ ಮೇಲೆ ಕೈಯಾಡಿಸುವಂತೆಯೂ, ಅವನ ಶೀತಲ ದೇಹವನ್ನು ಸ್ಪರ್ಶಿಸುತ್ತಿರುವಂತೆಯೂ, ಎರಡು ತೊಟ್ಟು ಕಣ್ಣೀರನ್ನು ಹರಿಯಿಸಿ ಮರಳಿ ಅದೇ ತೆರನಾಗಿ ನೋಡಹತ್ತುವಂತೆಯೂ ಭಾಸವಾಗುತ್ತಿತ್ತು.

ಫಕ್ಕನೆ ವಕೀಲರ ಕಣ್ಣು ತೆರೆಯಿತು. ಎರಡೂ ಕಣ್ಗಡೆಗಳಲ್ಲಿ ಕಣ್ಣೀರಿನ ಎರಡು ಹನಿಗಳು ನಿಂತಿದ್ದವು.

ಕ್ಷೀಣಸ್ವರದಲ್ಲಿಂದರು—ಟೇಮಲ್ ! ಸಿದ್ಧು ಬಂದಿದ್ದನೆ?

ತನ್ನ ಪ್ರಶ್ನೆಗೆ ತಾನೇ ಲಜ್ಜೆಪಟ್ಟುಕೊಂಡು ನಸುನಕ್ಕು ಹೇಳಿದರು—ಸಿದ್ಧು ಬಂದ ಹಾಗೆ ಅನುಭವವಾಯಿತು.

ಮತ್ತೆ ನಿಟ್ಟುಸಿರಿಟ್ಟು ಕಣ್ಣು ಮುಚಿಕೊಂಡರು. ಕಣ್ಣಿನ ಮುಂದೆ ಯೌವನದಲ್ಲೇ ತೀರಿಹೋದ ಆ ಸಿದ್ಧುವಿನ ಬಾಲ್ಯ ಚಿತ್ರಗಳು ಒಂದೊಂದಾಗಿ ಉರುಳತೊಡಗಿದವು. ಎಂತಹ ಸ್ಪಷ್ಟ ಚಿತ್ರಗಳು ! ಎಷ್ಟು ಸಜೀವ !

ಹಲವು ಮಿನಿಟುಗಳ ಅನಂತರ ಕಣ್ಣು ತೆರೆದು ಯಾರನ್ನೋ ಹುಡುಕುವಂತಿದ್ದರು. ತಮ್ಮ ತಾಯಿಬಂದು 'ಮಗೂ ಈಗ ಹೇಗಿದೆ?' ಎಂದು ಕೇಳಿ ಹೋದಂತೆ ಅನಿಸಿತು.

ಟೇಮಲನನ್ನು ಕರೆದು ಹೇಳಿದಳು—ಇಗೋ, ಈಗಲೇ ಹೋಗಿ ಒಬ್ಬರು ವಕೀಲರನ್ನು ಕರೆದುಕೊಂಡು ಬಾ. ಅಕೆ ಬರುವ ಮೊದಲೇ ಕೆಲಸವಾಗಬೇಕು.

ಮೋಟರಿನ ಹಾರ್ನು ಕೇಳಿಸಿತು. ರತನ ಬಂದಳು.

ವಕೀಲರು ಕೇಳಿದರು—ಏನು, ಪತ್ತೆಯಾಯಿತೆ? ಎಲ್ಲೆಲ್ಲಿಗೆ ಹೋದಿ?

ರತನ—ಇಷ್ಟು ದೊಡ್ಡ ಶಹರಿನಲ್ಲಿ ಒಂದು ತಾಸಿನಲ್ಲಿ ಪತ್ತೆಯಾಗುವುದುಂಟೆ? ಇರಲಿ, ಔಷಧ ಕುಡಿವ ಹೊತ್ತಾಯಿತಲ್ಲವೆ?

‘ಹೌದು. ತಾ.’

ರತನಳು ಔಷಧ ಕುಡಿಸುತ್ತಿದ್ದಾಗ ಒಂದು ಅಸ್ಪಷ್ಟ ಅಜ್ಞಾತ ಶಂಕೆಯನ್ನೊತ್ತಿ ಹಿಡಿದಿದ್ದಳು. ಒಮ್ಮೆಲೆ ಕೇಳಿದಳು—ಅವರಿಗಾದರೂ ತಾರು ಬಿಡಲೆ?

‘ಬೇಡ ಬೇಡ ಯಾರನ್ನೂ ಕರೆಯಿಸುವ ಆಗತ್ಯವಿಲ್ಲ. ನಾನು ಹುಷಾರಾಗುತ್ತಿದ್ದೇನೆ.’

ಮತ್ತೊಂದು ಕ್ಷಣದ ಬಳಿಕ ಸಾವಧಾನರಾಗುವ ಯತ್ನ ಮಾಡುತ್ತಾ ಎಂದರು—ಉಯಿಲು ಬರೆಸಿದ್ದರಾಗಬಹುದೆಂದು ಕಾಣುತ್ತದೆ

ಶೀತಲವೂ ತೀವ್ರವೂ ಆದ ಬಾಣವೊಂದು ರತನಳ ಕಾಲಿನಿಂದ ಹೊರಟು ನೆತ್ತಿಯಿಂದ ಹೊರಗೆ ಹೋದಂತಾಯಿತು ಅವಳ ಒಡಲಿನ ಎಲ್ಲ ಬಂಧನಗಳು ಕಳಚಿಬಿದ್ದವೋ, ಎಲ್ಲ ಅವಯವಗಳು ದಿಕ್ಪಾಲಾದವೋ, ಅವಳ ಮಸ್ತಿಷ್ಕದ ಪರಮಾಣುಗಳೆಲ್ಲ ಗಾಳಿಗೆ ಹಾರಿ ಹೋದವೋ ಎಂಬಂತಾಯಿತು! ಅವಳ ಕಾಲ ಕೆಳಗಿಂದ ಭೂಮಿ ಜರಿದು ಬೀಳುವಂತೆಯೂ, ತಲೆಯ ಮೇಲಿನ ಆಕಾಶವು ಹಾರಿ ಹೋಗುವಂತೆಯೂ, ತಾನೀಗ ನಿರಾಧಾರಳಾಗಿ, ನಿಸ್ಪಂದಳಾಗಿ, ನಿರ್ಜೀವಳಾಗಿ ನಿಂತಿರುವಂತೆಯೂ ಆಕೆಗೆ ಭಾಸವಾಯಿತು! ಅಶ್ರುಕಂಪಿತ ಕಂಠದಿಂದ ಹೇಳಿದಳು—ಮನೆಯಿಂದ ಯಾರನ್ನಾದರೂ ಕರೆಯಿಸಲೆ? ಇಲ್ಲಿ ನಮ್ಮವರು ಯಾರಿರುವರು?

‘ನಮ್ಮವರಿಗಾಗಿ’ ರತನಳು ಈಗ ಅಧೀರಳಾದಳು ಆದರೆ ಇವರೇಕೆ ಯಾರನ್ನೂ ಕರೆಯಿಸಬೇಡವೆಂದು ಹೇಳುತ್ತಾರೆ? ಉಯಿಲಿನ ಸಂಗತಿ ನೆನಪಿಗೆ ಬಂದೊಡನೆ ಆಕೆಯ ಮೈ ಜುಮ್ಮೆಂದಿತು ಈ ವಿಚಾರ ಇವರ ತಲೆಗೆ ಹೇಗೆ ಬಂತು? ವೈದ್ಯರು ಏನಾದರೂ ಹೇಳಿದರೆ? ಭಗವನ್, ಇದೇನು ಗೈಯುತ್ತಿರುವೆ? ಈ ಶಬ್ದವು ತನ್ನೆಲ್ಲ ಸಂಸರ್ಗಗಳೊಡನೆ ಆಕೆಯ ಹೃದಯವನ್ನು ವಿದೀರ್ಣಮಾಡುತ್ತಿತ್ತು. ಕೂಗಿಕೂಗಿ ಅಳಬೇಕೆಂದು ಆಕೆಗೆ ಅತೀವ ಇಚ್ಛೆಯಾಯಿತು ತಾಯಿಯ ನೆನಪಾಯಿತು ಅವಳ ಸೆರಗಿನಲ್ಲಿ ಮೋರೆ ಇಟ್ಟುಕೊಂಡು ಅಳುವ ಆತುರ ಹೆಚ್ಚಿತು. ಆದರೇನು, ಆ ಆಧಾರವೂ ಈಗಿಲ್ಲ

ಅಡುಗೆಯವನು ಬಂದು ಭೋಜನವು ಸಿದ್ಧವಾಗಿದೆ ಎಂದು ಹೇಳಿದನು. ರತನಳು ಅವನ ಕಡೆ ಕಠೋರನೇತ್ರಗಳಿಂದ ನೋಡಿದಳು. ಪಾಪ, ಅವನು ಅಲ್ಲಿಂದೆದ್ದು ಹೋದನು.

ಅವನು ಹೋದ ಮೇಲೆ ರತನಳಿಗೆ ಪಶ್ಚಾತ್ತಾಪವಾಯಿತು. ಅವನದೇನು ತಪ್ಪು? ಅವನ ಕೆಲಸ ಅವನು ಮಾಡಿದ್ದನಷ್ಟೆ ತಾನು ಕೋಪಿಸುವುದೆ? ಹೀಗೆ ಯೋಚಿಸಿ ಅಡುಗೆಮನೆಗೆ ಬಂದು 'ನನಗೆ ಹಸಿವಿಲ್ಲ. ನೀವು ಉಣಬಹುದು' ಎಂದು ಹೇಳಿದಳು. ತುಸು ಹೊತ್ತಿನ ಮೇಲೆ ಅಡುಗೆಯವನ ಹತ್ತಿರ 'ನಿಮಗೇನಾದರೂ ಯಜಮಾನರ ಪ್ರಕೃತಿಯಲ್ಲಿ ಸುಧಾರಣೆ ಕಾಣುತ್ತಿದೆಯೆ?' ಎಂದು ಕೇಳಿದಳು.

"ಹಾಂ,,ಸ್ವಲ್ಪ ಸ್ವಲ್ಪ ಇದೆ. ಆದರೆ ಎಷ್ಟು ಆಗಬೇಕಾಗಿತ್ತೋ, ಅಷ್ಟಿಲ್ಲ."

"ನೀವೂ ನನ್ನನ್ನು ಮೋಸಗೊಳಿಸುತ್ತಿದ್ದೀರಿ."

ಅಡುಗೆಯವನು ಕಣ್ಣಲ್ಲಿ ನೀರುತುಂಬಿ ಹೇಳಿದನು—ಭಗವಂತನು' ಎಲ್ಲರನ್ನೂ ಕಾಪಾಡುವನವ್ವಾ, ಗಾಬರಿಯಿಂದೇನು ಫಲ? ನಮ್ಮ ಕೈಯಲ್ಲೇ ನಿರುವುದು?

'ಇಲ್ಲಿ ಯಾರಾದರೂ ಜೋಯಿಸರು ಸಿಗಲಾರರೆ? ಪೂಜಾ-ಪಾಠದಿಂದ ಆರೋಗ್ಯವಾಗುವುದೂ ಉಂಟು'

'ಹೌದು, ಹೌದು ನಾನು ಮೊದಲೇ ಹೇಳುವವನಿದ್ದೆ. ಆದರೆ ಯಜಮಾನರು...."

'ನಾನು ಹೇಳಿದೆನಲ್ಲವೆ—'

ಹೀಗೆನ್ನುತ್ತಾ ಅವಳು ಕೋಣೆಯೊಳಗೆ ಬಂದು ದೀಪದ ಮುಂದೆ ಕೂತು ಪತ್ರ ಬರೆಯತೊಡಗಿದಳು—

ತಂಗೀ, ಹೇಳಲಾರೆ, ಏನಾಗುವುದೆಂದು ಹೇಳಲಾರೆ ಈವರೆಗೆ ನಾನು ಸವಿಯಾದ ಭ್ರಮೆಯ ವಶಳಾಗಿದ್ದೆನೆಂದು ನನಗಿಂದು ತಿಳಿಯಿತು. ಅವರು ಇಷ್ಟರವರೆಗೆ ನಿಜವಾದ ಸಂಗತಿಯನ್ನು ಮರೆ ಮಾಡುತ್ತಿದ್ದರು; ಈಹೊತ್ತು ಅವರ ಕೈಮೀರಿ ಅದು ಹೊರಗೆ ಬಂತು ಏನು ಹೇಳಲಿ, ಇಂದವರು ಉಯಿಲು ಬರೆಸುವ ಪ್ರಸ್ತಾಪವೆತ್ತಿದರು ನಾನೇ ಅದನ್ನು ನಿಲ್ಲಿಸಿದೆ ಎದೆಯಲ್ಲಿ ಗಾಬರಿ ತುಂಬಿದೆ. ಸ್ವಲ್ಪ ಶಂಖಪಾಷಾಣವನ್ನು ಸೇವಿಸಿ ಪ್ರಾಣಬಿಡಬೇಕೆಂದು ಮನಸ್ಸಾಗುತ್ತಿದೆ ಲೋಕವು ವಿಧಾತನಿಗೆ ದಯಾಳು, ಕೃಪಾಳು, ದೀನ ಬಂಧು ಮುಂತಾದ ಬಿರುದುಗಳ ಮಾಲೆಯನ್ನೇ ನೆಯ್ದಿರುವುದಾದರೂ, ಅವನಷ್ಟು ನಿರ್ದಯಿಯೂ, ನಿರ್ಮಮನೂ, ನಿಷ್ಠುರನೂ ಯಾರೂ ಇರಲಾರರೆಂದು

ನಾನೆನ್ನುತ್ತಿದ್ದೇನೆ ಪೂರ್ವಜನ್ಮಸಂಸ್ಕಾರವೆಂಬುದು ಕೇವಲ ಮನಸ್ಸಮಾಧಾನಕ್ಕಾಗಿ ಹೇಳಿಕೊಳ್ಳುವ ಮಾತು. ಹೇಗೇ ತಿಳಿಯದ ದಂಡದ ಮೂಲ್ಯವಾದರೂ ಏನು? ಇದು ಅತ್ಯಾಚಾರದ ಲಾಠಿ ಪೆಟ್ಟು ಕೊಡುವುದಕ್ಕೆ ಯಾವದಾದರೊಂದು ಕಾರಣವನ್ನು ಕಲ್ಪಿಸಿಕೊಳ್ಳುವುದು ಕಷ್ಟವಲ್ಲ. ಈ ಕಗ್ಗತ್ತಲಿನ, ನಿರ್ಜನವಾದ, ಕಂಟಕಮಯವಾದ ಜೀವನಮಾರ್ಗದಲ್ಲಿ ನನಗೆ ಒಂದು ಮಿಣುಕು ಮಿಣುಕಾದ ದೀಪಕವು ದೊರೆತಿತ್ತು. ನಾನದನ್ನು ಸೆರಗಿನಲ್ಲಡಗಿಸಿಕೊಂಡು, ವಿಧಿಗೆ ಧನ್ಯವಾದವನ್ನೀಯುತ್ತಾ, ಹಾಡುಹೇಳುತ್ತಾ ಮುನ್ನಡೆಯುತ್ತಿದ್ದೆ; ಆದರೆ ಆ ದೀಪಕವೂ ನನ್ನ ಕೈಯಿಂದ ತಪ್ಪಿ ಹೋಗುತ್ತಿದೆ! ಅದನ್ನು ಯಾರೋ ಬಲಾತ್ಕಾರಪೂರ್ವಕವಾಗಿ ಸೆಳೆದುಕೊಳ್ಳುತ್ತಿದ್ದಾರೆ! ಈ ಅಂಧಕಾರದಲ್ಲಿ ನಾನೆಲ್ಲಿಗೆ ಹೋಗಲಿ? ನನ್ನ ಮೊರೆಯನ್ನಾರು ಕೇಳುವರು? ನನ್ನನ್ನು ಕೈಕೊಟ್ಟು ಉದ್ಧರಿಸುವರಾರು?

ತಂಗಿ, ನನ್ನನ್ನು ಕ್ಷಮಿಸು ರಮಾನಾಥರನ್ನು ಹುಡುಕಲು ಅವಕಾಶವೇ ದೊರೆಯಲಿಲ್ಲ ಇಂದು ಕೆಲ-ಕೆಲವು ಪಾರ್ಕುಗಳಲ್ಲಿ ಅಲೆದು ಬಂದೆ ಅವಕಾಶ ಸಿಕ್ಕಿದೊಡನೆ ಮರಳಿ ಹೊರಡುವೆ.

ಮಾತಾಜಿಗೆ ನನ್ನ ಪ್ರಣಾಮವನ್ನು ಹೇಳು.'

ಪತ್ರವನ್ನು ಬರೆದು ರತನಳು ಹೊರಜಗಲಿಗೆ ಬಂದಳು ತಂಗಾಳಿ ತೀಡುತಿತ್ತು. ಪ್ರಕೃತಿ ರೋಗಶಯ್ಯೆಯಮೇಲೆ ಬಿದ್ದುಕೊಂಡು ಬಿಕ್ಕಿಬಿಕ್ಕಿ ಅಳುತ್ತಿತ್ತು.

ಆಗಲೇ ವಕೀಲರ ಶ್ವಾಸವು ವೇಗವೇಗವಾಗಿ ಚಲಿಸತೊಡಗಿತು.

## ೨೮

ರಾತ್ರಿ ಮೂರುಗಂಟೆಯ ಹೊತ್ತಿಗೆ ಆರಾಮಕುರ್ಚಿಯಲ್ಲಿ ಮಲಗಿದ್ದ ರತನಳಿಗೆ ಪತಿಯು ಜೋರಾಗಿ ಉಸಿರೆಳೆಯುತ್ತಿರುವುದು ಕೇಳಿಸಿತು. ಕೂಡಲೇ ಕೋಣೆಯೊಳಗೆ ಹೋದಳು. ಮಂಚದ ಮೇಲೆ ಕೂತು, ಪತಿಯ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡಳು. ಗಡಿಯಾರವನ್ನು ನೋಡಿದಳು. ಬೆಳಗಾಗಲು ಇನ್ನೂ ನಾಲ್ಕುತಾಸಿದೆ. ಒಂದೊಂದು ಕ್ಷಣವೂ ಒಂದೊಂದು ಯುಗದಂತೆ ಕಂಡಿತು

ಸ್ವಲ್ಪ ಹೊತ್ತಿನ ಮೇಲೆ ವಕೀಲರ ಉಸಿರಿನ ವೇಗ ಮಂದವಾಯಿತು. ಕ್ಷೀಣಸ್ವರದಲ್ಲೆಂದರು—ರತನ, ಬೀಳ್ಕೊಳ್ಳುವ ಸಮಯ ಬಂದಾಯಿತು ನನ್ನ ಅಪರಾಧಗಳನ ........

ಅವರು ಎರಡು ಕೈಗಳನ್ನೂ ಜೋಡಿಸಿಕೊಂಡು ದೀನಯಾಚನೆಯ ಕಣ್ಣುಗಳಿಂದ ಅವಳ ಮೊಗ ನೋಡಹತ್ತಿದರು. ಏನೋ ಹೇಳುವ ಇಚ್ಛೆಯಿದ್ದಂತೆ ಕಾಣುತ್ತಿತ್ತು. ಆದರೆ ಬಾಯಿಯಿಂದ ಮಾತು ಹೊರಡದು.

ರತನಳು ಕೂಗಿದಳು-ಟೀಮುಲ್! ಮಹಾರಾಜ! ಎಲ್ಲಿ ಸತ್ತಿದ್ದೀರಿ? ಬನ್ನಿ.

ಅಡುಗೆಯವನು ಬಂದನು. ಕೂಡಲೇ ಕವಿರಾಜರನ್ನು ಕರೆದುಕೊಂಡು ಬರಲೆಂದು ಅವನನ್ನು ಕಳುಹಿದಳು ಸ್ಟೋವ್ ಹಚ್ಚಿ ಎದೆಗೆ ಬಿಸಿನೀರಿಂದ ಕಾವು ಕೊಡಹತ್ತಿದಳು. ಅವಳ ಗಾಬರಿ, ದುರ್ಬಲತೆಗಳೆಲ್ಲ ಮಾಯವಾಗಿದ್ದುವು. ಕಠೋರ ಕರ್ತವ್ಯವು ಆಕೆಯ ಎಲ್ಲಾ ಅಸ್ತಿತ್ವವನ್ನು ಜಾಗ್ರತಗೊಳಿಸಿದ್ದಿತು. ಹದಿನೈದು ಮಿನಿಟುಗಳ ವರೆಗೆ ಸೇಕ ಕೊಡುವಷ್ಟರಲ್ಲಿ ವಕೀಲರ ಧ್ವನಿ ಅವರ ವಶದಲ್ಲಿ ಬಂತು. ರತನಳ ಎರಡು ಕೈಗಳನ್ನು ತನ್ನ ಕೆನ್ನೆಯ ಮೇಲಿರಿಸಿಕೊಂಡು ಹೇಳಿದರು-ನಿನಗೆ ತುಂಬಾ ಕಷ್ಟ ಕೊಟ್ಟೆ, ಮುನ್ನೀ. ಸಾವು ಇಷ್ಟು ಬೇಗನೆ ಬರುವುದೆಂದು ಯಾರೆಣಿಸಿದ್ದರು? ನಾನು ದೊಡ್ಡ ಅನ್ಯಾಯ ಮಾಡಿರುವೆ! ಓಹ್, ಎಂತಹ ಅನ್ಯಾಯ. ನಿನ್ನ ಜೀವನದ ಸರ್ವನಾಶ ಮಾಡಿದಾತನು ನಾನು. ಕ್ಷಮಿಸು ಪ್ರಿಯೆ!

ಅವರ ಬಾಯಿಯಿಂದ ಹೊರಟ ಕೊನೆಯ ಮಾತುಗಳಿವು ಜೀವನದ ಅಂತಿಮ ಸೂತ್ರವಿದು, ಮೋಹದ ಕಟ್ಟಕಡೆಯ ಬಂಧನವಿದು.

'ಟೀಮುಲ್, ನೋಡು, ಸ್ವಲ್ಪ ನೀರು ಬೆಚ್ಚಗೆ ಮಾಡು'

'ನೀರು ಬೆಚ್ಚಗೆ ಮಾಡಿ ಫಲವೇನಮ್ಮಾ? ಗೋದಾನ ಮಾಡಿರಿ. ಬಾಯಿಗೆ ಎರಡು ತೊಟ್ಟು ಗಂಗಾಜಲ ಹಾಕಿರಮ್ಮಾ'

ರತನಳು ಇವರನ್ನು ಇಲ್ಲಿಗೇತಕ್ಕೆ ತಂದೆನೆಂದು ಪಶ್ಚಾತ್ತಾಪಪಡಹತ್ತಿದಳು. ತಾನು ಸಂಧ್ಯಾಕಾಲದಲ್ಲಿ ಅಡ್ಡಾಡಲು ಹೋದುದಕ್ಕೂ ಪಶ್ಚಾತ್ತಾಪವಾಯಿತು. ಅಷ್ಟೇ ಹೊತ್ತಿನೊಳಗೆ ಇವರಿಗೆ ಶೀತಹಿಡಿಯಿತೋ ಏನೋ ಯಾರಿಗೆ ಗೊತ್ತು? ಜೀವನವು ಒಂದು ದೀರ್ಘ ಪಶ್ಚಾತ್ತಾಪವಲ್ಲದೆ ಬೇರೇನು?

ಪಶ್ಚಾತ್ತಾಪಕ್ಕೆ ಏನು ಒಂದೆರಡು ವಿಷಯುಗಳೆ? ಈ ಎಂಟು ವರ್ಷಗಳ ಜೀವನದಲ್ಲಿ ನಾನು ಏನು ಸುಖವಿತ್ತಿರುವೆ? ಇವರು ಒಂದು ಧನೋಪಾರ್ಜನದ ಯಂತ್ರವೆಂದು ಬಗೆಯುತ್ತಿದ್ದೆನಲ್ಲವೆ? ಇವರ ಹೃದಯದ ಸಮೀಪ ಹೋಗುವ ಯತ್ನ ಮಾಡಿದೆನೆ? ಪ್ರೇಮದೃಷ್ಟಿಯಿಂದ ಇವರನ್ನು ಕಂಡೆನೆ? ನನ್ನ

ಮನೆಯ ಹಣತೆ ಹಚ್ಚುವದನ್ನು ಬಿಟ್ಟು ಬೇರೆಯವರ ಮನೆ ಬೆಳಕಿನಲ್ಲಿ ಆನಂದಿಸುತ್ತಿದ್ದೆ. ವಿಲಾಸ ಮತ್ತು ಮನೋರಂಜನ ಇವೆರಡೇ ನನ್ನ ಜೀವನದ ಲಕ್ಷ್ಯಗಳಾಗಿದ್ದವು. ಉರಿಯುಹೋದ ಹೃದಯವನ್ನು ಈ ರೀತಿ ತಣಿಸಿಕೊಳ್ಳುತ್ತಿದ್ದೆ. ಖೀರು-ಕೆನೆಹಾಲುಗಳು ಸಿಗಲಿಲ್ಲವೆಂಬ ಸಿಟ್ಟಿನ ಮೇಲಿಂದ ನನ್ನ ರೊಟ್ಟಿಯ ಬಟ್ಟಲನ್ನು ಕಾಲಿಂದೊದ್ದು ತಳ್ಳಿದೆ.

ಈ ಬಿಟ್ಟು ಹೋಗುವ ಆತ್ಮಕ್ಕೆ ತನ್ನ ಮೇಲೆ ಎಷ್ಟು ಒಲುಮೆಯಿತ್ತೋ ಅದರ ಪೂರ್ಣ ಪರಿಚಯವು ರತನಳಿಗೆ ಇಂದು ದೊರೆಯಿತು— ಈಗಲೂ ಆಕೆ ಅದೇ ಚಿಂತೆಯಲ್ಲಿ ಮುಳುಗಿದ್ದಳು. ವಿರಾಮದಿಂದಾಗಿ ಈ ನಂದಿಹೋಗುತ್ತಿದ್ದ ದೀಪವು ಇನ್ನೂ ಕೆಲವು ದಿನ ಉರಿಯುವಂತಿರಲಿಲ್ಲವೆ? ನಾನು ಪತಿಯ ಕಡೆಗಿರುವ ನನ್ನ ಕರ್ತವ್ಯವನ್ನೆಂದಾದರೂ ಪಾಲಿಸಿದೆನೆ? ಇವರೊಡನೆ ತನ್ನ ಸಂಬಂಧವೇಕಾಯಿತೆಂದು ಅವಳ ಅಂತರಾತ್ಮವು ಯಾವಾಗಲೂ ವಿದ್ರೋಹ ವೆಬ್ಬಿಸುತ್ತಿತ್ತು. ಆ ವಿಷಯದಲ್ಲಿ ಎಲ್ಲ ಅಪರಾಧವು ಇವರದೇ ಏನು? ತಂದೆ ತಾಯಿಗಳು ತರುಣನಿಗೆ ಮದುವೆ ಮಾಡಿ ಕೊಟ್ಟಿದ್ದರೇದೇ ಮಾಡುವ. ಆ ಯುವಕರಲ್ಲಿಯೂ ವ್ಯಭಿಚಾರಿಗಳು, ಕ್ರೋಧಮುಖಿಗಳು, ಕುಡುಕರು ಎಷ್ಟು ಜನ ಇರುವುದಿಲ್ಲ? ಅಂತಾಗುತ್ತಿದ್ದರೆ ತನ್ನ ಸ್ಥಿತಿ ಹೇಗಾಗುತ್ತಿತ್ತೆಂದು ಈಗ ಹೇಳಬರುತ್ತದೆಯೆ? ರತನಳ ಒಂದೊಂದು ರೋಮವು ತನ್ನನ್ನು ತಿರಸ್ಕರಿಸಿಕೊಳ್ಳುತ್ತಿತ್ತು. ಅವಳು ಪತಿಯ ಶೀತಲಚರಣಗಳಲ್ಲಿ ಮಸ್ತಕವನ್ನಿಟ್ಟು ಬಿಕ್ಕಿ ಬಿಕ್ಕಿ ಅಳತೊಡಗಿದಳು. ತನ್ನ ಪ್ರಾಣವು ಆಗಲೇ ಹೊರಟು ಹೋದರೆ ಎಷ್ಟು ಒಳಿತೆಂದು ಆಕೆಯ ಮನಸ್ಸು ನುಡಿಯುತ್ತಿತ್ತು. ಮೃತ್ಯುವಿನ ದಿವ್ಯಜ್ಯೋತಿಯ ಇದಿರು ಆಕೆಯ ಅಂತರ್ಯದ ಎಲ್ಲಾ ಮಾಲಿನ್ಯವೂ, ಎಲ್ಲಾ ದುರ್ಭಾವನೆಯೂ, ಎಲ್ಲಾ ವಿದ್ರೋಹವೂ ಹಾರಿಹೋಯಿತು.

ವಕೀಲರ ಕಣ್ಣುಗಳು ತೆರೆದಿದ್ದವು. ಮುಖದಲ್ಲಿ ಯಾವ ಚಿಹ್ನೆಯೂ ಇಲ್ಲ. ಹರ್ಷಶೋಕ ಬಂಧನದಿಂದ ಅವರು ದೂರವಾಗಿದ್ದರು. ಅತ್ತರೆ ದುಃಖವಿಲ್ಲ, ನಕ್ಕರೆ ಸುಖವಿಲ್ಲ!

ಟೀಮಲನು ಅವರ ಬಾಯಿಗೆ ಗಂಗಾಜಲವನ್ನು ಹಾಕಿದನು. ಕುರುಡು ನಂಬಿಗೆಗಳ ಕಡುಹಗೆ ಇಂದು ಶಾಂತತೆಯಿಂದ ಅದನ್ನು ಕುಡಿದನು. ಏನು, ಧಾರ್ಮಿಕ ವಿಶ್ವಾಸವು ಉದಯಿಸಿತ್ತೆಂದೆ? ಅಲ್ಲ, ಅಲ್ಲ. ಇಂದವನು ವಿಷದ ಗುಟುಕನ್ನಾದರೂ ಇಷ್ಟೇ ಉದಾಸೀನತೆಯಿಂದ ಕುಡಿಯಬಲ್ಲನು.

ಮಾನವ ಜೀವನದ ಅತ್ಯಂತ ಮಹಾನ್ ಘಟನೆಯು ಎಷ್ಟು ಶಾಂತಿಯಿಂದ ಕಳೆದುಹೋಗುವುದು? ವಿಶ್ವದ ಮಹಾನ್ ಲಿಂಗವೂ, ಮಹತ್ವಾಕಾಂಕ್ಷೆಗಳ ಪ್ರಚಂಡಸಾಗರವೂ, ಉದ್ಯೋಗದ ಅನಂತ ಭಂಡಾರವೂ, ಪ್ರೇಮ-ದ್ವೇಷ-ಸುಖ-ದುಃಖಗಳ ಲೀಲಾಕ್ಷೇತ್ರವೂ ಬುದ್ಧಿ ಮತ್ತು ಬಲಗಳ ರಂಗಭೂಮಿಯೂ ಆದ ಇದು ಯಾರಿಗೂ ತಿಳಿಯದಂತೆ ಎಂದೋ ಎಲ್ಲಿಯೋ ಲೀನವಾಗಿ ಹೋಗುವುದು. ಒಂದು ಸೀನಿಲ್ಲ, ಒಂದು ಉಚ್ಛ್ವಾಸವಿಲ್ಲ, ಒಂದು ನಿಟ್ಟುಸಿದರೂ ಇಲ್ಲ! ಸಾಗರದ ತೆರೆಗಳು ಎಲ್ಲಿ ಕೊನೆಗೊಳ್ಳುವುದೆಂದು ಯಾರು ಹೇಳಬಲ್ಲರು? ಧ್ವನಿಯು ಎಲ್ಲಿ ವಾಯುಮಗ್ನವಾಗುವುದೆಂದು ಯಾರಿಗೆ ಗೊತ್ತಿದೆ? ಮಾನವೀಯ ಜೀವನವು ಸಹ ಆ ಧ್ವನಿ, ತೆರೆಗಳ ಹೊರತು ಮತ್ತೇನು? ಅದರ ಅವಸಾನವೂ ಅಷ್ಟೇ ಶಾಂತ, ಅಷ್ಟೇ ಅದೃಶ್ಯವಾಗುವುದರಲ್ಲಿ ಆಶ್ಚರ್ಯವೇನಿದೆ? ವಿಜ್ಞಾನದ ಉಪಾಸಕರು ಒಂದು ಕ್ಷೀಣಜ್ಯೋತಿ ಹೊರಟುಹೋಗುತ್ತದೆಂದನ್ನುತ್ತಾರೆ ಕಪೋಲ ವಿಜ್ಞಾನದ ಭಕ್ತರು ಕಣ್ಣಿಂದ ಹೋಯಿತು ಪ್ರಾಣ, ಬಾಯಿಂದ ಹೋಯಿತು, ಬ್ರಹ್ಮಾಂಡದಿಂದ ಹೋಯಿತು ಎಂದೆನ್ನುತ್ತಾರೆ! ಅಲೆ ನಾಶವಾಗುವಂದು, ಧ್ವನಿಲೀಲವಾಗುವಂದು, ಅದೇನು ಹೊಳೆವುದೆಂದೂ ಅದೇನು ಮೂರ್ತಿಮಂತವಾಗುವುದೆಂದೂ ಅವರನ್ನು ಕೇಳಿ ನೋಡಬೇಕು ಇದು ಅನಂತ ಯಾತ್ರೆಯ ವಿಶ್ರಮ ಮಾತ್ರವಲ್ಲದೆ ಅಂತವಲ್ಲ ಹೊಸ ಉತ್ಥಾನದ ಉದಯಗಿರಿ ಇದೇ ಅಲ್ಲವೆ?

ಎಷ್ಟು ದೊಡ್ಡ ಪರಿವರ್ತನೆ! ಸೊಳ್ಳೆಯ ಕಡಿತವನ್ನು ಸಹಿಸಲಾರದವನಿಗಿಂದು ಮಣ್ಣು ಹೇರಿದರೂ, ಅಗ್ನಿಚಿತೆಯ ಮೇಲಿಟ್ಟರೂ ಚಿಂತೆಯೇ ಇಲ್ಲ.

ಟೀಮಲನು ವಕೀಲರ ಮುಖ ನೋಡಿ ಎಂದ—ಅಮ್ಮಾ, ಮಂಚದಿಂದ ಕೆಳಗೆ ಹಾಕುವ. ಧನಿಗಳು ಹೊರಟೇಹೋದರು!

ಹೀಗೆಂದು ತನ್ನ ಕೈಗಳನ್ನು ಕಣ್ಣಮೇಲೊತ್ತಿಹಿಡಿದು ಗೊಳೋ ಎಂದು ಅಳತೊಡಗಿದನು.

ಇಬ್ಬರೂಸೇರಿ ಶವವನ್ನು ನೆಲದ ಮೇಲೆ ಮಲಗಿಸಿದರು ರತನಳು ಅಳತೊಡಗಿದಳು ತನಗಿನ್ನು ಸಂಸಾರದಲ್ಲಿ ಆಧಾರವಿಲ್ಲವೆಂಬುದಕ್ಕಲ್ಲ; ಅವರೊಡನೆ ತನ್ನ ಕರ್ತವ್ಯವನ್ನು ತಾನು ಮಾಡಲಿಲ್ಲವಲ್ಲಾ ಎಂಬುದನ್ನು ಸ್ಮರಿಸಿ ಅವಳು ಅಳುತ್ತಿದ್ದಳು.

ಆಗಲೇ ಕವಿರಾಜರು ಪದಾರ್ಪಣೆ ಮಾಡಿದರು. ರತನಳ ಹೃದಯದಲ್ಲಿ ಆಶೆಯ ಒಂದು ಕಿಡಿ ಉರಿಯುತ್ತಿತ್ತೋ ಏನೋ. ಝಕ್ಕನೆ ಎದ್ದುನಿಂತು, ಕೇಶಗಳನ್ನು ಸರಿಪಡಿಸಿಕೊಂಡು ಬಾಗಿಲಕಡೆ ನೋಡತೊಡಗಿದಳು. ಆಕಾಶ ವನ್ನು ಪ್ರಭಾತವು ತನ್ನ ಹೊಂಬಣ್ಣದ ಕಿರಣಗಳಿಂದ ರಂಜಿಸಿತ್ತು. ಈ ಆತ್ಮದ ನವಜೀವನದ ಪ್ರಭಾತವೂ ಇದೇ ಏನು?

## ೨೯

ಆ ದಿನವೇ ಶವವನ್ನು ಕಾಶಿಗೆ ತಂದು ದಾಹಕ್ರಿಯೆ ನಡೆಯಿತು. ಶೋಕಾತುರೆಯಾದ ರತನಳಿಗೆ ಉಣಿಸು-ತಿನಿಸಿನ ಪರವೆ ಇಲ್ಲ ದಿನವೂ ಏನಾ ದರೊಂದು ಮಾತನ್ನು ನೆನೆದು ಅಳುತ್ತಾ ಇರುವಳು. ಜಾಲಪಳು ದಿನವಿಡೀ ಅವಳೊಡನೆಯೇ ಕುಳ್ಳಿರುವಳು. ವಕೀಲರ ಸದ್ಗುಣಗಳ ವಿಷಯ ಹೇಳು ವಾಗ ರತನಳಿಗೆ ಶಾಂತಿಯೊದಗುವುದು. ಊಟ ಮಾಡುವುದೂ, ಶುಚಿ ಯಾದ ಬಟ್ಟೆಯನ್ನು ತೊಡುವುದೂ, ಓದಿನಿಂದ ಮನೋರಂಜನ ಮಾಡಿ ಕೊಳ್ಳುವುದೂ ಅವಳಿಗೆ ಈಗ ಸಮ್ಮತವಿಲ್ಲ ಶ್ರಾದ್ಧದ ದಿನ ತನ್ನ ಎಲ್ಲಾ ಆಭ ರಣಗಳನ್ನು ದಾನಮಾಡಿಬಿಟ್ಟಳು ಅವನ್ನು ಹಿಡಿದುಕೊಂಡು ಅವಳಿಗೇನಾಗ ಬೇಕು? ಪತಿಯ ಅತಿ ಚಿಕ್ಕ ವಸ್ತುವೂ ಅವಳಿಗೆ ಈಗ ಪೂಜ್ಯ ಅದನ್ನು ಅವರ ಸ್ಮೃತಿಚಿಹ್ನವೆಂದು ಬಲು ಜಾಗರೂಕತೆಯಿಂದ ತೆಗೆದಿಡುವಳು ಅವಳ ಸ್ವಭಾವವು ಈಗ ಕುಸುಮದಷ್ಟು ಕೋಮಲ. ಕ್ರೋಧ ಬರುವ ಕಾಲ ಎಂದೋ ಕಳೆದುಹೋಯಿತು.

ವಕೀಲರ ಅಣ್ಣನ ಮಗನೊಬ್ಬನಿದ್ದನು— ಮಣಿಭೂಷಣ ಯಾವಾ ಗಲೂ ನಗುಮುಖದವನು, ಕಾರ್ಯದಲ್ಲಿ ಕುಶಲನು ಬಂದು ಎರಡು ತಿಂಗ ಳಲ್ಲೇ ಪ್ರಯಾಗದ ಪ್ರತಿಷ್ಠಿತ ಮಹನೀಯರ ಪರಿಚಯ ಮಾಡಿಕೊಂಡು ಬಿಟ್ಟ ವಕೀಲರ ಹೆಸರಲ್ಲಿದ್ದ ಇಪ್ಪತ್ತುಸಾವಿರರೂಪಾಯಿಗಳನ್ನು ತನ್ನ ಹೆಸರಿಗೆ ಮಾಡಿಕೊಂಡನು ಇದನ್ನು ಟೀಮಲನು ಒಡತಿಗೆ ತಿಳಿಸಿದನು. ಅವಳು ಪಿಟ್ಟೆನ ಲಿಲ್ಲ. ಹಳ್ಳಿಯ ಗೇಣಿವಸೂಲಿಯನ್ನೂ ಮಣಿಭೂಷಣನೇ ನೋಡಿಕೊಳ್ಳು ತ್ತಿದ್ದನು. ರತನಳ ಹತ್ತಿರ ಒಂದು ಮಾತೂ ಕೇಳುತ್ತಿರಲಿಲ್ಲ. ಕೆಲದಿನಗಳ ಮೇಲೆ ಟೀಮಲನ ಮೇಲೆ ಕಳ್ಳತನದ ಅಪಾದನೆ ಹೊರಿಸಿ ಅವನನ್ನು ಹೊರ ದಬ್ಬಿದನು. ರತನಳು ಉಸಿರೆತ್ತಲಿಲ್ಲ ಅಡುಗೆಯವನಿಗೆ ಭಂಗಿ ಕುಡಿಸಿಕುಡಿಸಿ

ಅವನು ಮಣಿಭೂಷಣನ ಕೈಯೊಳಗಾದನು ಆಳುಹೋಳುಗಳನ್ನು ವಶ ಮಾಡಿಕೊಳ್ಳುವುದೇನೂ ಕಷ್ಟವಲ್ಲ

ಒಂದುದಿನ ಮಣಿಭೂಷಣನು ಬಂದು ಹೇಳಿದನು—ಚಿಕ್ಕವ್ವಾ, ನಾನು ಇನ್ನಿಲ್ಲಿರುವುದು ವ್ಯರ್ಥವೆಂದು ತೋರುತ್ತದೆ. ನಿಮ್ಮನ್ನು ಕರೆದುಕೊಂಡು ಮನೆಗೆ ಹೋಗುವುದೆಂದು ಯೋಚಿಸಿದ್ದೇನೆ. ಈ ಬಂಗಲೆಯನ್ನು ಮಾರಬೇಕಾಗಿದೆ. ಒಳ್ಳೆಯ ಕ್ರಯ ಸಿಗುತ್ತದೆ

ರತನಳನ್ನು ಯಾರೋ ಹೊಡೆದೆಬ್ಬಿಸಿದಂತಾಯಿತು. ಗಾಬರಿಯಿಂದ ನುಡಿದಳು—ಏನು ಹೇಳುತ್ತಿದ್ದೆ ನನ್ನ ಹತ್ತಿರ?

‘ಏನೂ ಇಲ್ಲ. ನಿಮ್ಮನ್ನು ಕರೆದುಕೊಂಡು ಮನೆಗೆ ಹೋಗುವುದೆಂದು ಮಾಡಿದ್ದೇನೆ’

‘ಹಾಂ. ಒಳ್ಳೆಯದು’

‘ಚಿಕ್ಕಪ್ಪನವರು ಏನಾದರೂ ಉಯಿಲು ಬರೆದಿದ್ದರೆ ಅದನ್ನು ನೋಡುವ. ಅದರಂತೆ ನಡೆವುದು ನಮ್ಮ ಧರ್ಮ’

“ಇಲ್ಲ. ಹಾಗೇನೂ ಬರೆಯಿಸಿಲ್ಲ”

‘ಏನಾದರೂ ಅವರ ಹೆಸರಿಗೆ ಸ್ಮಾರಕ ಕಟ್ಟಿಸಬೇಕೆಂದು ನನ್ನ ಮನಸ್ಸು. ಅವರ ಹೆಸರಿನಲ್ಲಿ ಹಳ್ಳಿಯಲ್ಲೊಂದು ಸಂಸ್ಕೃತ ಪಾಠಶಾಲೆಯನ್ನು ತೆರೆಯುವ. ಆಗದೆ?”

“ಬಹಳ ಒಳ್ಳೆಯದು”

“ಈ ಬಂಗಲೆಯನ್ನು ಮಾರಿ ಹಣವನ್ನು ಬ್ಯಾಂಕಿನಲ್ಲಿರಿಸುವ”

“ಸರಿ. ಇನ್ನು ನನಗೇಕೆ ಹಣ?”

‘ನಿಮ್ಮ ಸೇವೆಗೆ ನಾವು ಯಾವಾಗಲೂ ಸಿದ್ಧರಿದ್ದೇವೆ. ಮೋಟರನ್ನೂ ಮಾರಿಬಿಡುವ.’

‘ಅಷ್ಟು ಅವಸರವೇನು? ಬ್ಯಾಂಕಿನಲ್ಲಿ ಸ್ವಲ್ಪ ರೂಪಾಯಿ ಇರಬೇಕು”

‘ಬ್ಯಾಂಕಿನಲ್ಲಿ ರೂಪಾಯಿ ಇದ್ದಿದ್ದರೆ ಈವರೆಗೆ ಮನೆಯ ಖರ್ಚು ನಡೆಯುತ್ತಿರಲಿಲ್ಲವೆ? ಅಯ್ಯಮ್ಮಾ, ಈ ಕಲ್ಕತ್ತೆಯಲ್ಲಿ ರೂಪಾಯಿ ಗಾಳಿಗೆ ಹಾರಿ ಹೋದಹಾಗೆ ಖರ್ಚಾಗುತ್ತದೆ ನಾನು ಈ ಶಹರಿನಲ್ಲಿ ಒಂದು ತಿಂಗಳು ಕೂಡಾ ಇರಲಾರೆ. ಮೋಟರನ್ನಂತೂ ಬೇಗನೆ ಹೊರಗೆ ಹಾಕಬೇಕು.’

'ಹೂ, ಹೂಂ ಹಾಗೆಯೇ ಮಾಡುವುದೊಳ್ಳೆಯದು"

ರತನಳಿಗೆ ಈಗ ಯಾರ ಮೇಲೂ ಶಂಕೆ ಇಲ್ಲ. ಸ್ವಲ್ಪ ಸಹ ಸುಭೂತಿ ತೋರಿಸಿದವರನ್ನೂ ಅವಳು ನಂಬುವಳು. ಅವಳಲ್ಲಿದ್ದ ಎಲ್ಲಾ ಮಲಿನತೆ ಭಿನ್ನತೆಗಳು ಈಗ ಬೂದಿಯಾಗಿವೆ. ಅವಳ ಕಣ್ಣಮುಂದಿನಿಂದಲೇ ಕಳ್ಳನು ಕದಿಯುತ್ತಿದ್ದರೂ ಅವಳು ಗುಲ್ಲೆಬ್ಬಿಸಳು.

ಷೋಡಶಿಯ ದಿನ ಕಳೆದ ಬಳಿಕ ಜಾಲಪಳು ರತನಳಲ್ಲಿಗೆ ಹೆಚ್ಚು ಹೆಚ್ಚಾಗಿ ಬರುವುದನ್ನು ನಿಲ್ಲಿಸಿದಳು. ಎಂದಾದರೊಮ್ಮೆ ಒಂದೆರಡು ಗಂಟೆಗಳವರೆಗೆ ಹೋಗಿ ಬರುವಳು. ಈಗೀಗ ದಯಾನಾಥರಿಗೆ ಜ್ವರ ಹಿಡಿದು ಬಿಟ್ಟಿರುವುದರಿಂದ ಅವರನ್ನು ಬಿಟ್ಟಿರುವುದಕ್ಕೂ ಆಗುವುದಿಲ್ಲ. ದಯಾನಾಥರ ಕೋಣೆಯಲ್ಲಿ ಸಮಾಚಾರಪತ್ರಿಕೆಗಳ ಫಾಯಿಲುಗಳೆಷ್ಟೋ ಬಿದ್ದಿದ್ದುವು. ಒಂದು ದಿನ ಜಾಲಪಳು ಸುಮ್ಮಸುಮ್ಮನೆ ಅವುಗಳಲ್ಲೊಂದನ್ನು ಕೈಗೆ ತೆಗೆದುಕೊಂಡಳು. ಅದರಲ್ಲಿ ಚದುರಂಗದ ಸ್ಪರ್ಧೆಯೊಂದು ಅವಳ ಕಣ್ಣಿಗೆ ಬಿತ್ತು. ತನ್ನ ಕೋಣೆಯ ಒಂದು ಹಲಗೆಯಮೇಲೆ ಇಂತಹ ನಕ್ಷೆಗಳ ಪುಸ್ತಕವೊಂದಿದ್ದುದನ್ನು ನೋಡಿದ್ದು ನೆನಪಿಗೆ ಬಂದಿತು. ಕೂಡಲೇ ಹೋಗಿ ಅದನ್ನು ತಂದು ಹೀಗೆ ಯೋಚಿಸಿದಳು. "ಇವನ್ನು ಯಾವುದಾದರೂ ಪತ್ರಿಕೆಯಲ್ಲಿ ಪ್ರಕಟಿಸಿ, ಪುರಸ್ಕಾರವನ್ನು ಇಟ್ಟುಬಿಡುವುದು. ಇದು ಎಲ್ಲರೂ ಬಗೆಹರಿಸುವಷ್ಟು ಸುಲಭವೂ ಅಲ್ಲ. ಇವರು ಇವನ್ನು ಒಮ್ಮೆ ಪೂರ್ತಿಮಾಡಿರುವುದರಿಂದ ಬೇರೆಯವರಿಗಿಂತ ಮೊದಲೇ ಮಾಡಬಲ್ಲರು. ಯಾರು ಮೊದಲು ಕಳುಹುವರೋ ಅವರಿಗೇ ಬಹುಮಾನವೆಂದು ಪ್ರಕಟಿಸಿದರಾಯಿತು."

ಇದೇ ಯೋಚನೆಯಲ್ಲಿ ಮುಳುಗಿದ್ದುದರಿಂದ ಅವಳು ಈ ಹೊತ್ತು ರತನಳ ಬಳಿ ಹೋಗಿರಲಿಲ್ಲ. ಸಾಯಂಕಾಲದ ಹೊತ್ತಿಗೆ ರತನಳೇ ಬಂದಳು. ಪತಿಶೋಕದ ಬಳಿಕ ಇದೇ ಮೊದಲ ಬಾರಿ ಅವಳು ಹೊರಬರುತ್ತಿರುವುದು. ಮೋಟರು ಟಾಂಗಕ್ಕಿಂತಲೂ ಮೆಲ್ಲಗೆ ಸಾಗುತ್ತಿತ್ತು. ದಾರಿಯ ಬದಿಯಲ್ಲಿ ಒಬ್ಬಳು ಮುದುಕಿ ಕೂತಿದ್ದಳು. ರತನ ಮೋಟರು ನಿಲ್ಲಿಸಿ ಅವಳಿಗೆ ನಾಲ್ಕಾಣೆ ಕಾಸನ್ನಿತ್ತು ಮುಂಬರಿದಳು. ತುಸು ದೂರದಲ್ಲಿ ಇಬ್ಬರು ಕಾನ್‌ಸ್ಟೇಬಲ್‌ಗಳು ಒಬ್ಬ ಕೈದಿಯನ್ನೊಯ್ಯುತ್ತಿದ್ದರು. ಅವಳು ಅವರಲ್ಲೊಬ್ಬನನ್ನು ಕರೆದು ಅವನ ಕೈಯಲ್ಲಿ ಒಂದು ರೂಪಾಯಿ ಕೊಟ್ಟು ಆ ಕೈದಿಗೆ ಮಿಠಾಯಿ ತಿನಿಸೆಂದು

ಹೇಳಿದಳು. ಅವನು ಸಲಾಂ ಮಾಡಿ ಇವ್ವೊತ್ತು ಯಾರೋ ಸುಜನರ ಮುಖ ನೋಡಿ ಎದ್ದಿರುವೆನೆಂದಂದುಕೊಂಡು ತೆರಳಿದನು.

ಜಾಲಪಳು ಅವಳನ್ನು ನೋಡುತ್ತಲೇ ಎಂದಳು—ಅಕ್ಕಾ ಕ್ಷಮಿಸು. ತಂದೆಗೆ ಕೆಲವುದಿನಗಳಿಂದ ಜ್ವರ ಹತ್ತಿರುವುದು.

ರತನಳು ಕೂಡಲೇ ಮುನ್ಷಿಯವರ ಕೋಣೆಯ ಕಡೆ ಧಾವಿಸುತ್ತ ಹೇಳಿದಳು—ನೀನು ಈವರೆಗೂ ನನಗೆ ಹೇಳಬೇಡವೆ?

ಮುನ್ಷಿಯವರ ಜ್ವರ ಈಗ ಸ್ವಲ್ಪ ಇಳಿದಿತ್ತು. ರತನಳನ್ನು ಕಂಡೊಡನೆ ಹೇಳಿದರು–ಕೇಳಿದೆ. ಬಹಳ ದುಃಖವಾಯಿತವ್ವಾ. ಮತ್ತೇನು? ಸಂಸಾರದ ನೀತಿಯೇ ಇದು. ಇಂದು ಒಬ್ಬನ ಸರತಿ, ನಾಳೆ ಬೇರೊಬ್ಬನದು. ನಾನು ಹೊರಡುವುದರಲ್ಲಿದ್ದೇನೆ. ಉಳಿವ ಆಶೆಯಿಲ್ಲವ್ವಾ. ಮಗನೊಬ್ಬನಿದ್ದ, ಅವನೂ ಕೈತಪ್ಪಿಹೋದ. ಇನ್ನಿಬ್ಬರಿದ್ದಾರೆ ಅವರಿಗೆ ನಾನು ಇದ್ದರೂ ಇಲ್ಲದಿದ್ದರೂ ಒಂದೇ. ಹೊಟ್ಟೆತುಂಬಿಸಿಕೊಂಡು ಸುಖವಾಗಿದ್ದಾರೆ. ನನ್ನ ಯಾವ ಕೆಲಸಕ್ಕೂ ಇಲ್ಲ. ಇಲ್ಲಿಸ್ವಲ್ಪ ಕೂಡಿರೆಂದರೆ ಅವರಿಗೆ ಉಸಿರುಕಟ್ಟುವುದಂತೆ. ಏನು ಮಾಡಲಿ? ಅಂತೂ ಉಳಿಯುವುದು ಸುಳ್ಳು.

'ಇದು ಬರೇ ಮಲೇರಿಯಾ. ನಾಲ್ಕಾರು ದಿನಗಳಲ್ಲಿ ನೆಟ್ಟಗಾಗುವಿರಿ. ಗಾಬರಿ ಮಾಡಿಕೊಳ್ಳಬೇಡಿ.'

''ಕೂತುಕೊಂಡಿರವ್ವಾ, ನೀವೇನೋ ಹೀಗನ್ನುತ್ತೀರಿ. ನಿಮ್ಮ ಆಶೀರ್ವಾದ ಬಲದಿಂದ ಉಳಿದರೂ ಉಳಿದೇನು; ನನಗೆ ಆಶೆ ಇಲ್ಲ. ನಾನು ಯಮರಾಜನೊಡನೆ ಸೊಂಟಕಟ್ಟಿ ಜಗಳಕ್ಕೆ ನಿಲ್ಲಲು ಸಿದ್ಧನಾಗಿದ್ದೇನೆ. ಇನ್ನು ಅವನ ಮನೆಯ ಆತಿಥ್ಯ ಹೇಗಿದೆ ಎಂದು ನೋಡಬೇಕು. ಅಲ್ಲಿಯೂ ಪತ್ರಗಳು ಇಲ್ಲಿಯ ಹಾಗೆಯೇ ಇರುತ್ತವೆಂದು ಜನರು ಹೇಳುತ್ತಾರೆ. ಕಚೇರಿಯಿದೆ, ಆಫೀಸರರಿರುತ್ತಾರೆ, ರಾಜರಿದ್ದಾರೆ, ದರಿದ್ರರಿದ್ದಾರೆ, ಭಾಷಣಗಳಿರುತ್ತವೆ, ವೃತ್ತಪತ್ರಗಳಿರುತ್ತವೆ–ಅಂದರೆ ಎಲ್ಲ ಇಲ್ಲಿಯ ಹಾಗೆಯೇ ಆಯಿತು. ಹೀಗಿದ್ದರೆ ಚಿಂತೆಯೇಕೆ? ಅಲ್ಲಿಯೂ ಕಾಲುನೀಡಿಕೊಂಡು ಪೇಪರ ನೋಡುತ್ತಿರುವೆ''

ರತನಳಿಗೆ ನಗುವನ್ನು ತಡೆಯಲಾಗಲಿಲ್ಲ. ಮುನ್ಷಿಯವರು ವಿನೋದ ಭಾವದಿಂದ ಹೀಗೆ ಹೇಳುತ್ತಿದ್ದಿಲ್ಲ. ಅವರ ಮುಖದಲ್ಲಿ ಗಂಭೀರ ವಿಚಾರದ

ರೀತಿ ಇತ್ತು. ರತನಳು ತನ್ನ ಅಸಾಮಾಯಿಕ ನಗುವನ್ನು ಅಡಗಿಸಲು ಹೊರಗೆ ಬಂದಳು. ಜಾಲಪಳೂ ಅವಳ ಸಂಗಡವೇ ಹೊರಟಳು.

ರತನಳೆಂದಳು— ತಂದೆ ಮನಸ್ಸಿನಲ್ಲಿ ಏನು ಯೋಚಿಸುತ್ತಿರಬಹುದು. ಇನ್ನಲ್ಲಿಗೆ ಹೋಗಲಾರೆ. ಅಲ್ಲ, ಹೀಗೆಯು ಏನಾದರೊಂದು ಮಾತು ಹೇಳಿ ಬಿಡುತ್ತಾರೆ. ನಗೂ ಬರದಿರವುದಿಲ್ಲ.

ಜಾಲಪ– ನನಗೂ ಹೀಗಾಗುವುದುಂಟು. ಜ್ವರ ಚನ್ನಾಗಿ ಬರುತ್ತಿರು ವಾಗ ಬಾಯಿಗೆ ಬಂದ ಹಾಗೆ ಒದರುತ್ತಾರೆ. ನಮಗೆ ನಗು ಒತ್ತರಿಸುತ್ತದೆ. ಇವೊತ್ತು ಬೆಳಗ್ಗೆ ' ನನ್ನ ಹೊಟ್ಟೆ ಭಗ್ಗಾಗದೆ, ನನ್ನ ಹೊಟ್ಟೆ ಭಗ್ಗಾಗಿದೆ ' ಎಂದೆನ್ನತೊಡಗಿದರು. ನಮಗದರ ಅರ್ಥವಾಗಲೇ ಇಲ್ಲ. ಅಕ್ಕಾ, ಕೋಣೆಗೆ ಹೋಗುವ.

' ನನ್ನೊಡನೆ ಬರುವುದಿಲ್ಲವೆ ? '

' ಇಂದು ಬರಲಾರೆ '

' ನಾಳೆ ಬರುವಿಯಾ ? '

' ನೋಡಬೇಕು. ಇವರಿಗೆ ಗುಣವಾಗದೆ ಬರುವುದಿಲ್ಲವೆಂದು ಮಾಡಿದ್ದೇನೆ. '

' ಇಲ್ಲ, ನೀನು ಬರಲೇ ಬೇಕು ನಾಳೆ. ನಿನ್ನ ಹತ್ತಿರ ಒಂದು ಸಲಹೆ ಕೇಳಲಿಕ್ಕಿದೆ ? '

' ಏನದು. '

' ಮನ್ನೀ ಹೇಳುತ್ತಾನೆ, ಇನ್ನು ಇಲ್ಲಿರುವುದೇಕೆ ಮನೆಗೆ ಹೋಗುವ ಬಂಗಲೆ ಮಾರುವ ಎಂದು '

ಜಾಲಪಳು ಒಮ್ಮೆಗೆ ಅವಳ ಕೈಹಿಡಿದು ಹೇಳಿದಳು—ಅಕ್ಕಾ, ಎಂತಹ ಕೆಟ್ಟ ಸಂಗತಿ ಹೇಳಿದಿಯೆ ? ನನ್ನನ್ನು ಈ ಅವಸ್ಥೆಯಲ್ಲಿ ಬಿಟ್ಟು ಹೋಗುವಿಯಾ ? ಬೇಕಾದರೆ ಮನ್ನಿ ಬಂಗಲೆಯನ್ನು ಮಾರಲಿ. ಆದರೆ ನೀನು ಮಾತ್ರ ಹೋಗುವ ಹೆಸರೆತ್ತಬೇಡ ನನಗೇಕೆ ನಿನ್ನ ಮೇಲೆ ಇಷ್ಟು ಪ್ರೇಮವೋ ತಿಳಿಯದು ನೀನು ಹೋದರೆ ನಾನು ಜೀವದಿಂದಿರಲಾರೆ ಅವರ ಪತ್ತೆಯಾಗುವುದರ ಮೊದಲೇ ನೀನು ಹೋಗಿ ಬಿಟ್ಟರೆ ನನ್ನ ಪಾಡೇನು ?

ಹೀಗೆಂದು ರತನಳನ್ನು ಮೇಲೆ ಕರೆದುಕೊಂಡು ಹೋದಳು.

‘ನನ್ನನ್ನು ಬಿಟ್ಟು ಹೋಗುವುದಿಲ್ಲವೆಂದು ಪ್ರಮಾಣಮಾಡು’

‘ಇಗೋ, ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗುವದಿಲ್ಲ. ಬಂಗಲೆಯನ್ನು ಮಾರುವುದಿಲ್ಲ. ಇನ್ನೂರು ರೂಪಾಯಿ ಮನೆ ಬಾಡಿಗೆ ಬರುತ್ತದೆ. ಅದು ನಮ್ಮಿಬ್ಬರ ಪೋಷಣೆಗೆ ಯಥೇಷ್ಟ ಸಾಕು ”

ಥಟ್ಟನೆ ನೆಲದ ಮೇಲೆ ಚದುರಂಗದ ನಕ್ಷೆಯನ್ನು ನೋಡಿ ಕೇಳಿದಳು— ಇದೇನು? ಯಾರೊಂದಿಗೆ ಆಡುತ್ತಿದ್ದಿಯೋ?

ಜಾಲಪಳು ತನ್ನ ಯೋಚನೆಯನ್ನರುಹಿದಳು. ರತನಳಿಗೂ ಅದು ಸೂಕ್ತವೆಂದು ಕಂಡಿತು ತಾನು ನಾಳೆ ಐವತ್ತು ರೂಪಾಯಿ ತಂದು ಕೊಡುವುದಾಗಿಯೂ ರೂಪಾಯಿಯನ್ನೂ ನಕ್ಷೆಯನ್ನೂ ಕಲ್ಕತ್ತೆಯ ‘ಪ್ರಜಾಮಿತ್ರ’ದ ಸಂಪಾದಕರ ಕಡೆ ಕಳುಹಿಸುವುದಾಗಿ ನಿಶ್ಚಯಿಸಿ ಅಲ್ಲಿಂದೆದ್ದಳು.

ಅಷ್ಟರಲ್ಲಿ ‘ವಧೂ, ವಧೂ,’ ಎಂದು ಕೋಣೆಯಿಂದ ಮುನ್ನಿಯವರ ಕೂಗು ಕೇಳಿಸಿತು. ಜಾಲಪಳು ಕೋಣೆಯ ಕಡೆ ಧಾವಿಸಿದಳು. ರತನಳು ಹೊರಗೆ ಹೋಗುತ್ತಿದ್ದಾಗ ರಾಮೇಶ್ವರಿ ಬೀಸಣಿಗೆಯಿಂದ ಬೀಸಿಕೊಳ್ಳುತ್ತಾ ಅಲ್ಲಿಗೆ ಬಂದಳು. ರತನಳೆಂದಳು—ಇದೇನಮ್ಮಾ, ನಾನು ಚಳಿಯಿಂದ ನಡುಗುತ್ತಿದ್ದೇನೆ. ನಿಮಗೆ ಸೆಕೆಯಾಗುತ್ತಿದೆಯೆ ? ಎಲಾ, ಕಾಲಲ್ಲೆಲ್ಲ ಬಿಳಿ ಬಿಳಿ ಯಾಗಿರುವುದಲ್ಲ! ಇದೇನು? ಹಿಟ್ಟು ಬೀಸುತ್ತಿದ್ದಿರಾ?

ರಾಮೇಶ್ವರಿ ಲಜ್ಜಿತಳಾಗಿ ಎಂದಳು—ಹೌದು ಕೈಯಿಂದ ಬೀಸಿದ ಹಿಟ್ಟಿನ ರೊಟ್ಟಿ ಕೊಡಬೇಕೆಂದು ವೈದ್ಯರು ಹೇಳಿರುವರು. ಒಂದು ಸೇರಿಗೆ ಒಂದಾಣೆ ಕೊಡುವೆನೆಂದು ಹೇಳಿದರೂ ಬೀಸುವುದಕ್ಕೆ ಜನವೇ ಸಿಗುವದಿಲ್ಲ.

ರತನಳು ಆಶ್ಚರ್ಯದಿಂದ ಹೇಳಿದಳು–ನೀವೂ ಬೀಸುವಕಲ್ಲು ತಿರುಗಿಸುವುದೆ?

ರಾಮೇಶ್ವರಿ—ಏನು ಮಹಾ ಒಂದು ಪಾವು ಬೀಸಿದರೆ ಎರಡು ದಿನಕ್ಕೂ ಹೆಚ್ಚಾಗುವುದು. ವಧು ಮಾಡುತ್ತಿದ್ದಳು ಇದನ್ನು. ಆದರೆ ಆಗ ನಾನು ಅವರ ಬಳಿ ಕುಳ್ಳಿರಬೇಕಾಗಿ ಬರುವುದು. ನಾನು ರಾತ್ರಿಯಿಡೀ ಬೀಸುತ್ತಲೇ ಇರಬಲ್ಲೆ, ಅವರ ಬಳಿ ಒಂದು ನಿಮಿಷ ಇರುವುದೆಂದರೆ ಪ್ರಾಣಕ್ಕೆ ಬರುವುದು.

ರತನ ಹೋಗಿ ಬೀಸುವ ಕಲ್ಲಿನ ಬಳಿ ನಿಂತಳು. ನಗುತ್ತಾ ಮುಕ್ಕಾಲೆಯ ಮೇಲೆ ಕೂತು ಎಂದಳು—ಎಲ್ಲಿ ಗೋದಿ ತನ್ನಿ. ನೋಡುವ; ನನಗೂ ಆಗುತ್ತದೋ ಇಲ್ಲವೋ ನೋಡಬೇಕು.

ರಾಮೇಶ್ವರಿ ಕಿವಿಯನ್ನು ಮುಚ್ಚಿಕೊಂಡು—ಅಯ್ಯಯ್ಯೋ, ಬೇಡಪ್ಪ, ಬೇಡ ನೀನು ಬೀಸುವುದೆ? ಕೈ ನೊಂದೀತು. ಬೊಕ್ಕೆಯೇಳುವುದು

"ಏನೂ ಇಲ್ಲವಮ್ಮ, ನೀವು ಗೋದಿ ತನ್ನಿ"

"ಗೋದಿ ಎಲ್ಲ ಖರ್ಚಾಗಿದೆ ಈಗ ಪೇಟೆಗೆ ಹೋಗಿ ತರುವುದು ಯಾರು?"

'ಇಲ್ಲ ನಿಮ್ಮ ಸುಳ್ಳು ನನಗೆ ಗೊತ್ತಾಯಿತು. ನೋಡಿ. ನಾನೇ ಹೋಗಿ ಉಗ್ರಾಣದಲ್ಲಿ ನೋಡಿ ಬರುತ್ತೇನೆ."

ಹೀಗೆಂದು ರತನ ಉಗ್ರಾಣಕ್ಕೆ ಹೋಗಿ ಗೋದಿಯನ್ನು ಹುಡುಕಿ ತಂದಳು. "ನೋಡಿ. ಸಿಕ್ಕಿತೋ ಇಲ್ಲವೋ?"

"ಅಯ್ಯೋ, ಯಾರಾದರೂ-ನೋಡಿದರೆ ಏನೆಂದಾರು?"

ಜಾಲಪಳು ಅಲ್ಲಿಗೆ ಬಂದಳು. ಈ ಪ್ರಕರಣವನ್ನು ನೋಡಿ ಹೇಳಿದಳು—ಇದೇನಮ್ಮಾ!

"ನಾನೇನು ಮಾಡಲಿ. ಈಕೆ ಕೇಳುವುದಿಲ್ಲ."

ರತನ ಆನಂದದಿಂದ ಬೀಸುತ್ತಿದ್ದಳು. ಜಾಲಪಳು ನಕ್ಕು ಹೇಳಿದಳು-

ಏ ಬೇ, ಹಿಟ್ಟು ಸಣ್ಣಾಗ ದಿದ್ದರೆ ದುಡ್ಡು ಸಿಗಲಿಕ್ಕಿಲ್ಲ!

'ಹಾಂ, ಹಾಂ, ಎಷ್ಟು ಸಣ್ಣ ಬೇಕಾದರೂ ಮಾಡೇನು. ಹಣಾ ಸರಿ ಸಿಗ್ಬೇಕು'

' ಸೇರಿಗೆ ಒಂದೂವರೆ ಕಾಸು"

"ಹಾಂ ನ್ನಮ್ಮಾ."

"ಮುಖ ತೊಳೆದು ಕೊಂಡು ಬಾ."

'ನಾನಿದೆಲ್ಲವನ್ನೂ ಬೀಸಿಯೇ ಏಳುವವಳು. ನೀನೇಕೆ ಇಲ್ಲಿ ನಿಂತಿದ್ದೀಯೆ?

"ನಾನೂ ಬರಲೆ?"

"ಬೀಸುವ ಹಾಡು ಹೇಳ ಬೇಕನಿಸುತ್ತಿದೆ."

"ಒಬ್ಬಳೆ ಹಾಡುವಿಯಾ ಒಟ್ಟಿಗೆ ಹಾಡುವ."

ರಾಮೇಶ್ವರಿ ಯೊಡನೆ ಜಾಲ ಏಳೆಂದಳು—ಅಮ್ಮಾ, ಸ್ವಲ್ಪ ಅಲ್ಲಿ ಕೂಡಿ. ನಾನು ಈಗಲೇ ಬಂದೆ

ಜಾಲಪಳೂ ರತನಳ ಬಳಿ ಕೂತಳು. ಇಬ್ಬರೂ ಬೀಸುವ ಹಾಡು ಹೇಳತೊಡಗಿತರು—

**ಮೋಹಿ ಜೋಗಿನ್ ಬನಾಕೇ ಕಹಾಂ ಗಯೋ ರೇ ಜೋಗಿಯಾ!**

ಇಬ್ಬರ ಸ್ವರವೂ ಮಧುರ ವಾಗಿತ್ತು ಒಂದು ಚರಣ ಹೇಳಿ ಇಬ್ಬರೂ ಮೌನರಾದಾಗ ಬೀಸುವ ಕಲ್ಲಿನ ಸ್ವರವು ಕಂಠ ಧ್ವನಿಯಿಂದ ರಂಜಿತವಾದಂತೆ ಮತ್ತಷ್ಟು ಮನೋಹರವಾಗಿ ಕೇಳಿಸುತ್ತಿತ್ತು ಇಬ್ಬರ ಎದೆಗಳೂ ಬಾಳುವೆಯ ಸ್ವಾಭಾವಿಕ ಆನಂದದಿಂದ ಪೂರ್ಣವಾಗಿದ್ದುವು—ಶೋಕದ ಭಾರವೂ ಇಲ್ಲ, ವಿಯೋಗದ ದುಃಖವೂ ಇಲ್ಲ ಪ್ರಭಾತದ ಅಪೂರ್ವ ಶೋಭೆಯಲ್ಲಿ ಮಗ್ನವಾಗಿ ಹಕ್ಕಿಗಳೆರಡು ದನಿಗೂಡಿಸುತ್ತಿದ್ದುವು.

[೩೦]

ರಮಾನಾಥನ ಚಹದ ಅಂಗಡಿ ಸುರುವಾಯಿತು ರಾತ್ರಿಗೆ ಮಾತ್ರ ತೆರೆಯುತ್ತಿತ್ತು ಹಗಲಿಗೆ ಮುಚ್ಚಿರುತ್ತಿತ್ತು. ವ್ಯಾಪಾರ ಚೆನ್ನಾಗಿತ್ತು. ದೇವಿದೀನನೇ ಹೆಚ್ಚಾಗಿ ಅಂಗಡಿಯಲ್ಲಿ ಕುಳ್ಳಿರುತ್ತಿದ್ದನು ದಿವಸಕ್ಕೆ ಮೂರು ನಾಲ್ಕು ರೂಪಾಯಿಗೆ ತೊಂದರೆ ಇಲ್ಲ ಕೈಯಲ್ಲಿ ನಾಲ್ಕು ಕಾಸಾದೊಡನೆ ರಮಾನಾಥನು ಒಂದು ಅಂದವಾದ ಮೇಜನ್ನು ತರಿಸಿದನು ಎರಡು ದೈನಿಕ ಪತ್ರಗಳನ್ನೂ ತರಿಸುತ್ತಿದ್ದನು ಕೆಲವೇ ದಿನಗಳಲ್ಲಿ ಎಲ್ಲ ಖರ್ಚು ಕಳೆದು ಮೂರು ನಾಲ್ಕು ರೂಪಾಯಿ ಉಳಿಯುವಷ್ಟು ವ್ಯಾಪಾರ ವಾಗ ತೊಡಗಿತು

ಒಂದು ದಿನ ಅವನು ಒಂದು ರೇಶಿಮೆಯ ಶಾಲನ್ನು ತಂದು ದೇವಿದೀನನಿಗೆ ಕೊಟ್ಟನು ಜಗ್ಗೊ ತಲೆನೋವೆಂದು ಒದರುತ್ತಿದ್ದಳು ಅವಳ ಸಲುವಾಗಿ ಸುಗಂಧಿತ ತೈಲದ ಎರಡು ಬಾಟ್ಲಿಗಳನ್ನು ತಂದಿತ್ತನು ಇಬ್ಬರೂ ಆನಂದತುಂದಿಲರಾದರು. ಈಗ ಮುದಕಿಯು ಹೊರೆಹೊತ್ತು ಕೊಂಡು ಬಂದರೆ ರಮಾನಾಥನಿಗಾಗದು. ಅವಳನ್ನು ಗದರಿಸುವನು ಅವಳು ಕೂಡ ಮಂಡಿಯಿಂದ ಸಾಮಾನು ತರುವಾಗ ರಮಾನಾಥನಿದ್ದಾನೋ ಇಲ್ಲವೊ ಎಂದು

ನೋಡಿಕೊಂಡು ಮುನ್ನಡೆಯುತ್ತಿದ್ದಳು. ಅವನು ಕೂತಿದ್ದರೆ ಯಾರಿಗಾದರೂ ಎರಡು ಕಾಸುಕೊಟ್ಟು ಹೊರಿಸುವಳು. ಇಲ್ಲವಾದರೆ ಫಕ್ಕನೆ ತಂದು ಹೊರೆ ಯಿಳಿಸಿ ಶಾಂತಳಾಗಿ ಕೂತುಬಿಡುವಳು .

ಒಂದು ದಿನ 'ಮನೋರಮಾ ಥೇಟರದಲ್ಲಿ' ರಾಧೇಶ್ಯಾಮನ ಹೊಸ ದೊಂದು ನಾಟಕವನ್ನು ಹಾಕಿದ್ದರು. ಎರಡುದಿನ ಮೊದಲೇ ಜನರು ತಮ್ಮ ಸ್ಥಳಗಳನ್ನು 'ರಿಝರ್ವ' ಮಾಡಿಸಿಕೊಳ್ಳುತ್ತಿದ್ದರು ರಾತ್ರಿಯ ನುಗ್ಗಾಟದಲ್ಲಿ ಒಂದಕ್ಕೆರಡು ಕೊಟ್ಟರೂ ಟಿಕೇಟು ಸಿಗುವುದು ಸಂಶಯ. ಆದ್ದರಿಂದ ಹಗಲಿನಲ್ಲೆ 'ರಿಝರ್ವ' ಮಾಡಿಸಬೇಕು ಆದರೆ ಪೋಲೀಸರು! ಹುಂ, ನನ್ನನ್ನು ಹಿಡಿಯಬೇಕೆಂದಿದ್ದರೆ ರಾತ್ರಿಗೆ ಹಿಡಿಯಲಿಕ್ಕಾಗುವದಿಲ್ಲವೆ? ಚೆಹರೆಯನ್ನು ಬದಲಿಸಲು ಪಗಡಿಯೊಂದೇ ಸಾಕು. ಹೀಗೆ ಮನಸ್ಸಿನಲ್ಲಿ ಧೈರ್ಯತಂದು ಕೊಂಡು ಹತ್ತುಗಂಟೆಗೆ ಮನೆಯಿಂದ ಹೊರಬಿದ್ದನು ಮುದುಕಿ ಕೇಳಿದಳು— ಎಲ್ಲಿಗೆ ಮಗೂ. ರಮಾನಾಥ-ಎಲ್ಲೂ ಇಲ್ಲವ್ವಾ, ಈಗ ಬಂದೆ

ರಸ್ತೆಯ ಬಳಿ ಬಂದಾಗ ರಮಾನಾಥನ ಸಾಹಸವು ಹಿಮದಂತೆ ಕರಗ ತೊಡಗಿತು. ಹೆಜ್ಜೆ ಹೆಜ್ಜೆಗೂ ಎಲ್ಲ ಪೋಲೀಸಕಾನ್‌ಸ್ಟೇಬಲನು ಬರುತ್ತಿರುವನೊ ಎಂದೆಣಿಸುವನು ತಲೆತಗ್ಗಿಸಿಕೊಂಡು ನಡೆದನು ಸಹಸಾ ಗುಪ್ತಪೋಲೀಸರು ವೇಷ ಬದಲಿಸಿ ತಿರುಗುವರೆಂಬದು ಅವನ ಮನಸ್ಸಿಗೆ ಹೊಳೆಯಿತು. ಯಾರೊ ಒಬ್ಬನು ಅವನ ಹತ್ತಿರದಿಂದಲೇ ಹೋಗುತ್ತಿದ್ದನು. ಇವನೇ ಏಕೆ ಆಗಿರ ಬಾರದು? ಹೋ, ನನ್ನನ್ನೇ ದಿಟ್ಟಿಸುತ್ತಾ ಬರುತ್ತಿದ್ದಾನೆ ನಾನು ತಲೆ ತಗ್ಗಿಸಿ ಕೊಂಡು ಹೋಗುವುದರಿಂದ ಹೀಗೆ ನೋಡುತ್ತಿದ್ದರೆ ಚಿಂತಿಲ್ಲ ಅಲ್ಲ ಅಲ್ಲ. ಇವನೇಕೆ ಇನ್ನೂ ನನ್ನನ್ನೇ ನೋಡುತ್ತಿರುವನು? ಹಾದು, ಖಂಡಿತ ಗುಪ್ತಚರನಿರಬೇಕು ಅವನ ಕಾಟ ತಪ್ಪಿಸಲೆಂದು ರಮಾನಾಥನು ಒಂದು ಬೀಡದಂಗಡಿಯ ಮರೆ ಹೊಕ್ಕನು ಆ ಮನುಷ್ಯನು ಅಂಗಡಿಯನ್ನು ಹಾದು ಹೋದನು. ರಮಾನಾಥನ ಜೀವ ಮರಳಿ ಬಂತು.

ಈಗ ಪುನಃ ಎದೆ ಗಟ್ಟಿ ಮಾಡಿಕೊಂಡು ನಡೆದನು ರಸ್ತೆಬಿಟ್ಟು ಕಾಲ್ದಾರಿಯನ್ನು ಹಿಡಿದನು ಮುಂದು ಗಡೆಯಲ್ಲಿ ಬರುತ್ತಿದ್ದ ಮೂವರು ಪೋಲೀಸರೂ ಆಗಲೇ ಇವನಂತೆ ಕಾಲು ದಾರಿಗೆ ಬಂದರು ರಮಾನಾಥನ ಎದೆ ಧಕ್‌ಧಕ್ ಎನುತ್ತಿತ್ತು. ಮೋಟರುಗಳ ದೆಸೆಯಿಂದ ಇನ್ನೊಮ್ಮೆ ರಸ್ತೆಗೆ

ಕಾಲಿಡುವಂತೆಯೂ ಇಲ್ಲ ಜಾರಿಕೊಳ್ಳಲಿಕ್ಕೆ ಒಂದು ಗಲ್ಲಿ ಸಹ ಇಲ್ಲ. ಈಗ ಎಲ್ಲರೂ ಹತ್ತಿರವೇ ಬಂದರು ಇದೇನು ನನ್ನ ಕಡೆಯೇ ನೋಡುತ್ತಿದ್ದಾರೆ? ಈ ಪಗಡಿ ಸುಮ್ಮನೆ ಕಟ್ಟಿಕೊಂಡೆ. ಕಟ್ಟಿದ್ದೂ ಸರಿಯಾಗಿ ದೆಯೆ? ಶಿಖರದ ಹಾಗೆ ಎದ್ದು ನಿಂತಿದೆ. ತಂತಮ್ಮೊಳಗೆ ಆಡಿಕೊಳ್ಳುತ್ತಿದ್ದಾರೆ. ಪ್ರಾಯಃ ನನ್ನ ರೂಪವನ್ನು ಜಾನಿಸುತ್ತಿರ ಬಹುದು. ಇನ್ನು ಉಳಿಗಾಲವಿಲ್ಲ ಮನೆಯವರಿಗೆ ಈ ಸಮಾಚಾರ ತಿಳಿದರೆ ಎಷ್ಟು ದುಃಖಿಸುವರೊ? ಜಾಲಪಳು ಅತ್ತು ಅತ್ತು ಪ್ರಾಣ ತೆಗೆದುಕೊಂಡಾಳು ಐದು ವರ್ಷಕ್ಕಿಂತ ಕಡಿಮೆ ಸಜೆ ಸಿಗಲಿಕ್ಕಿಲ್ಲ. ಜೀವನವು ಮುಗಿದಂತೆಯೆ ಸರಿ

ಈ ಕಲ್ಪನೆಯ ವೆಸೆಯಿಂದ ಅವನ ಮುಖ ಮತ್ತು ಕಣ್ಣುಗಳು ಏನೋ ವಿಕೃತ ವಾದುವು. ಅವರು ತೀರ ಸಮೀಪಿಸಿದಾಗ ಇವನು ಅವರ ಕಣ್ಣು ತಪ್ಪಿಸಿಕೊಳ್ಳಲು ಅತ್ತಿತ್ತ ಗಾಬರಿಯಿಂದ ನೋಡುವಾಗ ಸಾಮಾನ್ಯ ಜನರಿಗೂ ಸಂಶಯ ಹುಟ್ಟಬೇಕಿತ್ತು ಇನ್ನು ಅಭ್ಯಸ್ತವಾದ ಪೋಲೀಸರನ್ನು ಕೇಳಬೇಕೆ? ಅವರಲೊಬ್ಬನೆಂದನು--ಏಯ್, ಪಗಡಿ, ಸ್ವಲ್ಪ ಇಲ್ಲಿ ಬಾ. ನಿನ್ನ ಹೆಸರೇನು?

ರಮಾನಾಥನು ಪ್ರತಿಭಟಿಸುವ ತೆರದಲ್ಲಿ ಎದುರ್ನುಡಿದನು—ಹೆಸರು ಕೇಳಿ ಏನು ಮಾಡುವಿ? ನಾವೇನೂ ಕಳ್ಳರಲ್ಲ.

"ಅಲ್ಲ ಕಳ್ಳನಲ್ಲ ನೀನು ರಾಜನೆಂದೇ ಮಾಡುವ. ಹೆಸರು ಹೇಳಲ್ಲ?"

'ಹೀರಾಲಾಲ''

"ಮನೆ ಎಲ್ಲಿ?'

"ಮನೆ!"

"ಹಾಂ. ಹಾಂ, ಮನೆ ಎಲ್ಲಿ?"

"ಶಹಾಜಹಾಂಪುರ"

"ಯಾವ ಮೊಹಲ್ಲಾ"

ರಮಾನಾಥನು ಶಹಾಜಹಾಂ ಪುರಕ್ಕೆ ಹೋಗಿರಲಿಲ್ಲ ಯಾವುದಾದರೂ ಕಲ್ಪಿತ ಮೊಹಲ್ಲದ ಹೆಸರು ಅವನಿಗೆ ಥಟ್ಟನೆ ನೆನಪಾಗಲಿಲ್ಲ ದುಸ್ಸಾಹಸ ದಿಂದ ಹೇಳಿದನು—

ಏನು ನನ್ನ ಹುಲಿಯಾ ತಗೊಳ್ಳುತ್ತಿದ್ದೀರಾ?

ಕಾನಸ್ಟೇಬಲನೆಂದನು—ನಿನ್ನ ಹುಲಿಯಾ ಮೊದಲೆ ಬರಕೊಂಡಿದ್ದೇವೆ. ಸುಳ್ಳು ಹೆಸರು ಹೇಳಿದಿ. ಊರಿನ ಹೆಸರೂ ಸುಳ್ಳು ಕೊಟ್ಟೆ. ತಿಂಗಳುಗಟ್ಟಲೆ ಯಿಂದ ನಿನ್ನನ್ನು ಹುಡುಕುತ್ತಿದ್ದೇವೆ. ಇವೊತ್ತು ಹೇಗೋ ಸಿಕ್ಕಿದಿ, ನಡಿ ಠಾಣೆಗೆ.

ಹೀಗೆ ಹೇಳಿ ಅವನು ರಮಾನಾಥನ ಕೈ ಹಿಡಿದನು. ರಮಾನಾಥನು ಕೈ ಕೊಸರಿಸಿಕೊಳ್ಳಲು ಯತ್ನಿಸುತ್ತಾ ಹೇಳಿದನು—ವಾರಂಟಿದೆ. ಏನು ನನ್ನನ್ನು ಬರೇ ಹಳ್ಳಿಯ ಮಾಗನೆಂದೆಣಿಸಿದಿರಾ-

'ಠಾಣೆಯಲ್ಲೇ ತೋರಿಸುತ್ತೇವೆ. ನಡಿ'

ಕೋತಿಯ ಆಟಕ್ಕಿಂತಲೂ ಹೆಚ್ಚು ಮನೋರಂಜಕವಾದ ಈ ಘಟನೆ ಯನ್ನು ನೋಡಲು ನೂರಾರು ಮಂದಿ ಸೇರಿದರು ದೇವೀದೀನನು ದೂರದಲ್ಲಿ ಬರುತ್ತಿದ್ದಾಗ ಅವನಿಗೆ ಈ ಗುಂಪು ನೋಡಲು ದೊರೆಯಿತು ಅವನೂ ಕುತೂಹಲದಿಂದ ಹತ್ತಿರ ಬಂದು ನೋಡುವಾಗ, ಏನು ನೋಡುವುದು ? ರಮಾನಾಥನು ಪೋಲೀಸರ ಕೈಯಲ್ಲಿದ್ದನು. ಮುಂದೆ ಬಂದು ಹೇಳಿದನು— ಹೇಂ ಹೇಂ, ಇದೇನು ಜಮಾದಾರರೆ, ಇವರು ನಮ್ಮ ಅತಿಥಿಗಳು. ಇವರನ್ನೆಲ್ಲಿ ಒಯ್ಯುತ್ತಿದ್ದೀರಿ ?

ಮೂವರೂ ದೇವೀದೀನನಿಗೆ ಪರಿಚಿತರಾದ್ದರಿಂದ ನಿಂತರು. ಒಬ್ಬ ನೆಂದನು- ನಿನ್ನ ಅತಿಥಿಯೆ ? ಎಂದಿನಿಂದ ?

'ನಾಲ್ಕು ತಿಂಗಳಿಗೆ ಸ್ವಲ್ಪ ಕಡಿಮೆಯಾದೀತು. ಪ್ರಯಾಗದಲ್ಲಿ ಸಿಕ್ಕಿದ್ದರು ಅಲ್ಲಿಯವರೇ. ನನ್ನ ಜತೆಗೇ ಬಂದಿದ್ದರು.'

'ಇವರ ಹೆಸರೇನು?'

'ಇವರು ಹೇಳಲಿಲ್ಲವೆ?'

ಪೋಲೀಸರಿಗೆ ಸಂದೇಹ ದೃಢವಾಯಿತು. ಒಬ್ಬನೆಂದನು—ನೀನೂ ಇವನೊಡನೆ ಸೇರಿರುವಿಯೆಂದು ತೋರುತ್ತದಲ್ಲವೆ? ಅದೇ ಹೆಸರು ಹೇಳು ವುದಿಲ್ಲ.

ದೇವೀದೀನನು ಆಧಾರಹೀನ ಸಾಹಸದ ಭಾವದಿಂದ ಹೇಳಿದನು—ಏ ಪಾಂಡೇ, ನಿನ್ನ ಆಟ ಎಲ್ಲ ನನ್ನ ಹತ್ತಿರ ಬೇಡ. ತಿಳಿಯಿತೆ?

ಆಗ ಇನ್ನೊಬ್ಬನೆಂದನು—ಇವನ ಹೆಸರು ಹೇಳಬಹುದಲ್ಲವೆ?

'ನಾವು ರಮಾನಾಥನೆಂದು ಕರೆಯುತ್ತೇವೆ. ಇವನ ನಿಜವಾದ ಹೆಸರು ಇದೆಯೋ? ಅಥವಾ ಇನ್ನೊಂದೋ ನಮಗರಿಯದು.'

ಪಾಂಡೇ ಹೇಳಿದನು—ಪಂಡಿತಸ್ವಾಮಿಗಳೇ, ಈಗ ಹೇಳಿ ನಿಮ್ಮ ಹೆಸರು ಯಾವುದು? ರಮಾನಾಥನೋ, ಹೀರಾಲಾಲನೋ? ಅಥವಾ ಎರಡೂ ಇದೆಯೇ? ಒಂದು ಮನೆಯ ಹೆಸರು, ಇನ್ನೊಂದು ಅತ್ತೆಯ ಮನೆಯದು, ಅಲ್ಲವೆ?

ರಮಾನಾಥನಿಗೆ ಈ ಜನಜಂಗುಳಿಯ ಕಣ್ಣೆದುರು ಇರುವುದಕ್ಕಿಂತ, ಜೈಲು-ಯಾತನೆಯನ್ನನುಭವಿಸುವುದು ಹಿತವಾಗಿ ಕಂಡಿತು ಅವನು ಮಾತಾಡದೆ ಪೋಲೀಸರ ಜತೆಯಲ್ಲಿ ಹೊರಟನು. ಪೋಲೀಸ್ ಸ್ಟೇಶನ್ ಸಮೀಪವಾದಂತೆ ದರ್ಶಕರ ಗುಂಪು ಕಿರಿದಾಯಿತು. ರಮಾನಾಥನೊಮ್ಮೆ ಹೊರಳಿ ನೋಡಿದನು. ದೇವೀದೀನನಲ್ಲಿರಲಿಲ್ಲ. ಅವನ ಬಾಯಿಯಿಂದ ಬಿಸಿಯುಸಿರು ಹೊಮ್ಮಿತು. ಸರಿ, ಆಪತ್ತಿನಲ್ಲಿ ಆಧಾರವಾಗಬಹುದಾಗಿದ್ದುದೂ ದೂರವಾಯಿತೆ ?

## ೩೧

ಪೋಲೀಸ್-ಸ್ಟೇಶನ್ನಿನಲ್ಲಿ ಒಂದು ದೊಡ್ಡ ಮೇಜಿನ ಮುಂದೆ ನಾಲ್ಕು ಮಂದಿ ಕುಳಿತಿದ್ದರು ಒಬ್ಬರು ದರೋಗರು, ಇನ್ನೊಬ್ಬರು ಅವರ ಸಹಾಯಕರು. ಇನ್ನಿಬ್ಬರು, ಇನ್ಸ್ಪೆಕ್ಟರು ಮತ್ತು ಡಿಪ್ಟಿ ಸುಪರಿಂಟೆಂಡೆಂಟರು.

ಡಿಪ್ಟಿಯವರು ಸಿಗರೇಟನ್ನೆಳೆದು ಹೇಳಿದರು— ಹೊರಗಿನ ಸಾಕ್ಷಿಗಳಿಂದ ಉಪಯೋಗವಿಲ್ಲ ಇವರೊಳಗೆ ಯಾರಾದರೂ 'ಎಪ್ರೂವರ್' ಆಗಬೇಕಾಗಿದೆ. ಬೇರಾವ 'ಆಲ್ಟರ್ನೇಟಿವ್ವೂ' ಕಾಣುವುದಿಲ್ಲ.

ಇನ್ಸ್ಪೆಕ್ಟರು ದರೋಗರ ಕಡೆಗೆ ನೋಡಿ ಎಂದರು— ನಮ್ಮಿಂದಾಗುವ ಯಾವ ಕೆಲಸವನ್ನೂ ನಾವು ಮಾಡದೆ ಬಿಡಲಿಲ್ಲ ಎಲ್ಲಾ ತರದ ಆಸೆ ತೋರಿಸಿಯಾಯಿತು. ಹೊರಗಿನವರನ್ನೂ ಪರೀಕ್ಷಿಸಿದೆವು ಎಲ್ಲರೂ ಕಿವಿ ಮುಚ್ಚಿಕೊಳ್ಳುವವರೇ.

ಡಿಪ್ಟಿ– ಆ ಮಾರ್ವಾಡಿಯನ್ನು ಪುನಃ ಗದರಿಸಿ ನೋಡಬೇಕು. ಅವನ ತಂದೆಯನ್ನು ಕರೆಯಿಸಿ ಹೆದರಿಸಿ ನೋಡಿ.

ಇನ ಸ್ಪೆಕ್ಟರ್—ಪ್ರಮಾಣವಾಗಿ ಹೇಳುತ್ತೇನೆ ಇವೊತ್ತು ಬೆಳಗಿನಿಂದ ನಾವು ಅವನ್ನೇ ಮಾಡುತ್ತಿದ್ದೇವೆ ಆದರೆ ಮಗ ಮಾತ, ಬಾಯಿ ಬಿಡಲೊಲ್ಲ.

ಕೊನೆಗೆ ಡಿಪ್ಟಿ ಎಂದರು—ಸರಿ ಮೊಕದ್ದಮೆ ನಡೆಯಲಾರದು. ವ್ಯರ್ಥ ಕೆಟ್ಟ ಹೆಸರು ಬಂದಂತಾಯಿತು.

ಇನ್ಸ್ಪೆಕ್ಟರ್— ಇನ್ನು ಒಂದು ತಿಂಗಳಿನ ಅವಕಾಶ ಕೊಟ್ಟರೆ ಎಲ್ಲ ಸರಿಯಾದೀತೆಂದು ನಾನೆಣಿಸುವೆ

ಹಾಗೆಯೇ ನಿಶ್ಚಯಿಸಿ ದರೋಗನನ್ನು ಬಿಟ್ಟು ಉಳಿದವರು ಹೊರಟು ಹೋದರು. ದರೋಗನು ಹುಕ್ಕಕ್ಕೆ ಹೇಳಿಕಳುಹಿದನು ಅಷ್ಟರಲ್ಲಿ ಪೊಲೀಸನೊಬ್ಬನು ಬಂದು ಹೇಳಿದನು—ದರೋಗಾಜೀ, ಒಬ್ಬ ಅಪರಾಧಿಯನ್ನು ಹಿಡಿದು ತಂದಿರುವೆ. ಸ್ವಲ್ಪ ಬೆದರಿಸಿದರೆ ಎಲ್ಲ ಬಾಯಿ ಬಿಡುತ್ತಾನೆ ದೇವೀದೀನನ ಮನೆಯಲ್ಲಿದ್ದನಂತೆ

'ಯಾರು ಆ ದೇವೀದೀನನೆ? ಎರಡು ಮಕ್ಕಳು..........'

'ಹಾಂ, ಹಾಂ, ಅವನೇ.'

ರಮಾನಾಥನನ್ನು ದರೋಗನ ಮುಂದೆ ಹಾಜರು ಮಾಡಿದರು. ದರೋಗನು ಅವನನ್ನು ನೆತ್ತಿಯಿಂದ ಕಾಲ್ತನಕ ದಿಟ್ಟಿಸಿ ಎಂದನು— ಒಳ್ಳೆಯದು. ಅಲ್ಲಹಾಬಾದಿನ ರಮಾನಾಥನೆಂದರೆ ಇವನೆಯೋ? ಒಳ್ಳೆಯ ಸಮಯದಲ್ಲಿ ಸಿಕ್ಕಿದಿ. ಆರು ತಿಂಗಳಿಂದ ಹುಡುಕಿ ಹುಡುಕಿ ಬೇಸತ್ತೆವು. ಇಲ್ಲಿಗೆ ಯಾವಾಗ ಬಂದೆ?

ಕಾನ್ಸ್ಟೇಬಲನೆಂದನು— ಸತ್ಯದ ಸಂಗತಿ ಹೇಳಿದರೆ ನಿನಗೇನೂ ಆಗಲಾರದು

ರಮಾನಾಥನು ಪ್ರಸನ್ನಚಿತ್ತನೆಂದು ತೋರಿಸಿಕೊಳ್ಳಲು ಯತ್ನಿಸುತ್ತ ಎಂದನು—ಈಗಂತೂ ನಿಮ್ಮ ಕೈಯೊಳಗಿರುವೆನು ಹೇಗೆ ಬೇಕೋ ಹಾಗೆ ಮಾಡಿ. ನನ್ನ ದಿಟ್ಟತನವೆನ್ನಿ ಅಥವಾ ದುರದೃಷ್ಟವೆನ್ನಿ ಮುನ್ಸಿಪಾಲಿಟಿಯ ನಾಲ್ನೂರು ರೂಪಾಯಿಗಳಿಗೆ ಕೈಕೊಟ್ಟು ಮನೆಗೆ ತಿಳಿಸಿದ್ದರೆ ಅದೊಂದು ದೊಡ್ಡ ವಿಷಯವಲ್ಲ. ಆದರೆ ನಾಚುಗೆ ಬಿಡಲಿಲ್ಲ. ಹಾಗಾಗಿ ಓಡಿ ಬಂದೆ.

ದರೋಗ—ಹೂಂ. ವಿಷಯ ಸ್ವಲ್ಪ ಕಠಿನವಿದೆ. ಏನು ಕುಡಿಯುವ ಅಭ್ಯಾಸವಿತ್ತೆ ?

ರಮಾ—ಶರಾಬು ಮುಟ್ಟಿಲ್ಲವೆಂದು ಬೇಕಾದರೆ ಪ್ರಮಾಣ ತಕ್ಕೊಳ್ಳಿ.

ದರೋಗ-ಪ್ರೀತಿಯ ಬಾಜಾರದಲ್ಲಿ ಕೊಳ್ಳೆ ಹೋದಿರೆಂತ ಕಾಣುತ್ತದೆ!

ರಮಾ—ನಮ್ಮಂತಹ ಅರೆಹೊಟ್ಟೆಯವರನ್ನಲ್ಲಿ ಕೇಳುವರಾರು?

ದರೋಗ—ಹಾಗಾದರೇನು,ಜೂಗಾರಿ ಯಾಡಿದಿಯಾ? ಇಲ್ಲ, ಹೆಂಡತಿಗೆ ಆಭರಣ ಮಾಡಿಸಿದಿಯಾ?

ರಮಾನಾಥನ ಕತ್ತು ನಾಚಿಕೆಯಿಂದ ಬಗ್ಗಿತು..

ದರೋಗ—ಸರಿ, ಇಲ್ಲಿ ನಿನಗೆ ಒಳ್ಳೆ ಗಟ್ಟಿ ಆಭರಣ ಕೊಡಿಸುವ.

ಅಷ್ಟರಲ್ಲಿ ದೇವೀದೀನನು ಬಂದು ದರೋಗರ ಮುಂದೆ ನಿಂತನು ದರೋಗನು ಕಠೋರ ಸ್ವರದಿಂದೆಂದನು—ಏತಕ್ಕೆ ಬಂದೆಯೋ ಇಲ್ಲಿ?

ದೇವಿ—ಹುಜೂರರಿಗೆ ಸಲಾಂ ಮಾಡಲು ಬಂದೆ ಈ ಬಡವನ ಮೇಲೆ ಸ್ವಲ್ಪ ದಯದೋರಿ ಪ್ರಭೋ. ಪಾಪ, ಹಸುವಿನಂತಹ ಮನುಷ್ಯ.

ಹೀಗೆಂದವನೇ ಟೊಂಕದಿಂದ ಐದು ಗಿನಿಗಳನ್ನು ತೆಗೆದು ಮೇಜಿನ ಮೇಲಿಟ್ಟನು.

ದರೋಗನು ಬೆಚ್ಚಿಬಿದ್ದು ಕೇಳಿದನು—ಇದೇನು? ಏತಕ್ಕೆ?

ದೇವಿ—ಏನೂ ಇಲ್ಲ, ಹುಜೂರರ ಎಲೆಯಡಿಕೆಗೆ ಅಷ್ಟೆ.

ದರೋಗ—ಲಂಚವಲ್ಲವೆ? ಬೇಕಾದರೆ ಇದೇ ತಪ್ಪಿಗೆ ಜೈಲಿಗೆ ಕಳಿಸಲೆ?

ದೇವಿ—ಕಳಿಸಿರಿ ಹುಜೂರ್, ಮನೆಯಾಕೆಗೆ ಕಟ್ಟಗೆ-ಬಟ್ಟೆಯ ಚಿಂತೆ ಯಾದರೂ ತೊಲಗೀತು. ಜೈಲಿನೊಳಗಿಂದಲೇ ನಿಮ್ಮನ್ನು ಹರಸುವೆ.

ದರೋಗ—ಇವನನ್ನು ಬಿಡಬೇಕಾದರೆ ಐವತ್ತು ಗಿನಿ ತಂದು ಮುಂದಿಡು. ಇವನನ್ನು ಹಿಡಿವರೆ ಐನೂರು ರೂಪಾಯಿಗಳ ಇನಾಮಿದೆ ಗೊತ್ತೆ.

ದೇವಿ—ಬಡವ ಸ್ವಾಮಿ. ಇದರಿಂದಲೇ ಸಂತೋಷ ಮಾಡಿ ಕೊಂಡು........

ದರೋಗ-ಯಾರಲ್ಲಿ? ಈ ಮುದಿಯನನ್ನು ಹೊರಕ್ಕೆ ದಬ್ಬೋ.

ದೇವಿದೀನನು ಆವೇಶದಿಂದ ನಡುಗುತ್ತಿದ್ದನು. ಜಾಡುಕಟ್ಟಿಕೊಂಡು ಹೊರಗೆ ಬಂದನು. ಒಬ್ಬ ಕಾನ್‌ಸ್ಟೇಬಲನ ಹತ್ತಿರ ಏನೋ ಹೇಳಿ ಹಾರಿ ದಂತೆ ರಸ್ತೆಯನ್ನು ಸೇರಿದನು. ಆದರೆ ಒಂದು ಕ್ಷಣದಲ್ಲಿ ಮರಳಿ ಬಂದು ಹೇಳಿದನು—ಹುಜೂರ್, ಎರಡು ತಾಸಿನ ಪುರಸೊತ್ತು ಕೊಡುವಿರಾ?

ರಮಾನಾಥನು ಅವನ ಮುಖವನ್ನು ಕಂಡು ಅತ್ತು ಬಿಟ್ಟನು–ತಂದೆ, ನನಗಾಗಿ ವ್ಯರ್ಥ ಶ್ರಮವೇಕೆ? ನನ್ನ ಸ್ವಂತ ತಂದೆಯಿದ್ದರೂ ಇದಕ್ಕಿಂತ ಹೆಚ್ಚು ಏನು ಮಾಡುತ್ತಿದ್ದನು?

ದೇವಿ:—ಎಂತಹ ಮಾತನ್ನಾಡುತ್ತಿರುವಿಯಾ? ದೇವೀದೀನನು ಹಣಕ್ಕೆ ಹಿಂಜರಿವವನಲ್ಲ ಮನೆ ಮಾರಿದರೆ ನಿಂತ ಕಾಲಲ್ಲಿ ಹತ್ತು ಸಾವಿರ ರೂಪಾಯಿ ಬಂದೀತು ದರೋಗಜೀ, ಇವನನ್ನು ಈಗಲೇ ಬಂಧಿಸಬೇಡಿ. ನೀವು ಹೇಳಿದಷ್ಟನ್ನು ಇನ್ನು ಸ್ವಲ್ಪವೇ ಹೊತ್ತಿನಲ್ಲಿ ತಂದು ಕೊಡುವೆ.

ದೇವೀದೀನನು ಹೋದ ಸ್ವಲ್ಪ ಹೊತ್ತಿನಲ್ಲಿ ದರೋಗನಿಗೆ ಥಕ್ಕನೆ ಒಂದು ಯೋಚನೆ ಹೊಳೆಯಿತು. ರಮಾನಾಥನನ್ನು ನೋಡಿ ಎಂದರು—ನಾನು ಹೇಳಿದ ಹಾಗೆ ಮಾಡಿದರೆ ದೇವೀದೀನನ ಹಣವೂ ಉಳಿಯುವುದು, ನಿಮಗೂ ಕಲಂಕ ತಟ್ಟದು

"ಅಂತಹ ಉಪಾಯವಿರಬಹುದೆಂದು ನಾನೆಣಿಸುವದಿಲ್ಲ"

"ಆದರ ಗೋಜು ನಿಮಗೇಕೆ? ನೀವು ಒಂದು ಮೊಕದ್ದಮೆಯಲ್ಲಿ ಸಾಕ್ಷಿ ಹೇಳಿದರಾಯಿತು ಅಷ್ಟೆ."

"ಸುಳ್ಳು ಸಾಕ್ಷಿಯೆ.?"

"ಅಲ್ಲ, ಸಂಪೂರ್ಣ ಸತ್ಯ. ಮುನಿಸಿಪಾಲಿಟಿಯ ದವಡೆಯಿಂದ ತಪ್ಪಿಸಿಕೊಳ್ಳುವುದೂ ಮಾತ್ರವಲ್ಲ ಸರಕಾರದ ಪ್ರೀತಿಗೂ ಪಾತ್ರರಾಗುವಿರಿ. ಲಾಭ-ನಷ್ಟ ನೀವೇ ಯೋಚಿಸಿ ನೋಡಿರಿ. ನನ್ನದೇನೂ ಒತ್ತಾಯವಿಲ್ಲ"

ದರೋಗರು ದರೋಡೆಯ ಸಮಾಚಾರವನ್ನು ತಿಳುಹಿದರು. ರಮಾನಾಥನು ಸಂಶಯ ಭಾವದಿಂದ ಹೇಳಿದನು—ನಿಮ್ಮ ಪಕ್ಷಕ್ಕೆ ಸೇರಿ ನಾನು ಕಳ್ಳರವನೆಂದು ಹೇಳಬೇಕೆಂದಲ್ಲವೆ ನಿಮ್ಮ ಆಶಯ ? ಇದು ಸುಳ್ಳು ಸಾಕ್ಷಿಯಲ್ಲವೆ?

"ಅದು ಹೇಗೆ? ಕಳ್ಳರಿಗೆ ಹೆದರಿ ಯಾರೂ ಸಾಕ್ಷಿಗೆ ಒಪ್ಪುವುದಿಲ್ಲ. ಅಷ್ಟೇ ಹೊರತಾಗಿ ಅಪಾದಿತರೆಲ್ಲ ಕೊಲೆ ಪಾತಕಿಗಳೇ. ಅದರಲ್ಲಿಯೂ ಒಂದು ಮಾತು ನಿಮ್ಮ ಜೀವನವು ರೂಪುಗೊಳ್ಳುವುದರಲ್ಲಿರುವಾಗ ಒಂದು ಸ್ವಲ್ಪ ಸುಳ್ಳು ಹೇಳುವುದು ಅದರಿಂದಿರು ದೊಡ್ಡ ಸಂಗತಿಯಲ್ಲ. ಚೆನ್ನಾಗಿ ಯೋಚಿಸಿ ನೋಡಿ. ಸಂಜೆಯ ತನಕ ಸಮಯವಿದೆ."

"ನನ್ನ ಸಾಕ್ಷಿಯಿಂದ ನಿರಪರಾಧಿಗಳಿಗೆ ದಂಡನೆಯಾಗುವುದೋ ಎಂದು ನನಗೆ ಹೆದರಿಕೆ."

"ನನ್ನನ್ನು ನಂಬುವುದಾದರೆ ಹಾಗೇನೂ ಆಗಲಾರದು."

"ಮತ್ತೆ ನಾಳೆ ಮುನ್ಸಿಪಾಲಿಟಿಯವರು ನನ್ನ ಕುತ್ತಿಗೆ ಹಿಳಿಯಲು ಬಂದರೆ ನಾನು ಯಾರನ್ನು ಕರೆಯಲಿ?"

'ಏನು, ಮುನ್ಸಿಪಾಲಿಟಿಯವರಿಗೆ ಕೊಬ್ಬು ಬೆಳೆದಿರುವದೆ? ಅದೆಲ್ಲಾ ಸರಕಾರವೇ ನಿಮ್ಮನ್ನು ಬಿಟ್ಟುಬಿಡುವಾಗ ಮತ್ತೆ ತಕ್ರೀರೆಲ್ಲಿಯದು?

'ನೌಕರಿ?'

'ಸರಕಾರ ನೋಡಿಕೊಳ್ಳುವುದು. ಇಂಥವರನ್ನು ಸರಕಾರವು ತಮ್ಮಿಗೆಳೆಯರನ್ನು ಮಾಡಿಕೊಳ್ಳುವದು.'

ಕೂಡಲೆ ಮೋಟಾರಿನ ಮೇಲೆ ರಮಾನಾಥನನ್ನು ಕುಳ್ಳಿರಿಸಿಕೊಂಡೇ ಡಿಪ್ಟಿಸಾಹೇಬರಲ್ಲಿಗೆ ದರೋಗರ ಸವಾರಿ ಹೋಯಿತು. ಅಲ್ಲಿ ಡಿಪ್ಟಿಯವರ ಮುಂದೆ ಏಕಾಂತದಲ್ಲಿ ತನ್ನ ಜಾಣ್ಮೆಯನ್ನೊಂದಷ್ಟು ಹೊಗಳಿದುದಾಯಿತು. ಡಿಪ್ಟಿ ಎಂದನು—'ಹಾಂ. ಜನ ಚೆಂದಿಲ್ಲ ಆದರೆ ಮೊದಲು ಅಲಹಾಬಾದಿಗೆ ಟೆಲಿಫೋನಿನಿಂದ ತಿಳಿಸಬೇಕು' ದರೋಗನು ಮೊದಲು ಅಲಹಾಬಾದ ಪೋಲೀಸಸ್ಟೇಶನ್ನಿಗೆ ಫೋನ ಮಾಡಿ ಕೇಳಿದನು. ಅಲ್ಲಿಂದ 'ರಮಾನಾಥನೆಂಬ ಯಾರ ಮೇಲೂ ಇಲ್ಲಿ ಮೊಕದ್ದಮೆ ಇಲ್ಲ' ವೆಂದು ಉತ್ತರ ಬಂತು. ಆ ಮೇಲೆ ಮುನ್ಸಿಪಾಲಿಟಿ ಆಫೀಸಿಗೆ ಫೋನ ಮಾಡಿದನು.

'ನಿಮ್ಮಲ್ಲಿ ರಮಾನಾಥನೆಂಬ ಗುಮಾಸ್ತನಿದ್ದನೆ?'

'ಹೌದು, ಇದ್ದನು.'

'ಅವನು ರೂಪಾಯಿಗಳನ್ನು ಎಬ್ಬಿಸಿ ಓಡಿಹೋಗಿರುವನೆ?'

'ಓಡಿಹೋಗಿರುವುದು ಹೌದು. ರೂಪಾಯಿ ಎಬ್ಬಿಸಲಿಲ್ಲ ಏನು ಅವನು ನಿಮ್ಮಲ್ಲಿರುವನೇ?'

'ಹೌದು. ನಾವಾತನನ್ನು ಬಂಧಿಸಿದ್ದೇವೆ. ರೂಪಾಯಿ ಹೊಡೆದು ಹಾಕಿದೆನೆಂದು ಅವನೇ ಹೇಳುತ್ತಾನೆ. ಸಂಗತಿ ಏನು?'

"ಪೋಲೀಸರಿಗೆ ಕಲಿಸಿ ಕೊಡಬೇಕೆ? ಸ್ವಲ್ಪ ತಲೆ ಖರ್ಚುಮಾಡಿ."

"ಈ ವಿಷಯದಲ್ಲಿ ಬುದ್ಧಿ ಕೆಲಸ ಮಾಡುವುದೇ ಇಲ್ಲ."

“ಅಲ್ಲಿ ಮಾತ್ರವೆಂದೇನು, ಎಲ್ಲಿಯೂ ಹೀಗೆಯೆ. ಇಲ್ಲಿ ಕೇಳಿ, ರಮಾನಾಥನು ಲೆಕ್ಕಕೊಡಿಸುವದರಲ್ಲಿ ತಪ್ಪಿಹೋಗಿ ಏರಿಯ ಭಯದಿಂದಲೇ ಓಡಿರುವನು. ಹಣವೆಲ್ಲ ಸರಿಯಾಗಿದ್ದುದು ಆ ಮೇಲೆ ಕಂಡು ಬಂತು. ಈಗಲಾದರೂ ತಿಳಿಯಿತೆ?”

ಡಿಪ್ಟಿ—ಆಯಿತಲ್ಲ ಕತೆ ಹಕ್ಕಿ ಬಲೆಯಿಂದ ಹಾರಿಹೋಯಿತು

ದರೋಗ—ಅದು ಹೇಗೆ ಹುಜೂರ್, ರಮಾನಾಥನ ಹತ್ತಿರ ಈ ಮಾತು ಹೇಳುವಂತಾದು? ಅಂಥವರು ಯಾರ ಹತ್ತಿರವೂ ಅವನಿಗೆ ಮಾತಾಡಗೊಡದಿದ್ದದಾಯಿತು. ಹೊರಗಿನ ಸಮಾಚಾರವೂ ಕಿವಿಗೆ ಬೀಳಲಾಗದು. ಅವನನ್ನು ಮನೆಯಿಂದ ಯಾರಾದರೂ ಹುಡುಕಿಕೊಂಡು ಬಂದರೆ, ಅವನನ್ನು ಇಲ್ಲಿಗೆ ಬರದಂತೆ ಮಾಡಬೇಕು. ಮಾಫೀ ಪತ್ರಕ್ಕಾಗಿ ಕಮೀಶ್ನರಿಗೆ ಬರೆದಿದೆಯೆಂದು ಹೇಳಿದರೆ ಸರಿ.

ಇಲ್ಲಿ ಹೀಗೆ ಪರಾಮರ್ಶೆ ನಡೆಯುವ ಹೊತ್ತಿನಲ್ಲಿ ದೇವೀದೀನನು ಠಾಣೆಗೆ ಹಿಂದೆ ಬಂದನು. ಅಲ್ಲಿ ದರೋಗನು ಇಲ್ಲದ್ದನ್ನು ಕಂಡು ಒಬ್ಬ ಕಾನ್‌ಸ್ಟೇಬಲನ ಹತ್ತಿರ ಹೀಗೆಂದನು—ಅಬ್ಬಾ ಇವರೇ ಎರಡು ಗಂಟೆಯಲ್ಲಿ ತರುವೆನೆಂದು ಹೇಳಿದೆ ಒಂದೇ ಗಂಟೆಯಲ್ಲಿ ಹಿಡಿದುಕೊಂಡು ಬಂದೆ ಅಷ್ಟು ಹೊತ್ತು ತಡೆದುಕೊಳ್ಳುವ ತಾಳ್ಮೆಯಿಲ್ಲ ಇವನನ್ನು ಪ್ರಯಾಗರಾಜಕ್ಕೆ ಕಳಿಸಿದರೆ ತೀರಿತು ಮುದುಕಿ ಅತ್ತು ಅತ್ತು ಪ್ರಾಣ ತೆಗೆದುಕೊಳ್ಳುವಳಲ್ಲ!

ಹೀಗೆ ಹೇಳಿ ಅಲ್ಲೇ ಕುಳಿತುಬಿಟ್ಟನು. ಕಾನ್‌ಸ್ಟೇಬಲನು ಕೇಳಿದನು:—ಎಷ್ಟು ಹೊತ್ತಿಂದು ಇಲ್ಲಿ ಕೂಡುವೆ?

‘ಎಷ್ಟು ಹೊತ್ತೆಂದರೇನು? ಇನ್ನು ದರೋಗರ ಹತ್ತಿರ ಎರಡು ಸರಿಯಾದ ಮಾತನ್ನಾಡದೆ ಹೊರಡುವಂತೆಯೇ ಇಲ್ಲ ಜೈಲಿಗೆ ಕಳಿಸಿದರೂ ಸರಿಯೆ, ಚಿಂತಿಲ್ಲ. ಅಲ್ಲ, ಇವರಿಗೂ ಮಕ್ಕಳು ಮರಿಗಳಿಲ್ಲವೆ? ದೇವರಿಗೆ ಸ್ವಲ್ಪವೂ ಹೆದರುವುದಿಲ್ಲವೆ? ನೋಡುವ.’

ದೇವೀದೀನನು ಅಲ್ಲಿ ಕೂತುಕೊಂಡು ಒಂದು ತಾಸಾಗುವುದರೊಳಗಾಗಿ ಮುದುಕಿಯೂ ಬಂದುಬಿಟ್ಟಳು. ಬಾಗಿಲಲ್ಲಿ ದೇವೀದೀನನನ್ನು ಕಂಡು ಕೇಳಿದಳು. ಇಲ್ಲಿ ಏನು ಮಾಡುತ್ತಿದ್ದಿರಿ? ರಮಾ ಎಲ್ಲಿ?

'ಸುಪರಿಂಟೆಂಡೆಂಟರ ಹತ್ತಿರ ಒಯ್ದಿರುವರು. ಇನ್ನು ಸಿಗುತ್ತಾನೋ ಇಲ್ಲ ನೇರವಾಗಿ ಪ್ರಯಾಗಕ್ಕೆ ಕಳಿಸುತ್ತಾರೋ ನೋಡಬೇಕು.'

'ಎಂತಹ ಮನುಷ್ಯರಪ್ಪಾ. ಅಷ್ಟು ಕೊಟ್ಟರೆ ಬಿಡುತ್ತೇವೆಂದವರು ಇದೇನು ಕೆಲಸ ಮಾಡಿಬಿಟ್ಟರು?'

'ಎರಡು ಮಾತು ಆಡಿಯೇ ಹೋಗೋಣವೆಂದು ಕೂತಿದ್ದೇನೆ.'

'ಹಾಂ, ಎರಡು ಮಾತು ಹೇಳಿಯೇ ಬಿಡುವುದು. ಯಾರು ತನ್ನ ಮಾತಿನವನಲ್ಲವೋ ಅವನು ತಂದೆಗೆ ಹುಟ್ಟಿದವನು ಹೇಗಾದಾನು ? ಬರಲಿ, ಬರಲಿ. ನನಗೇನು ಮಾಡುವರೋ ನೋಡುವೆ '

'ಅಂಗಡಿಯಲ್ಲಿ ಯಾರಿದ್ದಾರೆ?'

''ಮುಚ್ಚಿ ಬಂದಿದ್ದೇನೆ. ಪಾಪ, ಇಷ್ಟರ ತನಕ ತಿನ್ನಲಿಲ್ಲ ಉಣ್ಣಲಿಲ್ಲ ಮಗು. ಆ ತಮಾಷೆಗೆ ಬೆಂಕಿ ಬೀಳಲಿ. ಅವರ ಟಿಕೇಟಿಗೆಂದು ಹೋಗಿಯೇ ಈ ವಿಪತ್ತು ಕೊರಳಿಗೆ ಬಿತ್ತಲ್ಲವೆ?"

ದರೋಗರ ಮೋಟರು ಬಂದಿತು. ಇನ್‌ಸ್ಪೆಕ್ಟರ್ ಸಾಹೇಬರೂ ಇದ್ದರು. ರಮಾನಾಥನು ಮೋಟರಿನಿಂದ ಇಳಿದು ಹೇಳಿದನು—ಇಲ್ಲಿ ಬಂದು ಬಹಳ ಹೊತ್ತಾಯಿತೇನು ತಂದೆ? ಬಾ, ಆ ಕೋಣೆಗೆ ಹೋಗುವ. ಅಮ್ಮಾ, ನೀನು ಯಾವಾಗ ಬಂದಿ?

ದರೋಗನು ವಿನೋದದಿಂದ ಹೇಳಿದನು—ದೇವೀದೀನ, ರೂಪಾಯಿ ಎಲ್ಲಿ?

ದೇವೀದೀನ—ತಂದಿರುವೆ. ತರಲಿಕ್ಕೆ ಹೇಳಿದ ಮೇಲೆ ನೀವು ನನ್ನ ದಾರಿ ನೋಡಬೇಕಿತ್ತು. ಇರಲಿ. ನಿಮ್ಮ ರೂಪಾಯಿ ತೆಗೆದುಕೊಳ್ಳಿ.

ದರೋಗ—ಮಣ್ಣಿನಡಿಯಿಂದ ತೆಗೆಯಬೇಕಾಯಿತಲ್ಲವೆ?

ದೇವೀದೀನ—ನಿಮ್ಮ ದಯದಿಂದ ಸಾವಿರ ರೂಪಾಯಿ ಬೇಕಾದರೂ ಮಣ್ಣಿನ ಮೇಲಿಂದಲೇ ಸಿಕ್ಕೀತು. ಅಗೆಯಬೇಕೆಂದಿಲ್ಲ. ಇನ್ಸಪೆಕ್ಟರ್ ಸಾಹೇಬರಲ್ಲವೆ? ಮೊದಲು ಇಲ್ಲೇ ಇದ್ದರು.

ಇನ್‌ಸ್ಪೆಕ್ಟರ್ ಸಾಹೇಬರು ಮೊದಲೇ ಆಫೀಸಿನೊಳಗೆ ಹೋಗಿದ್ದರು. ಇವರು ಮೂವರು ಮಾತಾಡುತ್ತಾ ಬದಿಯಲ್ಲಿದ್ದ ಕೋಣೆಯನ್ನು ಪ್ರವೇಶಿಸಿದರು.

ದರೋಗ—ಹಾಗಾದರೆ, ನಿನ್ನ ರೂಪಾಯಿಗಳನ್ನು ತಕ್ಕೊಂಡು ಹೋಗಿ ಆ ದಂಡೆಯಲ್ಲಿ ಮುಚ್ಚಿಡು ಇವನನ್ನು ಬಿಡಬಾರದೆಂದು ಆಫೀಸರರ ನಿರ್ಣಯವಾಗಿದೆ. ನಾನೇನು ಮಾಡುವಂತೆಯೂ ಇಲ್ಲ.

ಈ ಮಾತನ್ನು ಕೇಳಿ ದೇವೀದೀನನ ಹುಬ್ಬು ನಿರಿಬಿತ್ತು. ಅವನೆಂದನು:- ದರೋಗಜೀ, ಗಂಡಸರಿಗೆ ಒಂದು ಮಾತೆಂದು ನನಗೆ ಗೊತ್ತು ನಿಮ್ಮ ಹುಕುಮಿನಂತೆ ರೂಪಾಯಿ ತಂದಿರುವೆ ಒಪ್ಪಿಸಿಕೊಳ್ಳಿ ನಿಮ್ಮ ಶರ್ತವನ್ನು ಪೂರೈಸಿಕೊಡಿ. ಆಡಿದ ಮಾತಿಗೆ ತಪ್ಪುವುದು ನೀಚರ ಕೆಲಸ

ದರೋಗರಿಗೆ ಬೇರೆ ಸಮಯವಾಗಿದ್ದರೆ ಎಲ್ಲಿಲ್ಲದ ಸಿಟ್ಟು ಬರಬೇಕಿತ್ತು. ಈಗ ನಗುತ್ತ ಹೇಳಿದರು—ನನ್ನನ್ನು ನೀಚನೆಂದು ಕರೆ ದಗಾಬಾಜನೆಂದು ಕರೆ ನಾನೇನೂ ಬಿಡುವಂತಿಲ್ಲ ಇಂತಹ ಶಿಕಾರಿ ಸಿಗುವುದೇ ಅಪೂರ್ವ. ನನ್ನ ಮಾತಿಗೆ ಕದ್ದು ಬಿದ್ದು ಭಕ್ತಿಯ ಪ್ರಸಂಗವನ್ನು ಕಳೆಕೊಳ್ಳುವುದೆ?.

ದರೋಗನ ನಗು ದೇವೀದೀನನನ್ನು ಕೆರಳಿಸಿತು. 'ಹಾಗಾದರೆ ನೀವು ಹಾಗೆ ಯಾವ ಬಾಯಿಯಿಂದ ಹೇಳಿದಿರಿ?

'ಹೇಳಲಿಕ್ಕೇನೋ ಇದೇ ಬಾಯಿಯಿಂದ ಹೇಳಿದ್ದೆ. ಆದರೆ ಬಾಯಿ ಯಾವಾಗಲೂ ಒಂದೇ ನಮೂನೆ ಇರುತ್ತದೆಯೆ? ಬಯ್ಯುವ ಬಾಯಿಯಿಂದಲೇ ನಾವು ಒಬ್ಬನನ್ನು ಹೊಗಳುವುದಿಲ್ಲವೆ?'

'ಈ ಮೀಸೆ ಕತ್ತರಿಸಿ ಕೊಳ್ಳಿ!'

'ಓಹೋ, ಬಹಳ ಸಂತೋಷ ಮೀಸೆ ತೆಗೆಯಬೇಕೆಂದು ಬಹಳ ದಿನ ಗಳಿಂದ ಯೋಚಿಸುತ್ತಿದ್ದೆ. ಆದರೆ ನಾಚಿಕೆ ಅಡ್ಡ ಬರುತ್ತಿತ್ತು. ಇನ್ನೇನು ನಿನ್ನ ಮಾತಿನಿಂದ ಧೈರ್ಯವಾಯಿತು ಹಾಗೆಯೇ ಮಾಡುವೆ"

"ನಗಬೇಡಿ, ದರೋಗಜೀ. ನೀವು ನಗುವಾಗ ನನ್ನ ನೆತ್ತರು ಕುದಿಯು ವುದು ನನಗೆ ಜೈಲಾಗಲಿ; ಆದರೆ ಕೆಪ್ಟನ್ ಸಾಹೇಬರ ಹತ್ತಿರ ಹೇಳದೆ ಬಿಡ ಲಿಕ್ಕಿಲ್ಲ ನೋಡಲಿಕ್ಕೆ ಕಾಸಿನ ಮನುಷ್ಯನಂತೆ ಕಂಡರೂ ನಿಮ್ಮ ದಯೆ ಇದ್ದರೆ ಎಂತೆಂಥಾ ಆಫೀಸರರ ಹತ್ತಿರ ಮಾತಾಡುವಷ್ಟು ತಾಕತ್ತು ಈಗಲೂ ಇದೆ"

"ಅಯ್ಯೊ ನನ, ನಿಜಕ್ಕೂ ಕೆಪ್ಟನರಿಗೆ ತಿಳಿಸುವಿರಾ?"

"ನೀವು ಹೇಳಿದ ಮಾತಿನಂತೆ ನಡೆಯುವುದಿಲ್ಲವಾದರೆ ನಾವೂ ನಮ್ಮ ಖುಶಿ ಬಂದಂತೆ ಮಾಡಿಯೇ ಬಿಡುತ್ತೇವೆ. ಮೇಮ' ಸಾಹೇಬರು ಅಂಗಡಿಗೆ ದಿನಾಲೂ ಬರುತ್ತಿರುತ್ತಾರೆ"

'ಹಾಗೋ, ದೇವೀ, ಇಲ್ಲಿ ನೋಡು. 'ಹಾಗೆಲ್ಲಾ ಚೇಷ್ಟೆಗಿಳಿದರೆ ನಿನ್ನ ಮನೆಯನ್ನೇ ಕಿತ್ತು ಹಾಕಿಸುವೆ'

"ನನ್ನ ಮನೆಯನ್ನು ಅಗೆಯಿಸುವ ದಿನಕ್ಕೆ ನಿಮ್ಮ ಈ ಪಗಡಿ ಮತ್ತು ಸೇವಕರು ನಾಶವಾಗಿ ಮೂರು ದಿನ ವಾಗುವುದು. ತಿಳಿಯಿತೆ?

"ಸರಿ ಕೈಮೇಲೆ ಕೈ ಹೊಡೆ. ಆಗಲಿ ನನಗೂ ನಿನಗೂ ಎರಡು ವರಸೆ, ಆಗಲಿ.

"ಸರಕಾರ, ಪಶ್ಚಾತ್ತಾಪ ಪಡಬೇಕಾದೀತು ಹೇಳಿದ್ದೇನೆ, ಸಾರಿ ಸಾರಿ ಹೇಳದ್ದೇನೆ."

ರಮಾನಾಥನು ಇನ್ನು ತಡೆದಿರುವುದು ಒಳ್ಳೆಯದಲ್ಲವೆಂದು ಜೋರಾಗಿ ನಗುತ್ತಾ ಹೇಳಿದನು—ತಂದೆ, ದರೋಗರು ಸುಮ್ಮನೆ ನಿನ್ನನ್ನು ಕೆಣಕುತ್ತಿದ್ದಾರೆ. ನಾವೆಲ್ಲಾ ಮಾತಾಡಿಕೊಂಡಾಯಿತು. ಏನೂ ಕೊಡದೆ-ಗಿಡದೆಯೆ ನನ್ನ ಬಿಡುಗಡೆಯಾಗುವುದು, ಮಾತ್ರವಲ್ಲ ಒಳ್ಳೆಯ ನೌಕರಿಯು ಸಿಗುವುದು. ಡಿಪ್ಟಿಯವರೇ ಮಾತು ಕೊಟ್ಟಿದ್ದಾರೆ. ನಾನಿನ್ನು ಇಲ್ಲೇ ಇರಬೇಕಾಗಿ ಬಂದಿದೆ. ಒಂದು ಮೊಕದ್ದಮೆಯಲ್ಲಿ ಸಾಕ್ಷಿ ಹೇಳಿದರೆ ಸರಿ ಅಷ್ಟೆ.

ದೇವೀದೀನ—ಏನಂದೆ? ಸುಳ್ಳು ಸಾಕ್ಷಿ! ಈ ಪೋಲೀಸರ ಮಾಯಾ ಜಾಲದಲ್ಲಿ ಸಿಕ್ಕುಬಿದ್ದಿಯಾ? ನನಗೊಂದು ಲಕ್ಷ ರೂಪಾಯಿ ಕೊಡುತ್ತೇವೆಂದರೂ ನಾನು ಸಾಕ್ಷಿಗೆ ನಿಲ್ಲಲಾರೆ ಹೊರಗಿನವನಿಗೇನು ಗೊತ್ತು, ಯಾರು ಅಪರಾಧಿ, ಯಾರು ನಿರಪರಾಧಿಯೆಂದು? ಅಪರಾಧಿಗಳ ಜತೆಯಲ್ಲಿ ನಿರಪರಾಧಿಗಳಿಗೂ ಸಜೆಯಾಗುವುದು. ಹೀಗೆ ಸುಳ್ಳು ಹೇಳಿ ನೀನು ಉದ್ಧಾರವಾಗುವುದಕ್ಕಿಂತ ಎರಡು ವರ್ಷ ಸಜೆ ಅನುಭವಿಸಿ ಬರುವುದೊಳಿತು. ನಾನು ರೂಪಾಯಿಗೆ ಹೆದರಿ ಹೀಗನ್ನುತ್ತಿದ್ದೇನೆಂದು ಭಾವಿಸಬೇಡ. ಯೋಚಿಸಿ ನೋಡು.

ರಮಾನಾಥನು ಭೀರುತೆಯಿಂದ ಹೇಳಿದನು—ಚನ್ನಾಗಿ ಯೋಚಿಸಿರುವೆ ತಂದೆ, ಎಲ್ಲ ಕಾಗದಪತ್ರಗಳನ್ನು ನೋಡಿದ್ದೇನೆ. ನಿರಪರಾಧಿಗಳಾರೂ ಇದರಲ್ಲಿಲ್ಲ.

ದೇವೀದೀನನು ಉದಾಸನಾಗಿ ಎಂದನು—ಇರಬಹುದು. ಪ್ರಾಣಕ್ಕಿಂತ ಪ್ರಿಯ ವಸ್ತು ಬೇರೊಂದಿದೆಯೋ?

ಹೋಗುವಾಗ ರಮಾನಾಥನಿಗೆ ರೂಪಾಯಿ ಕೊಡಲು ಹೋದನು. ರಮಾನಾಥನು ನಿರಾಕರಿಸಿದನು. ದರೋಗನೆಂದನು—ಇವರಿನ್ನೂ ಇಲ್ಲೇ ಇರುತ್ತಾರೆ

ದೇವೀ—ಗೊತ್ತಿದೆ ಹೂಜೂರ್ ಗೊತ್ತಿದೆ ಇವರಿಗೆ ಉಪಹಾರ ಕೂಟ ಜರಗುವುದು, ಇರಲಿಕ್ಕೆ ಬಂಗಲೆ ಸಿಗುವುದು, ನೌಕರ-ಚಾಕರರು ಸಿಗುವರು, ಮೋಟಾರು ಬರುವುದು ಎಲ್ಲ ಗೊತ್ತಿದೆ ಹೊರಗಿನವರು ಯಾರೂ ಇವನ ಕೂಡೆ ಮಾತಾಡುವಂತಿಲ್ಲ ಈ ಎಲ್ಲಾ, ಆಟಗಳನ್ನು ಕಂಡಿದ್ದೇನೆ.

ರಸ್ತೆಯಲ್ಲಿ ಹೋಗುತ್ತಿದ್ದಾಗ ಜಗ್ಗೋ ಕೇಳಿದಳು—ರಮಾ ಇನ್ನು ಬರುವುದಿಲ್ಲವೆ?

ದೇವೀದೀನನೆಂದನು—ನಮ್ಮವರೇ ನಮ್ಮವರಾಗಲಿಲ್ಲ ಇನ್ನು ಬೇರೆ ಯುವಕರು ನಮ್ಮವರಾಗುವುದುಂಟೆ?

ಮುದುಕಿ ಗುಣುಗುಣು ಎನ್ನುತ್ತಾ ಅವನ ಹಿಂದೆ ನಡೆದಳು.

## ೩೨

ಅಳುವುದರಲ್ಲಿ ಎಷ್ಟು ಉಲ್ಲಾಸ, ಎಷ್ಟು ಶಾಂತಿ, ಎಷ್ಟು ಬಲ ವಿರುತ್ತದೆ! ಏಕಾಂತದಲ್ಲಿದ್ದು ನಮ್ಮ ಪ್ರಿಯಜನರ ನೆನಪಿಗಾಗಿಯೋ, ವಿಯೋಗಕ್ಕಾಗಿಯೋ, ಒಮ್ಮೆಯಾದರೂ ಗಟ್ಟಿಯಾಗಿ ಅಳದಿದ್ದರೆ, ನೂರಾರು ನಗುಗಳಿಗೆ ಸಮಾನವಾದ ಒಂದು ಸೌಭಾಗ್ಯದಿಂದ ನಾವು ವಂಚಿತರಾದೆವೆಂದು ತಿಳಿಯಬೇಕು. ನಗು ಮುಗಿದ ಬಳಿಕ ನಾವು ಬಳಲಿ ಪರಾಭೂತರಾಗುತ್ತೇವೆ. ಆದರೆ ರುದನದ ಬಳಿಕ ಒಂದು ನವೀನ ಸ್ಫೂರ್ತಿಯು, ಒಂದು ನವೀನ ಜೀವನದ, ಒಂದು ನವೀನ ಉತ್ಸಾಹದ ಅನುಭವವಾಗುವುದು. 'ಪ್ರಜಾಮಿತ್ರ' ಕಾರ್ಯಾಲಯದಿಂದ ಜಾಲಪಳಿಗೆ ಪತ್ರ ಬಂದಾಗ ಅವಳು ಅದನ್ನು ಕಂಡು ಜೆನ್ನಾಗಿ ಅತ್ತಳು. ಏನು ಯೋಚಿಸಿ ಅಳುತ್ತಿನದ್ದಳೆಂದು ಯಾರೂ ಹೇಳಿ ಬರುವಂತಿಲ್ಲ, ತಾನು ಹೂಡಿದ ಉಪಾಯಕ್ಕೆ ದೊರೆತ ಈ ಆಶಾತೀತ ಸಫಲತೆಯೇ ಅವಳ ಆನಂದೋದ್ರೇಕಕ್ಕೆ ಕಾರಣವಾಗಿರಬೇಕು. ಆರು ತಿಗಂಳ ಮೇಲೆ ಈ ಸುಖಸಂವಾದ! ಅವಳು ಇಷ್ಟು ದಿನ ಹಟವಾದಿ ಆಶೆ

ಮತ್ತು ಕಠೋರ ದುರಾಶೆಗಳ ವ್ಯೂಹದೊಳಗಿನ ಸೂತ್ರದ ಬೊಂಬೆಯಾಗಿದ್ದಳು. ಎಷ್ಟು ಬಾರಿ ಪ್ರಾಣ ಕಳಕೊಳ್ಳುವ ಯೋಚನೆಮಾಡಿದ್ದಳು! ಎಲ್ಲಾದರೂ ಹಾಗೆ ಮಾಡಿ ಬಿಡುತ್ತಿದ್ದರೆ ಅವರ ದರ್ಶನವಾಗುತ್ತಿತ್ತೆ? ಆದರೆ ಎಂತಹ ಕಲ್ಲೆದೆ ಅವರದು. ಆರುತಿಂಗಳಾದರೂ ಒಂದು ಪತ್ರವಿದೆಯೆ? ನಾನು ಅತ್ತು ಅತ್ತು ಸತ್ತುಹೋಗಿರಬಹುದೆಂದು ಎಣಿಸಿರಬಹುದಲ್ಲವೆ? ಇರಲಿ, ಇರಲಿ. ಅವರು ಹಾಗೆ ನನ್ನ ವಿಷಯ ಚಿಂತೆಪಟ್ಟುದಿದೆಯೆ? ಅಲ್ಲಿ ಏನೆನೆಣಿಸಿ ಕೂತಿದ್ದಾರೆ? ತಾನು ಸ್ವತಂತ್ರನು, ಬೇಕಾದಾಗ ಹಾಗೆ ಮಾಡಬಲ್ಲನೆಂದು ಇವರ ಎಣಿಕೆ. ಇವರ ಹಾಗೆ ನಾನೂ ಎಲ್ಲಾದರೂ ಹೇಳದೆ ಕೇಳದೆ ಹೋಗಿದ್ದರೆ ನನ್ನ ಮೇಲೆ ಕತ್ತಿ ಎತ್ತುದ್ದರು. ಹೀಗೆ ಜಾಲಪಳು ಒಂದೋದೇ ಯೋಚಿಸ ತೊಡಗಿದಳು.

ಆಗಲೆ ರಮೇಶ ಬಾಬುಗಳು ಬಂದರು. ಗೋಪಿ! ಗೋಪಿ! ಎಂದು ಕರೆದರು. ಮುನ್ನಿಯುವರು ತಮ್ಮ ಕೋಣೆಯಲ್ಲಿದ್ದು ಕೊಂಡೆಂದರು — ಯಾರದು ರಮೇಶ ಬಾಬುಗಳು! ಬನ್ನಿ, ಬನ್ನಿ ಪುನರ್ಜನ್ಮವಾಯಿತು. ನಮ್ಮ ಜಾಲಪ ಇಲ್ಲದಿದ್ದರೆ ನಾನು ಎಂದೋ ಹೊರಡಬೇಕಾಗಿತ್ತು. ನೋಡಿ ಈಗ ನಿಮಗೆ ಎಲೆಯಡಿಕೆ ತಂದು ಕೊಡುವವರೂ ಇಲ್ಲ ನಮ್ಮ ಮನೆಯ ಸ್ಥಿತಿ ಹೀಗೆ.

ರಮೇಶ ಬಾಬುಗಳು ಮುಗುಳ್ನಕ್ಕು ಹೇಳಿದರು—ನನ್ನ ವಿಷಯ ನಿಮಗೆ ಚಿಂತೆ ಬೇಡ. ಆದರೆ ನಾನಿಂದು ಎಲೆಅಡಿಕೆ ತಿನ್ನುವುದಕ್ಕಲ್ಲ ಬಂದುದು ಹೊಟ್ಟೆತುಂಬ ಮಿಠಾಯಿ ತಿನಿಸಬೇಕು (ಜಾಲಪಳನ್ನು ಕರೆದು)ಎಧು ನೊಡು ನಿನಗೊಂದು ವರ್ತಮಾನ ತಂದಿರುವೆ ಮಿಠಾಯಿ ತರಿಸಬೇಕಾದೀತು.

ಜಾಲಪಳು ಎಲೆಯಡಿಕೆಯ ಹರಿವಾಣವನ್ನು ಅವರ ಮುಂದಿಟ್ಟು ಹೇಳಿದಳು

ಹೇಳಿ, ಮೊದಲು ವರ್ತಮಾನ ಕೇಳುವ ನೀವು ಹೊಸದೆಂದು ಎಣಿಸಿದ ಸಮಾಚಾರ ಹಳತಾಗಿರಲಿಕ್ಕೆ ಸಾಕು!

"ಹಳತಾದರಲ್ಲವೆ? ರಮಾನಾಥನ ಪತ್ತೆಯಾಯಿತು. ಕಲಕತ್ತೆಯಲ್ಲಿದ್ದಾನೆ."

"ನನಗೆ ಮೊದಲೇ ಗೊತ್ತಾಗಿತ್ತು"

ಮುನ್ನಿಯವರು ಮಲಗಿದ್ದವರು ಹಾರಿ ಕುಳಿತರು. ಜ್ವರವು ಔತ್ಸುಕ್ಯದ

ಮರೆಯಲ್ಲಿ ಅಡಗಿಹೋಯಿತು ರಮೇಶಬಾಬುಗಳ ಕೈಹಿಡಿದು ಕೇಳಿದರು. ಕಲಕತ್ತೆಯಲ್ಲಿಯೆ? ಪತ್ರಬಂದಿದೆಯೆ?

ರಮೇಶ-ಪತ್ರವಲ್ಲ. ಪೋಲೀಸ ಇನ್‌ಸ್ಪೆಯರಿ ಇತ್ತು. ಅವನ ಮೇಲೆ ಯಾವ ಅಪರಾಧವೂ ಇಲ್ಲವೆಂದು ನಾನು ಹೇಳಿರುವೆ. ನಿನಗೆ ಹೇಗೆ ತಿಳಿಯಿತವ್ವಾ?

ಜಾಲಪಳು ತನ್ನ ಯೋಜನೆಯನ್ನು ವಿವರಿಸಿದಳು. 'ಪ್ರಜಾಮಿತ್ರ' ಕಾರ್ಯಾಲಯದ ಪತ್ರವನ್ನೂ, ಹಣ ಪಡೆಕೊಂಡುದಕ್ಕೆ ರಶೀದಿಯನ್ನೂ ತೋರಿಸಿದರು.

ರಮೇಶ:—ರಮಾನಾಥನದೇ, ಸಂದೇಹವಿಲ್ಲ ಅಬ್ಬಾ ನಿಮ್ಮ ಚಾಲಾಕೆ! ಚಿಂತಿಲ್ಲ ಒಳ್ಳೇ ಉಪಾಯ ಹುಡುಕಿವಿ ಯಾರಾದರೂ ಹೋಗಿಅವನನ್ನು ಹಿಡಿದು ತರಬೇಕು.

ಅಷ್ಟರಲ್ಲಿ ರತನ ಬಂದಳು ಜಾಲಪಳು ಅವಳನ್ನು ಕಂಡೊಡನೆ "ಅಕ್ಕಾ ಕಲ್ಕತ್ತೆಯಿಂದ ಪತ್ರ ಬಂದಿದೆ. ಅಲ್ಲಿಯೇ ಇದ್ದಾರೆ"

ರತನ—ನನ್ನಾಣೆ ಹಾಕಿ ಹೇಳು.

ಜಾಲಪ—ನಿನ್ನಾಣೆ ಪತ್ರನೋಡು.

ರತನ—ಹಾಗಾದರೆ ನೀನು ಈಗ ಹೊರಡು.

ಜಾಲ—ನೀನೂ ಬಾ

ರತನ—ನನಗೂ ಆಲೋಚನೆ ಇದೆ ಆದರೇನು ಮಾಡಲಿ ಹೇಳು. ನನಗಿತ್ತೀಚೆಗೆ ಈ ಮಣಿಭೂಷಣನ ಮೇಲೆ ಸಂದೇಹವೇ ಬಲವಾಗುತ್ತಿದೆ ಬ್ಯಾಂಕಿನ ರೂಪಾಯಿ ಎಲ್ಲಿ ಹೋಯಿತೆಂದರೆ, ಎಲ್ಲ ಕ್ರಿಯಾಕರ್ಮಕ್ಕೆ ಖರ್ಚಾಯಿತೆಂಬೆನ್ನುತ್ತಾನೆ ನಾನು ನಿನ್ನ ಜತೆಯಲ್ಲಿ ಕಲ್ಕತ್ತೆಗೆ ಬಂದರೆ ಇಲ್ಲಿ ನಾನು ಹಿಂತಿರುಗುವಷ್ಟು ಹೊತ್ತಿಗೆ ಏನು ಮಾಡಿಬಿಡುವನೋ ಎಂದು ಭಯವಾಗುತ್ತಿದೆ. ಗೋಪಿಯನ್ನು ಕರೆದುಕೊಂಡು ಹೋಗಿ ಬಿಡು. ರೂಪಾಯಿಯ ವಿಷಯ ನನಗಿರಲಿ.

ಕಲ್ಕತ್ತೆಗೆ ವಿಹಾರದ ಸುಸಂದರ್ಭವು ನಿರಾಯಾಸವಾಗಿ ಒದಗಿದುದನ್ನು ಕಂಡು ಗೋಪಿಗೆ ಬಹಳ ಸಂತೋಷವಾಯಿತು ವಿಶ್ವಂಭರನಿಗೆ ಮಾತ್ರ ಅದು ಸೇರಲಿಲ್ಲ. ದೇವರು ಅವನನ್ನು ಕಿರಿಯವನನ್ನಾಗಿ ಮಾಡಿ ಮೋಸ

ವಾಯಿತು ಇಲ್ಲವಾದರೆ ಈ ಗೋಪಿ ಬರೀ ಮಂಗ! ಹೋದ ಹೋದಲ್ಲಿ ಸಾಮಾನು ಕಳಕೊಂಡು ಬರುವುದು ಇವನ ಸ್ವಭಾವ ಆದರೇನು ಮಾಡಲಿ? ಸಣ್ಣವನಾಗಿಬಿಟ್ಟ.

ರಾತ್ರಿ ಒಂಬತ್ತು ಗಂಟೆಗೆ ಜಾಲಪಳು ಗೋಪಿಯನ್ನು ಕರೆದುಕೊಂಡು ಹೊರಟಳು ಸ್ಟೇಶನ್ನಿನವರೆಗೆ ರತನ ಬಂದಿದ್ದಳು. ಮೋಟರು ಹೊರಟಿತು. ಜಾಲಪಳೆಂದಳು—ಅಕ್ಕಾ, ಕಲ್ಕತ್ತಾ ಬಹಳ ದೊಡ್ಡ ಶಹರಲ್ಲವೆ? ಹೇಗೆ ಪತ್ತೆ ಹಚ್ಚುವುದೋ ದೇವರೇಬಲ್ಲ.

"ಮೊದಲು 'ಪ್ರಜಾಮಿತ್ರ'ದ ಕಾರ್ಯಾಲಯಕ್ಕೆ ಹೋಗು. ಅಲ್ಲಿ ತಿಳಿಯುವುದು. ಮತ್ತೆ ಹೇಗೂ ಗೋಪೀ ಬಾಬುಗಳಿದ್ದಾರಲ್ಲವೆ?"

"ಎಲ್ಲಿ ಇಳಕೊಳ್ಳಲಿ."

"ಧರ್ಮಶಾಲೆಯಲ್ಲಿ ಆಗಬಹುದು. ಅಥವಾ ಹೋಟಲಲ್ಲಿ. ಹಣ ಬೇಕಾದರೆ ಕೂಡಲೆ ತಾರುಮಾಡು. ಏನಾದರೂ ಮಾಡಿ ಕಳಿಸದಿರುವುದಿಲ್ಲ. ನೋಡು ರಮಾನಾಥರು ಬಂದರೆ ನನಗೆ ಈ ಮಣಿಭೂಷಣನ ಕಾಟ ತಪ್ಪುವುದೋ ಏನೋ ಎಂದೆನಿಸುತ್ತಿದೆ.

"ಹೋಟಲಿನವರು ಲುಚ್ಚರಾಗಿರುತ್ತಾರಂತೆ"

"ಹುಂ, ಸ್ವಲ್ಪ ಯಾರಾದರೂ ಕುಚೇಷ್ಟೆಗಿಳಿದರೆ ಕಾಲಿಂದೊದ್ದು ಬಿಡು. ಆ ಮೇಲೆ ಮಾತುಕತೆ. ( ಮಡಿಲಿಂದ ಬಂದು ಚೂರಿ ತೆಗೆದು ) ಇಗೊ, ಇದನ್ನಿರಿಸಿಕೊ. ಆಪತ್ಕಾಲದಲ್ಲಿ ಯಾವ ಕೆಲಸಕ್ಕೂ ಹಿಂಜರಿಯಬೇಡ. ಹೆಚ್ಚಿನವರಿಗೆ ಇದನ್ನು ತೋರಿಸಿದರೂ ಸಾಕು. ಕಾಲಿಗೆ ಬುದ್ಧಿಹೇಳುತ್ತಾರೆ. ಮತ್ತೂ ಮರ್ಯಾದೆ ಹೋಗುವ ಸಂದರ್ಭದಲ್ಲಿ ಉಪಯೋಗಿಸಿ ಬಿಡು. ಏನು ಬರುವುದಿದ್ದರೂ ಮತ್ತೆ ಬರಲಿ.

ಜಾಲಪಳು ಚೂರಿಯನ್ನು ತೆಗೆದುಕೊಂಡಳು. ರತನ ಗೋಪಿಯ ಹತ್ತಿರ ಎಂದಳು—ಜಾಗ್ರತೆಯಿಂದಿರು.

ಗೋಪಿ ಈಗ ಕೆಲವುತಿಂಗಳಿಂದ ವ್ಯಾಯಾಮ ಮಾಡುತ್ತಿದ್ದನು. ದಾರಿಯಲ್ಲಿ ನಡೆಯುವಾಗ ತನ್ನ ಬಾಹು ಮತ್ತು ಎದೆಗಳನ್ನು ನೋಡಿಕೊಳ್ಳುತ್ತಾ ಹೋಗುವನು. ನೋಡುವವರಿಗೆ ಅವನಲ್ಲೇನೂ ವ್ಯತ್ಯಾಸ ಕಾಣುವುದಿಲ್ಲವಾದರೂ ಅವನ ಸ್ವಂತದೃಷ್ಟಿಯಲ್ಲಿ ಅವನಲ್ಲಿ ಬಹಳ ಬದಲಾವಣೆ ಯಾಗಿತ್ತು.

ಅವನ ಡೌಲನ್ನು ನೋಡಿ ಜನರು ದಾರಿ ಬಿಟ್ಟು ಕೊಡುವುದಿಲ್ಲವೇಕೆಂದು ಅವನಿಗೆ ಆಶ್ಚರ್ಯವಾಗುತ್ತಿತ್ತು.

ಗಟ್ಟಿಯಾಗಿ ಹೇಳಿದನು—ನಾನಿರುವಾಗ ಹಾಗೇನೂ ಆಗಲಿಕ್ಕಿಲ್ಲ. ಸುಮ್ಮನೆ ಬಿಟ್ಟೇನೆ? ಟೊಂಕ ಮುರಿದು ಹಾಕಿ ಬಿಡುವೆ

ರತನಳೆಂದಳು—ಅದು ನನಗೆ ಗೊತ್ತು. ಎಲ್ಲಾದರೂ ಮಲಗಿ ಬಿಟ್ಟೆಯೆ

ಗೋಪಿ-ನಿದ್ದೆ ನನ್ನ ಹತ್ತಿರ ಸುಳಿಯಲಾರದು.

ಗಾಡಿ ಬಂದು ನಿಂತಿತು ಗೋಪಿಯು ಒಂದು ಡಬ್ಬಿಯೊಳಗೆ ನುಗ್ಗಿ ಸ್ಥಳಹಿಡಿದು ಬಿಟ್ಟನು. ಜಾಲಪಳು ಕಣ್ಣಲ್ಲಿ ನೀರುತುಂಬಿ ಎಂದಳು—ಅಕ್ಕಾ, ಅವರನ್ನು ಕರೆದುಕೊಂಡು ಕ್ಷೇಮದಿಂದ ಮರಳುವೆನೆಂದು ಆಶೀರ್ವಾದ ಮಾಡು.

ಈಗವಳ ದುರ್ಬಲ ಮನಸ್ಸಿಗೆ ಬೇಕಾಗಿದ್ದುದೊಂದು ಬಲವಾದ ಆಶ್ರಯ.
ಆಶೀರ್ವಾದ ಮತ್ತು ಪ್ರಾರ್ಥನೆಗಳ ಹೊರತು ಅಂತಹ ಆಶ್ರಯ ಇನ್ನಾವುದಿದೆ?

ಇಂಜಿನು ಕೂಗಿತು ಇಬ್ಬರು ಗೆಳತಿಯರೂ ಆಲಂಗಿಸಿಕೊಂಡರು. ಜಾಲಪಳು ಗಾಡಿಯಲ್ಲಿ ಕೂತಳು.

"ಹೋದವಳೇ ಪತ್ರಬರಿ."

ಜಾಲಪಳು ತಲೆಯಲ್ಲಾಡಿಸಿದಳು.

'ನನ್ನ ಅಗತ್ಯಬಿದ್ದರೆ ಕೂಡಲೆ ತಾರುಮಾಡು ಎಲ್ಲವನ್ನೂ ಬಿಟ್ಟು ಓಡಿಬರುವೆ'

ಜಾಲಪಳು ಶಿರವಲ್ಲಾಡಿಸಿದಳು.

'ದಾರಿಯಲ್ಲಿ ಅಳಬೇಡ.'

ಜಾಲಪ ನಕ್ಕಳು. ಗಾಡಿ ಹೊರಟಿತು.

## [೩೩]

ದೇವೀದೀನನ ಚಹದಂಗಡಿ ಅಂದೇ ಬಂದಾಗಿತ್ತು. ಮರುದಿನ ರಮಾನಾಥನ ಸಾಕ್ಷಿ ವಿಚಾರಣೆ ನಡೆಯಿತು. ಮೂರುದಿನವೂ ದೇವೀದೀನನಿಗೆ ಅಲ್ಲಿ ಹೋಗಿಬರುವುದೇ ಇಗಳು ಕೆಲಸ. ನಿದ್ದೆಬಾರದು. ಈ ಹೊತ್ತು ಅವನು ಬರುತ್ತಲೇ ಅಂಗಿಯನ್ನು ತೆಗೆದು; ಒಂದು ಬೀಸಣಿಗೆ ಹಿಡಿದುಕೊಂಡು

ಬೀಸಿಕೊಳ್ಳತೊಡಗಿದನು. ಫಾಲ್ಗುಣ ಮಾಸವು ಹಿಡಿದು ಸ್ವಲ್ಪಸ್ವಲ್ಪ ಸೆಕೆ ಆರಂಭವಾಗಿತ್ತೇನೋ ಹೌದು. ಆದರೆ ಬೀಸಣಿಗೆಯ ಅಗತ್ಯ ಬೀಳುವಷ್ಟು ಖಂಡಿತ ಇರಲಿಲ್ಲ. ಆಫೀಸರು ಮಂದಿ ಚಳಿಯ ಉಡಿಗೆಯನ್ನು ಬಿಟ್ಟಿರಲಿಲ್ಲ; ಆದರೂ ದೇವೀದೀನನು ಬೆವರಿಂದ ಒದ್ದೆಯಾಗಿದ್ದನು. ನಿಷ್ಕಪಟವಾದ ಮುಪ್ಪು ನಗುತ್ತಾ ಇರುತ್ತಿದ್ದ ಅವನ ಮುಖದ ಮೇಲೆ ಇಂದು ಬೇಗಾರವನ್ನು ಮಾಡಿ ಬಂದವನಂದೆ ತಿರಸ್ಕಾರದ ಕಳೆ ಮಾಡಿತ್ತು.

ಜಗ್ಗೋ ನೀರು ತಂದುಕೊಟ್ಟು ಕೇಳಿದನು—ಚಿಲಮು ತರಲಿ? ಈಗ ಮೂರು ದಿನಗಳಿಂದ ದೇವೀದೀನನಿಗೆ ಈ ತೆರನಾದ ಉಪಚಾರ ನಡೆಯುತ್ತಿತ್ತು. ಏತಕ್ಕೆಂದು ದೇವೀದಿನನಿಗೆ ಗೊತ್ತಿತ್ತು. ಮುದುಕಿಯನ್ನು ಸದಯ ನೇತ್ರಗಳಿಂದ ನೋಡಿ ಹೇಳಿದನು—

ಬೇಡ, ಬಿಡು. ಈ ಹೊತ್ತು ಸೇದುವುದಿಲ್ಲ.

ಮುದುಕಿಗೆ ನ್ಯಾಯಾಲಯದ ಸಮಾಚಾರ ತಿಳಿದುಕೊಳ್ಳಬೇಕೆಂಬ ಕುತೂಹಲವಿದ್ದರೂ, ಬಳಲಿ ಬಂದಾಗ ಕೇಳುವುದು ವಿಹಿತವಲ್ಲೆಂದು ಬಗೆದು ಹೀಗಂದಳು—ಏನಾದರೂ ಸ್ವಲ್ಪ ಫಳಾರ ಮಾಡಿರಿ ಮಧ್ಯಾಹ್ನವೂ ಉಣಲಿಲ್ಲ ಮಿಠಾಯಿ ತರಲೆ? ಇಲ್ಲಿ ತನ್ನಿ ಬೀಸಣಿಗೆ.

ದೇವೀದೀನನು ಬೀಸಣಿಗೆಯನ್ನು ಅವಳ ಕೈಗಿತ್ತನು. ಅವಳು ಬೀಸತೊಡಗಿದಳು ದೇವೀದೀನನು ಒಂದೆರಡು ಕ್ಷಣ ಕಣ್ಣು ಮುಚ್ಚಿಕೊಂಡಿದ್ದು ಆಮೇಲೆಂದನು—ರಮಾನ ಸಾಕ್ಷಿ ಇಂದಿಗೆ ಮುಗಿಯಿತು.

“ಹಾಗಾದರೆ ನಾಳೆ ಬರುವನಲ್ಲವೆ?”

“ಎಲ್ಲಿ ಬರುತ್ತಾನೆ? ಇದೇ ಹೇಳಿಕೆಯನ್ನು ಸಿವಿಲ್ ಕೋರ್ಟಿನಲ್ಲಿ ಹೇಳಬೇಕು. ಆಮೇಲೂ ಇಲ್ಲಿ ಬರಲಾರ. ಒಂದು ಒಳ್ಳೇ ಹುದ್ದೆ ಸಿಕ್ಕಿತು. ಕುದುರೆ ಮೇಲೆ ಸವಾರಿ ಮಾಡುತ್ತಿದ್ದರೆ ಸರಿ; ಆದರೂ ಇಂತಹ ಸ್ವಾರ್ಥಿಯೆಂದು ನಾನೆಣಿಸಿರಲಿಲ್ಲ ಐದಾರು ಮಂದಿಗೆ ಗಲ್ಲುಶಿಕ್ಷೆ ಯಾಗುವುದು, ಉಳಿದವರಿಗೆ ಹತ್ತು-ಹನ್ನೆರಡು ವರುಷ ಕರಿನೀರು. ಇವನೊಬ್ಬನ ಸಾಕ್ಷಿಯಿಂದಲೇ ಮೊಕ್ಕದಮೆ ಸತ್ಯವಾಯಿತು. ಯಾರು ಮಾಡಿದ್ದಾನೆ, ಯಾರು ಮಾಡಲಿಲ್ಲವೆಂಬುದರ ವಿಷಯ ಆ ಪರಮಾತ್ಮನೊಬ್ಬನಿಗೆ ಗೊತ್ತು; ಆದರೆ ಕೇಡು ಎಲ್ಲರಿಗೂ ತಗಲಿತು. ಮನೆಯಿಂದಲೂ ಸರಕಾರಿ ಹಣ ಎಬ್ಬಿಸಿಕೊಂಡು ಬಂದಿದ್ದನಲ್ಲವೆ? ನಾವು ಬಹಳ ಮೋಸಹೋದೆವು.”

"ಅವರವರ ಒಳ್ಳೆಯದು-ಕೆಟ್ಟದು ಅವರವರಿಗೆ. ಪ್ರಪಂಚವೇ ಸ್ವಾರ್ಥ ಕ್ಕೆ ಮುಳುಗಿದೆ. ಒಬ್ಬನಿಗೋಸ್ಕರ ಸಾಯುವವರನ್ನೊಬ್ಬರು ಯಾರಿದ್ದಾರೆ?"

"ಆದರೆ ತನ್ನ ಸ್ವಾರ್ಥಕ್ಕೋಸ್ಕರ ಯಾರು ಇನ್ನೊಬ್ಬರ ಕೊರಳನ್ನಿರಿ ಯುತ್ತಿನೋ ಅವನಿಗೆ ವಿಷಹಾಕಿ ಕೊಲ್ಲುವುದೂ ಪಾಪವಲ್ಲ"

ಸಹಸಾ ಯಾರೋ ಇಬ್ಬರು ಬಂದು ನಿಂತರು. ಪ್ರಜಾಮಿತ್ರ ಕಾರ್ಯಾ ಲಯದಿಂದ ಒಬ್ಬ ಆಳುಮಗನು ಗೋಪಿಯನ್ನು ಅಲ್ಲಿಗೆ ಕರೆದುಕೊಂಡು ಬಂದಿದ್ದನು. ಗೋಪಿಯನ್ನು ಅಲ್ಲಿ ಬಿಟ್ಟು ಅವನು ಹೊರಟುಹೋದನು.

ದೇವೀದೀನನು ಗೋಪಿಯನ್ನು ನೆತ್ತಿಯಿಂದ ಕಾಲವರೆಗೆ ನೋಡಿ ಕೇಳಿ ದನು —ನೀನಾರು ಮಗೂ ?

"ರಮಾನಾಥನ ತಮ್ಮ"

"ಬಾ, ಬಾ, ಮಗೂ ಮನೆಯಿಂದ ಯಾವಾಗ ಬಂದಿ? ಕೂತುಕೊ."

ಗೋಪೀನಾಥನು ಖಡಿಕನ ಅಂಗಡಿಯಲ್ಲಿ ಕೂತುಕೊಳ್ಳುವುದು ತನ್ನ ಗೌರವಕ್ಕೆ ಕಡಮೆಯೆಂದು ಬಗೆದು ನಿಂತೇ ಹೇಳಿದನು—ಇವೊತ್ತೇ ಬಂದೆ. ಅತ್ತಿಗೆಯವರೂ ಬಂದಿದ್ದಾರೆ. ಧರ್ಮಶಾಲೆಯಲ್ಲಿದ್ದೇವೆ.

"ಯಾಕೆ, ಯಾಕೆ? ಅವರನ್ನೂ ಇಲ್ಲಿಗೆ ಕರೆದುತಾ. ಅಥವಾ ನಾನೇ ಬರುವೆ. ಮೇಲೆ ರಮಾನಾಥರ ಕೋಣೆ ಹೇಗೂ ಇದ್ದೇ ಇದೆ ಅಲ್ಲೇ ಇರ ಬಹುದು"

ಜಗ್ಗೋ ಈ ಸಮಾಚಾರವನ್ನು ಕೇಳಿ ಕೋಣೆಗುಡಿಸಿ ಸರಿಮಾಡಲಿಕ್ಕೆ ಹೋದಳು. ದೇವೀದೀನನು ಹೋಗಿ ಜಾಲಪಳನ್ನು ಫಿಟನ್ ಮಾಡಿಕೊಂಡು ಕರಕೊಂಡು ಬಂದನು ಅಷ್ಟರಲ್ಲಿ ಮುದುಕಿ ಮುಖತೊಳೆದು, ಬಣ್ಣಬಣ್ಣದ ಸೀರೆ ತೊಟ್ಟು, ಒಡವೆಗಳನ್ನೆಲ್ಲಾ ಹಾಕಿಕೊಂಡು ಸಿಂಗರಿಸಿ ಕೂತಿದ್ದಳು. ಫಿಟನನ್ನು ಕಾಣುತ್ತಲೇ ಹೋಗಿ ಜಾಲವಳನ್ನಿಳಿಸಿದಳು ಜಾಲಪಳಿಗೆ ತರಕಾರಿ ಅಂಗಡಿಯನ್ನು ನೋಡಿ ಒಂದು ಸಲ ಸ್ವಲ್ಪ ಸಂಕೋಚವಾಯಿತು. ಆದರೆ ಮುದುಕಿಯ ಸ್ನೇಹ ಸ್ವಾಗತವು ಸಂಕೋಚವನ್ನು ದೂರ ಮಾಡಿತು. ಅವಳ ಜತೆಯಲ್ಲಿ ಮೇಲೆ ಹೋದಾಗ ತನ್ನ ಮನೆಯೋ ಎಂದು ಕಾಣುವಷ್ಟು ವ್ಯವ ಸ್ಥಿತವಾಗಿ ಎಲ್ಲ ಏರ್ಪಟ್ಟಿತ್ತು.

ಲೋಟಿಯಲ್ಲಿ ನೀರನ್ನಿರಿಸಿ ಜಗ್ಗೋ ಎಂದಳು—ಇದೇ ಮನೆಯಲ್ಲಿರು ತ್ತಿದ್ದನವ್ವಾ. ಈಗ ಹದಿನೈನು ದಿನಗಳಿಂದ ಮನೆ ಭಣಭಣ ಅನಿಸುತ್ತಿದೆ.

ಮುಖತೊಳೆದು ಸ್ವಲ್ಪ ಫಳಾರ ತಕ್ಕೊಳ್ಳುವಷ್ಟು. ಅವನ ವಿಚಾರ ನಿನಗಿನ್ನೂ ಗೊತ್ತಾಗಿರಲಿಕ್ಕಿಲ್ಲ.

"ಸರಿಯಾಗಿ ಗೊತ್ತಾಗಲಿಲ್ಲ. ಸ್ವಲ್ಪಸ್ವಲ್ಪ ತಿಳಿಯಿತು. 'ಪ್ರಜಾಮಿತ್ರ' ಕಾರ್ಯಾಲಯದಲ್ಲಿ ತಿಳಿಸಿದರು."

ದೇವೀದೀನನೂ ಮೇಲೆ ಬಂದು ಬಿಟ್ಟಿದ್ದನು. ಅವನೆಂದನು—ಬಂಧಿಸಿದ್ದು ಮಾತ್ರವಲ್ಲದೆ ಸಾಕ್ಷಿ ಸಹ ಹೇಳಬೇಕಾಯಿತು, ಸರಕಾರದ ಕಡೆಯಿಂದ. ಪ್ರಯಾಗದಲ್ಲಿ ಯಾವ ಮೊಕದ್ದಮೆಯೂ ಇನ್ನೂ ನಡೆವಂತಿಲ್ಲ. ಮೇಲೆಗೆ ಒಳ್ಳೆಯ ಹುದ್ದೆ ಸಿಕ್ಕಿದರೂ ಸಿಗಬಹುದು.

ಜಾಲಪಳು ಗರ್ವದಿಂದಂದಳು—ಏನು, ಇದೇ ಭಯದಿಂದ ಅವರು ಸಾಕ್ಷಿಗೆ ಒಪ್ಪಿದುದೇ? ಅಲ್ಲಿ ಅವರ ಮೇಲೆ ಮೊಕದ್ದಮೆಯೇ ಇಲ್ಲ. ಸ್ವಲ್ಪ ಇವರಿಂದ ಹೆಚ್ಚು ಕಡಮೆಯಾಗಿ ಬಿಟ್ಟಿದೆಯೆಂದು ನಮಗೆ ತಿಳಿದೊಡನೆ ನಾವು ಹಣ ಸಲ್ಲಿಸಿ ಬಿಟ್ಟಿದ್ದೆವು. ಇವರಂತೂ ಸುಳ್ಳು ಹೆದರಿಕೆಯಿಂದ ಓಡಿ ಬಂದರು. ಆ ಮೇಲೆ ತಾನೆಲ್ಲಿರುವೆನೆಂಬುದನ್ನು ಕೂಡಾ ನಮಗೆ ತಿಳಿಸಲಿಲ್ಲ.

ಯಾವುದೋ ವ್ಯಥೆ ಕಳೆದು ವಿಶ್ರಾಮ ದೊರೆತಂತೆ ದೇವೀದೀನನ ಮೊಗವು ಕಳೆಯೇರಿತು 'ಇದು ನಮಗೆ ಹೇಗೆ ತಿಳಿಯಬೇಕು? ಮನೆಗೆ ಬರಿ, ಬರಿ ಎಂದು ಎಷ್ಟು ಸಲ ಹೇಳಿವೆ, ಕೇಳಲಿಲ್ಲ. ಅಷ್ಟು ನಾಚಿಕೆ. ಪ್ರಯಾಗದಲ್ಲಿ ತನ್ನ ಮೇಲೆ ಮೊಕದ್ದಮೆ ಇಲ್ಲವೆಂದು ತಿಳಿದಿದ್ದರೆ ಸರಕಾರಿ ಸಾಕ್ಷಿಗಾರನಾಗಬೇಕಾದ ಅಗತ್ಯವಿದ್ದಿಲ್ಲ.

'ಸರಕಾರಿ ಸಾಕ್ಷಿಗಾರ' ನೆಂಬುದರ ಆಶಯವೇನೆಂದು ಜಾಲಪಳಿಗೆ ಗೊತ್ತಿದ್ದಿತು. ಸಮಾಜದಲ್ಲಿ ಅಂಥವರನ್ನು ಜನರು ಎಷ್ಟು ಹಳಿಯುವರೆಂಬುದೂ ಅವಳಿಗೆ ಗೊತ್ತು. ತನ್ನ ಕೆಟ್ಟ ಆಚರಣೆಯ ಕುರಿತು ಲಜ್ಜಿತನಾಗಿ ಸತ್ಯದ ಉದ್ಘಾಟನೆಯನ್ನು ಮಾಡುವ, ಛಲಕಪಟಗಳ ಆವರಣವನ್ನು ಹರಿದೊಗೆವ ಮನುಷ್ಯನು ಪ್ರಶಂಸಾಪಾತ್ರನಾದಾನ; ಆದರೆ ಒಂದು ಶರ್ತವಿದೆ. ತನ್ನ ಕೂಟದವರು ಸೇರಿ ಮಾಡಿದ ಕೃತ್ಯದ ಫಲವನ್ನುಣಲು ಅವನು ಸಿದ್ಧನಿರಬೇಕು, ನಗುಮುಖದಿಂದ ಗಲ್ಲಕ್ಕೇರುವ ಎದೆಗಾರನಿರಬೇಕು. ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳುವುದರ ಸಲುವಾಗಿ ಅಥವಾ ಶಿಕ್ಷೆಯ ಕಠೋರತೆಯ ಭಯದಿಂದ ಯಾರು ತನ್ನ ಮಂಡಲಿಗೆ ದ್ರೋಹ ಬಗೆವನೋ, ಹೊಸ್ತಿಲ ಮೇಲಿನ ಹಾವಾಗುವನೋ ಅಂಥವನನ್ನು ಸಮಾಜವು ಹೇಡಿಯೆಂದು, ನಾಚಿಕೆಗೇಡಿ

ಯೆಂದು, ಪತಿತನೆಂದು ಹೀನಯಿಸುವುದು. ವಿಶ್ವಾಸಘಾತಕನೆಂದರೆ ಎಲ್ಲ ಕಡೆಯೂ ಒಂದೇ—ದರೋಡೆಗಳ್ಳರೂ ಒಂದೇ, ಸಮಾಜಶತ್ರುಗಳೂ ಒಂದೇ. ಅಂಥ ಪ್ರಾಣಿಯನ್ನು ಸಮಾಜವು ಕಾಪಿಡುವುದಿಲ್ಲ, ಕ್ಷಮಿಸುವುದಿಲ್ಲ. ಇಲ್ಲ, ಎಂದೆಂದಿಗೂ ಕ್ಷಮಿಸುವುದಿಲ್ಲ. ಜಾಲಪನಿಗೆ ಇದೆಲ್ಲ ತಿಳಿದಿದ್ದಿತು. ರಮಾನಾಥನು ದಂಡನೆಯ ಭಯದಿಂದ ತಾನು ಮಾಡಿದ ಪಾಪದ ತೆರೆಯನ್ನು ಬಿಚ್ಚದೆ ತನಗೆ ಗಾಳಿಯೂ ಸೋಕದ ಪಂಜರಗಳ ತೆರೆಯನ್ನು ಹಂದೊಗೆದಿದ್ದನು. ಆದರೆ ಅವಳಿಗೆ ಫಕ್ಕನೆ ವಿಶ್ವಾಸ ಬರಲಿಲ್ಲ. ಬೇರೇನಾದರೂ ಘಟನೆ ಸಂಭವಿಸಿರಬಹುದೇ ಎಂದವಳಿಗೆ ಸಂಶಯವಾಯಿತು. ನಾಚುಗೆಪಡುತ್ತಾ ಎಂದಳು— ಇಲ್ಲಿ ಏನಾದರೂ....... ಏನಾದರೂ ನಡೆಯಿತೆ?

ದೇವೀದೀನನು ರಮಾನಾಥನು ಬಂಧಿಸಲ್ಪಟ್ಟ ಸಂದರ್ಭವನ್ನು ವಿವರಿಸಿದನು. ಜಗ್ಗೋ ಎಂದಳು— ಅಲ್ಲ, ಎಲ್ಲರೂ ಸೇರಿ ಇವನ ಮೇಲೆ ಎಂಥ ಮಾಟ ಮಾಡಿದರೋ ಏನೋ. ರಮಾ ಅಂಥವನಲ್ಲವೇ ಅಲ್ಲ. ಇಡೀ ದಿನ 'ಅಮ್ಮಾ ಅಮ್ಮಾ' ಎನ್ನುತ್ತಿರುತ್ತಿದ್ದನು. ಅಂಗಡಿಗೆ ಹೆಂಗಸರು, ಗಂಡಸರು ಎಲ್ಲಾ ತರದ ಜನರೂ ಬರುತ್ತಿದ್ದರು. ಕಣ್ಣೆತ್ತಿ ಒಬ್ಬರನ್ನೂ ನೋಡಿದವನಲ್ಲ, ಗೊತ್ತೆ? ಚಿನ್ನದಂಥ ಮಗು'

ದೇವೀ—ಅವನಲ್ಲಿ ದೋಷವೇನೂ ಇದ್ದಿಲ್ಲ. ನಾನು ಇಂತಹ ಹುಡುಗನನ್ನೇ ಕಂಡುದಿಲ್ಲ. ಒಟ್ಟು ಮೋಸದಲ್ಲಿ ಬಿದ್ದ ಅಷ್ಟೆ.

"ಅವರ ಸಾಕ್ಷಿ ವಿಚಾರಣೆ ಎಲ್ಲ ಮುಗಿಯಿತೆ?"

"ಹೌದು"

'ಇನ್ನು ಏನೂ ಮಾಡುವಂತಿಲ್ಲವೆ? ಒಮ್ಮೆ ಅವರ ಭೆಟಿಯಾಗಿದ್ದರೆ....'

'ಇದ್ದರೆ ಏನು? ಎಲ್ಲ ಗುಟ್ಟು ಬಯಲು ಮಾಡುತ್ತಿದ್ದ. ಹೌದಲ್ಲೊ ಪೋಲೀಸರಿಗೆ ಅಷ್ಟು ಮಂಕು ಹಿಡಿದಿಲ್ಲವೆಂದು ತಿಳಿ. ಅವನ ಸುತ್ತಲೂ ಪಹರೆಯಿರುತ್ತದೆ'

ಈ ವಿಚಾರ ಇನ್ನು ಮುಂದೆ ಮಾತುಕತೆ ನಡೆಯದಾಯಿತು. ಜಾಲಪ ಬೀದಿಯ ಮೇಲಿನ ತಮಾಶೆಯನ್ನು ನೋಡುತ್ತಾ ನಿಂತಿದ್ದ ಗೋಪಿಯನ್ನು ಕರೆದು—ಇಗೊ, ಮುಖತೊಳೆದುಕೊಂಡು ಏನಾದರೂ ತಿನ್ನು ಎಂದಳು. ಗೋಪಿಗೆ ಅತ್ತೆಯಮನೆಗೆ ಬಂದ ಹಾಗಾಗಿತ್ತು. ಲಜ್ಜೆಯಿಂದ ಬೀದಿಯ ಕಡೆಯೇ ನೋಡುತ್ತ ನಿಂತುಬಿಟ್ಟನು.

ದೇವೀದೀನನು ನಕುಲನಿಗೆ ಹೇಳಿದನು—ನಾವು ಹೊರಗೆ ಹೋಗುತ್ತೇವೆ. ಅಮ್ಮಾ, ನಿಮಗೇನು ಬೇಕೋ ಅದನ್ನು ತಿಳಿಸುವುದಕ್ಕೆ ಸಂಕೋಚ ಮಾಡಬೇಡಿ. ಮನೆ ನಿಮ್ಮದೇ. ಅವನೂ ಇದನ್ನು ತನ್ನ ಮನೆಯೆಂದೇ ಬಗೆಯುತ್ತಿದ್ದನು. ನಮ್ಮವರೆಂಬವರು ನಮಗೆ ಯಾರೂ ಇರಲಿಕ್ಕೂ ಇಲ್ಲ.

ಜಗ್ಗೋ ಗರ್ವದಿಂದೆಂದಳು—ಅವನು ನಾನು ಮಾಡಿ ಹಾಕಿದ್ದನ್ನು ತಿನ್ನುತ್ತಿದ್ದ. ಹೆಮ್ಮೆ ಎಂಬುದು ಒಂದಿಷ್ಟೂ ಇರಲಿಲ್ಲ.

ಜಾಲಪ—ಇನ್ನು ನೀನು ಅಡುಗೆ ಮಾಡುವ ಅವಶ್ಯವಿಲ್ಲಮ್ಮಾ. ನಾನೇ ಮಾಡುವೆ.

ಜಗ್ಗೋ—ನಮ್ಮ ಜಾತಿಯವರು ಬೇರೆಯವರ ಕೈಯಿಂದ ತಿನ್ನುವ ಪರಿಪಾಟ ಇಲ್ಲ.

ಜಾಲಪ—ಅದು ನಮ್ಮಲ್ಲಿಯೂ ಇಲ್ಲ

ಜಗ್ಗೋ—ನಿನ್ನನ್ನು ಯಾರಿಲ್ಲಿ ನೋಡಲಿಕ್ಕೆ ಬರುವವರು? ಓದು ಕಲಿತವರು ಆ ಕುರಿತು ಅಷ್ಟೊಂದು ಕಟ್ಟು-ನಿಟ್ಟಾಗಿರುವುದೂ ಇಲ್ಲ. ನಮ್ಮದು ಮೂರ್ಖರ ಜಾತಿ.

ಜಾಲಪ—ಆದಾಗದು ನೀನು ಮಾಡಿದ್ದನ್ನು ನಾನು ತಿನ್ನುತ್ತಿರುವುದು ಚಂದವಲ್ಲ. ವಧೂ ಎಂತ ಮಾಡಿಕೊಂಡವಳು ಅವಳು ಮಾಡಿ ಹಾಕಿದ್ದನ್ನು ತಿನ್ನಲೇ ಬೇಕು ಹಾಗಲ್ಲವಾದರೆ ಸೊಸೆಯಾಗಿ ಮಾಡಿಕೊಂಡುದೇಕೆ?

ದೇವೀದೀನನು ಮುದುಕಿಯ ಕಡೆಗೆ ಪ್ರಶಂಸಾ-ಸೂಚಕ ನೇತ್ರಗಳಿಂದ ನೋಡಿ ಎಂದನು—ವಧುವಿನ ಮಾತನ್ನು ಕೇಳು, ಎಷ್ಟು ಅಚ್ಚುಕಟ್ಟಾಗಿ ಹೇಳಿದಿಯಮ್ಮಾ. ಇನ್ನು ನಾವು ಹೋಗುವ ಇವರು ಸ್ವಲ್ಪ ಆರಾಮ ಮಾಡಲಿ.

ಇಬ್ಬರೂ ಕೆಳಕ್ಕೆ ಹೋದ ಮೇಲೆ ಗೋಪಿ ಬಂದು ಹೇಳಿದನು 'ಏನು ಅಣ್ಣ ಈ ಖಡಿಕರ ಮನೆಯಲ್ಲೇ ಇರುತ್ತಿದ್ದನೆ? ನೋಡುವಾಗ ಖಡಿಕರ ಹಾಗೆ ಕಾಣುತ್ತಿದೆ.'

"ಖಡಿಕರಾಗಲಿ, ಚಮಗಾರರಾಗಲಿ. ನನ್ನ-ನಿನಗಿಂತ ನೂರುಪಾಲು ಬೇಕು. ಪರದೇಶಿಯೊಬ್ಬನನ್ನು ಆರು ತಿಂಗಳು ಸಾಕಿ ಸಲಹುವದು ಸಾಮಾನ್ಯ ಕೆಲಸವೆ? ನಮಗೆ ಧೈರ್ಯ ಬಂದೀತೆ? ಒಬ್ಬ ನೆಂಟ ಬಂದರೆಯೆ ನಮಗೆ ಹೆಚ್ಚಾಗುತ್ತದೆ ಇವರು ಕೀಳಾದರೆ, ನಾವು ಇವರಿಗಿಂತ ಕೀಳು'

''ಯಾರನ್ನಾದರೂ ನಿಲಿಸಿಕೊಂಡಮಾತ್ರಕ್ಕೆ ಉತ್ತಮ ಕುಲದವನಾಗುವದಿಲ್ಲ. ಸಮಗಾರನು ಎಷ್ಟು ಪುಣ್ಯಮಾಡಿದರೂ ಅವನು ಸಮಗಾರನೆ."

''ಇತರರ ಧನಕ್ಕಾಗಿ ಬಾಯಿತೆರೆದುಕೊಂಡಿರುವ ಬ್ರಾಹ್ಮಣನಿಗಿಂತ ಅಂತಹ ಸಮಗಾರನೆ ಮೇಲು."

ಫಳಾರವಾದ ಮೇಲೆ ಗೋಪಿ ಕೆಳಗೆ ಹೋದನು ಜಾಲಪಳು ರಮಾನಾಥನನ್ನು ಈ ಕೆಸರಿನಿಂದ ಮೇಲೆತ್ತುವುದು ಹೇಗೆಂದು ಚಿಂತಿಸಹತ್ತಿದಳು. ಅಭಿಯುಕ್ತರಲ್ಲಿ ಎಷ್ಟು ಜನ ನಿರಪರಾಧಿಗಳೋ ಏನೋ. ಅವರಿನ್ನು ಸಮಾಜಕ್ಕೆ ಮೊಗ ತೋರಿಸುವಂತಿದೆಯೆ? ಯಾರಿಗೂ ಗಲ್ಲಾಗುವದಿಲ್ಲವೆಂದೇ ಮಾಡುವ ಅವರೂ ತನ್ನ ಸ್ವಾರ್ಥದ ಸಲುವಾಗಿ! ಛೀ ಎಂಥಾ ನೀಚತೆಯಿದು.! ಮುನಸಿಪಾಲಿಟಿಯ ಮೊಕದ್ದಮೆಯಲ್ಲಿ ಹೆಚ್ಚೆಂದರೆ ನಾಲ್ಕು ವರ್ಷ ಸಜೆಯಾಗುತ್ತಿತ್ತು. ಅದರಿಂದ ತಪ್ಪಿಸಿಕೊಳ್ಳಲು ಇಷ್ಟು ನೀಚತೆಗಿಳಿವುದೆ?

ಫಕ್ಕನೆ ಅವಳ ಹೃದಯಕ್ಕೆ ಒಂದು ವಿಚಾರ ಬಾಣದಂತೆ ನಟ್ಟುಕೊಂಡಿತು ಇವರು ತಮ್ಮ ಕೋರ್ಟು ಹೇಳಿಕೆಯನ್ನು ಬದಲಿಸಿಬಿಟ್ಟರೆ? ಮುನ್ಸಿಪಲ್ ಮೊಕದ್ದಮೆ ತನ್ನ ಮೇಲಿಲ್ಲವೆಂದು ಇವರಿಗೆ ತಿಳಿಸಿದರೆ ಹಾಗೆಯೇ ಮಾಡಿಯಾರು. ಅದನ್ನು ತಿಳಿಸುವುದು ಹೇಗೆ?

ದೇವೀದೀನನ ಹತ್ತಿರ ಹೋಗಿ ಅವರನ್ನು ಭೇಟಿಯಾಗುವ ಬಗೆಯೇನಾದರೂ ಇರುವದೆ ಎಂದು ಕೇಳಿದಳು

ದೇವೀದೀನನೆಂದನು. 'ನಾನೆರಡು ಬಾರಿ ಹೋಗಿದ್ದೆ. ಬಾಗಿಲಿಂದ ದೂಡಿಬಿಟ್ಟರು '

'ಆ ಬಂಗಲೆಯ ಅಕ್ಕ ಪಕ್ಕದಲ್ಲೇನಿವೆ?'

'ಒಂದು ಬದಿಯಲ್ಲೊಂದು ಬಂಗಲೆಯಿದೆ, ಇನ್ನೊಂದು ಬದಿಯಲ್ಲಿ ಮಾವಿನ ತೋಟವಿದೆ. ಮುಂದೆ ರಸ್ತೆಯಿದೆ '

''ಸಂಜೆಗೆ ಅಡ್ಡಾಡುವುದಕ್ಕೆ ಬರುವುದಿಲ್ಲವೆ?"

"ಹಾಂ, ಕುರ್ಚಿ ಹಾಕಿಕೊಂಡು ಕುಳ್ಳಿರುತ್ತಾರೆ. ಒಬ್ಬಿಬ್ಬರು ಪೋಲೀಸ ಆಫೀಸರರು ಹತ್ತಿರವೇ ಇರುತ್ತಾರೆ "

"ಅವರು ಒಬ್ಬರೇ ಸಿಗುವವರೆಗೆ ಆ ಮಾವಿನ ತೋಟದಲ್ಲಿ ಮರೆಯಾಗಿದ್ದು ಆ ಮೇಲೆ ಅವರ ಬಳಿ ಪತ್ರನೆಸೆದುಬಿಟ್ಟು ಸಮಾಚಾರ ತಿಳಿಸಿದರೆ ಹೇಗೆ?"

‘ಓ, ಆಗಲಿಕ್ಕೇನೋ ಹೌದು. ಆದರೆ ಅವನು ಒಂಟಿಯಾಗಿ ಇರಬೇಕಾಯಿತಲ್ಲ?’

ಸ್ವಲ್ಪ ಕತ್ತಲಾದೊಡನೆ ದೇವೀದೀನನನ್ನು ಕರೆದುಕೊಂಡು ಜಾಲಪ ಬಂಗಲೆ ನೋಡಲು ಹೋದಳು. ಶಹರಿನ ದಟ್ಟವಾದ ಜನಸಂದಣಿಯನ್ನು ಬಿಟ್ಟು ಇವರು ದೂರ ಬಂದಿದ್ದರು ನಾಲ್ಕು ದಿಕ್ಕುಗಳಲ್ಲಿ ಮೌನವು ನೆಲಸಿತ್ತು. ಗಾಳಿಯೂ ಮಂದಮಂದವಾಗಿ ಸಂಚರಿಸುತ್ತಿತ್ತು. ದಾರಿಯ ಇಕ್ಕಡೆಗಳ ವೃಕ್ಷಸಮೂಹವು ಚಂದ್ರನ ನಸುಬೆಳಕಿನಲ್ಲಿ ಹತೋತ್ಸಾಹವಾಗಿ ನಿರ್ಜೀವವಾಗಿ ನಿಂತಿದ್ದುವು. ತಾನು ಇಷ್ಟು ಪ್ರಯಾಸ ಪಟ್ರೂ ತನಗೆ ಫಲ ದೊರೆಯುವುದಿಲ್ಲವೆಂದೂ, ತನ್ನ ಯಾತ್ರೆಗೆ ಲಕ್ಷ್ಯವೇ ಇಲ್ಲವೆಂದೂ, ಈ ಅನಂತ ಪಥದಲ್ಲಿ ತನ್ನ ದಶೆ ಅನ್ನಕ್ಕಾಗಿ ಬಾಗಿಲು ಬಾಗಿಲು ಅಲೆವ ಭಿಕಾರಿಯಂತಾಗಿದೆಯೆಂದೂ ಜಾಲಪಳಿಗೆ ತೋರಹತ್ತಿತು.

ಬಂಗಲೆ ಕಾಣಿಸಿತು. ಪಹರೆಯೂ ಇಲ್ಲ ಯಾರೂ ಇಲ್ಲ. ದೇವೀದೀನನೆಂದನು— ಈ ಮನೆ ಬಿಟ್ಟು ಹೋಗಿರುವಂತೆ ಕಾಣುವುದು.

“ಹಿಂದೆ ಹೋಗುವ. ಇನ್ನೇನು ಮಾಡುವುದು?”

ಅಷ್ಟರಲ್ಲಿ ಮಾವಿನ ಮರಗಳೆಡೆಯಿಂದ ಒಬ್ಬನ ತಲೆತೋರಿತು. ದೇವೀದೀನನು ಅವನ ಗುರುತು ಹಿಡಿದು ಕೇಳಿದನು—ಸೀನೇ ಏನು ಜಂಗಲಿ? ಈ ತೋಟ ಮಾಡಿಕೊಂಡೆಯಾ?

“ಹೌದು. ಇನ್ನು ದಂಡ ತುಂಬಿಸಿದರೆ ಸರಿ. ಇರಲಿ ಇಲ್ಲಿಗೆ ಬರಲು ಕಾರಣ?”

“ಆ ಬಂಗಲೆಯಲ್ಲಿದ್ದವರು ಎಲ್ಲಿಗೆ ಹೋದರು”

“ಎಲ್ಲಿಗೆಹೋದರೋ ತಿಳಿಯದು ಹತ್ತು-ಹದಿನೈದು ದಿನಗಳಲ್ಲಿ ಹಿಂದೆ ಬರುವರೆಂದು ಕಾವಲಿನವರು ಹೇಳುತ್ತಿದ್ದರು. ಹ್ಯಾಕೋರ್ಟಿನಲ್ಲಿ ಮೊಕದ್ದಮೆ ನಡೆಯುವ ಸಮಯಕ್ಕೆ ಸರಿಯಾಗಿ ಬಂದಾರು. ಕಲಿತವರು ಕೂಡ ಹೀಗೆ ದಗಾಬಾಜರಾಗುತ್ತಾರೆಂದು ನನಗೆ ಇದೇ ಮೊದಲು ಗೊತ್ತಾದ್ದು. ಪೂರಾ ಸುಳ್ಳು ಸಾಕ್ಷಿ ಹೇಳಿಬಿಡುವುದೇ? ಇವರಿಗೂ ಮಕ್ಕಳು ಮನೆ ಇರಬಹುದು; ದೇವರಿಗೂ ಹೆದರಲಿಲ್ಲಾಂತ ಹೇಳಿದರೆ!”

ಜಾಲಪಳು ಅಲ್ಲೇ ನಿಂತಿದ್ದಳು. ದೇವೀದೀನನು ಅವನಿಗೆ ಇನ್ನು ಹೆಚ್ಚು ವಿಚಾರಿಸುವ ಅವಕಾಶವನ್ನು ಕೊಡದೆ ಕೇಳಿದನು—ಹಾಗಾದರೆ ಹದಿನೈದು ದಿನಗಳಲ್ಲಿ ಬರುವರಲ್ಲವೆ?

"ಏನೋ, ಸಿಪಾಯಿಗಳೆಂದುಕೊಳ್ಳುತ್ತಿದ್ದರು."

"ಅವರು ಬಂದಾಗ ಕೂಡಲೇ ನನಗೆ ತಿಳಿಸಿಬಿಡು."

"ಆಯಿತು"

ಜಾಲಪಳಿಗೆ ರಮಾನಾಥನ ನಿಂದೆಯನ್ನು ಕೇಳಿ ತೀವ್ರ ವೇದನೆಯಾಯಿತು. ಅವರು ತನ್ನನ್ನು ಕಾಲಿಂದೊದ್ದು ದೂಡಿದರೂ ಚಿಂತಿಲ್ಲ. ಒಮ್ಮೆಗೆ ಈ ಅಪಯಶದ ಕತ್ತಲು ಕಂದಕದಿಂದ ಅವರನ್ನು ಪಾರು ಮಾಡಬೇಕು.

ಇಬ್ಬರೂ ಅಲ್ಲಿಂದ ಹಿಂತಿರುಗಿದರು.

[೩೪]

ಒಂದು ತಿಂಗಳು ಕಳೆಯಿತು. ಗೋಪಿಗೆ ಮೊದಮೊದಲು ಎಲ್ಲ ಹೊಸತಾದ್ದರಿಂದ ಆನಂದವೆನಿಸುತ್ತಿತ್ತು. ಕೊನೆಕೊನೆಗೆ ಬೇಸರ ಹಿಡಿದು ಮನೆಯ ಜಪಕ್ಕೆ ತೊಡಗಿದನು. ಜಾಲಪಳು ಅವನನ್ನು ಕಳುಹಿಸುವುದೊಳಿತೆಂದು ಬಗೆದು ಹಾಗೆಯೇ ಮಾಡಿದಳು. ಅಂದರೆ ಅವನು ಅಡಗಿಕೊಂಡು ಅಳುವುದಕ್ಕೆ ಆರಂಭ ಮಾಡಿಬಿಟ್ಟಿದ್ದನು.

ಜಾಲಪ ಎಷ್ಟೋ ಬಾರಿ ರಮಾನಾಥನ ಬಂಗಲೆಯ ಕಡೆಗೆ ಹೋಗಿ ಬಂದಳು. ಅವನು ಬಂದಿರಲಿಲ್ಲವೆಂದು ಚೆನ್ನಾಗಿ ಗೊತ್ತಿತ್ತು, ಆದರೂ ಒಂದ ಸಲ ಅದನ್ನು ನೋಡುವುದರಲ್ಲಿಯೂ ಆನಂದವಿತ್ತು.

ಒಂದು ದಿನ ಅವಳು ಕಿಡಿಕಿಯ ಬಳಿ ನಿಂತಿದ್ದಳು. ಅಷ್ಟರಲ್ಲಿ ಅವಳಿಗೆ ಬೀದಿಯ ಮೇಲೆ ಮೋಟರುಗಳ ಒಂದು ಸಾಲು ಬರುವುದು ಕಂಡಿತು. ಇಷ್ಟು ಮೋಟರುಗಳು ಎಲ್ಲಿ ಹೋಗುತ್ತಿರಬಹುದೆಂದು ಕುತೂಹಲವಾಯಿತು. ಲಕ್ಷ್ಯಕೊಟ್ಟು ನೋಡಹತ್ತಿದಳು. ಒಂದರಲ್ಲಿ ಎಲ್ಲಾ ಪೋಲೀಸರೇ ತುಂಬಿದ್ದರು. ಕೊನೆಯ ಮೋಟರಿನ ಮೇಲೆ ಅವಳ ಕಣ್ಣು ಹರಿದಾಗ ಅವಳ ಸರ್ವಾಂಗದಲ್ಲಿಯೂ ವಿದ್ಯುತ್ತು ಹರಿದಂತಾಯಿತು. ಮೋಟರನ್ನು ತಡೆದು ನಿಲ್ಲಿಸಲೆಂದಿರುವಳೋ ಎಂಬಂತೆ ಮೆಟ್ಟಲಿನ ವರೆಗೆ ಓಡಿ ಬಂದಳು. ಆದರೆ ತಾನು ಇಳಿದು ಹೋಗುವಷ್ಟರಲ್ಲಿ ಅದು ಮನೆದಾಟಿರುವುದೆಂದು ಬಗೆದು ಕಿಡಿಕಿಯ

ಮುಂದೆಯೇ ಬಂದು ನಿಂತಳು. ರಮಾನಾಥನೀಗ ಅವಳಿಗೆ ಸರಿ ಇದಿರಾಗಿ ಬಂದಿದ್ದನು. ಅವನ ಕಣ್ಣುಗಳು ಕಿಡಿಕಿಯನ್ನೇ ದಿಟ್ಟಿಸುತ್ತಿದ್ದುವು ಜಾಲಪಳು ಸನ್ನೆಯಿಂದ ಏನೋ ಹೇಳಬೇಕೆಂದು ಮಾಡಿದಳು; ಆದರೆ ಲಜ್ಜೆ ಬಿಡಲಿಲ್ಲ. ಕೆಳಗಿಂದ ದೇವೀದೀನನ ಸ್ವರವೂ ಕೇಳಿಸಿತು. ಆದರೂ ಮೋಟರು ನಿಲ್ಲಲಿಲ್ಲ ಒಂದು ಕ್ಷಣದಲ್ಲಿ ಅದು ಮುಂದೆ ಹೋಗಿಬಿಟ್ಟಿತು; ಆದರೆ ರಮಾನ ಕಣ್ಣುಗಳು ಹಿಂದೆ ತಿರುಗಿ ತಿರುಗಿ ಕಿಡಿಕಿಯನ್ನೇ ನೋಡುತಿದ್ದುವು.

ಜಾಲಪ ಮೆಟ್ಟಿಲ ಬಳಿ ಬಂದು ಹೇಳಿದಳು—ತಂದೆ!

ದೇವೀದೀನನು ಮುಂದೆ ಬಂದೆಂದನು—ರಮಾ ಬಂದು ಬಿಟ್ಟ! ಆ ಮೋಟರಿನಲ್ಲಿ ಹೀಗಂದು ಅವನು ಮೇಲೆ ಬಂದನು ಜಾಲಪ ಕೇಳಿದಳು—ನಿನ್ನ ಹತ್ತಿರ ಏನಾದರೂ ಹೇಳಿದನೆ?

ಹೇಳುವುದೇನು. ರಾಮರಾಮ್ ಮಾಡಿದನು. ನಾನು ಕುಶಲ ಸಮಾಚಾರ ಕೇಳಿದೆ. ಕೈಯಿಂದ ಧೈರ್ಯಹೇಳುತ್ತಾ ಮುಂದೆ ಹೋದ ನೀನು ನೋಡಲಿಲ್ಲವೆ?"

"ನೋಡಿದೆ. ಮೊಕದ್ದಮೆ ಯಾವಾಗ ನಡೆಯುವುದು?"

"ನಾಳೆ."

'ನಾಳೆ! ಇಷ್ಟು ಬೇಗ. ಹಾಗಾದರೆ ಕೆಲಸ ಮಾಡುವುದೇನಿದ್ದರೂ ಇವೊತ್ತೇ ಮಾಡಬೇಕಾಯಿತು. ನನ್ನ ಕಾಗದ ಅವಂಗೆ ಸಿಕ್ಕಿ ಬಿಟ್ಟರೆ ಎಲ್ಲಾ ಸರಿಯಾಗುವುದು."

ದೇವೀದೀನನು ಆಕೆಯ ಕಡೆ ನೋಡಿದನು. ನೀನು ಈ ಕೆಲಸವನ್ನು ಎಷ್ಟು ಸುಲಭವೆಂದೆಣಿಸಿರುವಿಯೋ ಅಷ್ಟು ಸುಲಭವಲ್ಲವೆಂದು ಅವನ ಕಣ್ಣುಗಳು ಹೇಳುವಂತಿದ್ದುವು.

ಜಾಲಪ—ಏನು, ನಿನಗೆ ಸಂದೇಹವುಂಟೆ?

ದೇವೀ—ಹೌದು. ಹೇಳಿಕೆ ಬದಲಿಸುವ ವಿಷಯ ನನಗೆ ಸಂದೇಹವಿದೆ. ಇನ್ನೊಂದು ಮಾತು. ಹಾಗೆ ಬದಲಿಸಿದರೆ, ಈ ಪೋಲೀಸರ ಕೈಯೊಳಗಿಂದ ಪಾರಾಗುವುದು ಕಷ್ಟ. ನಾಳೆ ಇವನ ಮೇಲೆ ಬೇರೊಂದು ಅಪಾದನೆ ಹೊರಿಸಿ ಮತ್ತೆ ಹಿಡಿದುಬಿಡುತ್ತಾರೆ.

ಆಗ ಜಾಲಪಳು ಧೀರಳಾಗಿ ಎಂದಳು—ತಂದೆ, ಪೋಲೀಸರ ಕೈಯಿಂದ ಇವರನ್ನು ತಪ್ಪಿಸುತ್ತೇನೆಂದು ನಾನು ಇವರಿಗೆ ಮಾತು ಕೊಟ್ಟಿಲ್ಲ. ಆದಕ್ಕೋಸ್ಕರ ನಾನು ಹೆಣಗುವುದೂ ಅಲ್ಲ. ಅವರ ಕೈಯಿಂದ ಹತ್ತಾರು ಮನೆಗಳು ನಾಶವಾಗುವುದನ್ನು ನಾನು ನೋಡಲಾರೆ. ನಮ್ಮ ಮನೆಯ ಮೇಲೆ ಕಲಂಕ ಬರುವುದನ್ನೂ ಸಹಿಸಲಾರೆ. ಇವರು ಸ್ವತಃ ಹೇಳಿಕೆಯನ್ನು ಬದಲಿಸಲೊಪ್ಪದಿದ್ದರೆ, ನಾನು ಕೋರ್ಟಿನಲ್ಲಿ ಇದ್ದ ಸಂಗತಿಯನ್ನೆಲ್ಲಾ ಬಿಚ್ಚಿ ಬಿಡುವೆನು. ಪರಿಣಾಮವೇನು ಬೇಕಾದರೂ ಆಗಲಿ. ಅವರು ಬೇಕಾದರೆ ನನ್ನನ್ನು ತ್ಯಜಿಸಲಿ. ನನ್ನ ಮೊಗನೋಡದಿರಲಿ, ಚಿಂತಿಲ್ಲ, ನನ್ನ ಕಾಗದದಲ್ಲಿ ಎಲ್ಲವನ್ನೂ ಬರೆದಿಟ್ಟಿರುವೆ. ಇಲ್ಲಿಂದ ಒಂಭತ್ತಕ್ಕೆ ಹೊರಡುವ

“ಸರಿ. ನೀನು ಇಷ್ಟು ಮಟ್ಟಿಗೆ ಎದೆಗಾರ್ತಿಯೆಂದು ನಾನು ತಿಳಿದಿರಲಿಲ್ಲ. ಆಯಿತಮ್ಮಾ, ದೇವರು ನಿನ್ನ ಕೈ ಹಿಡಿಯುವನು. ಹೆದರಬೇಡ.”

(೩೫)

ಪೋಲೀಸರ ಭಯದಿಂದ ಬೀದಿಗೆ ಹಗಲು ಹೊತ್ತು ಕಾಲಿಡಲು ಯಾವನು ಅಂಜುತ್ತಿದ್ದನೋ, ದೇವೀದೀನನ ಮನೆಯಲ್ಲಿ ಕಳ್ಳರಂತೆ ದಿನಗಳೆಯುತಿದ್ದನೋ, ಅಂತಹ ರಮಾನಾಥನಿಂದು ರಾಜ ಭೋಗದ ಸೌಖ್ಯವನ್ನುಣ್ಣುತ್ತಿದ್ದಾನೆ. ದೊಡ್ಡ ದೊಡ್ಡ ಆಫೀಸರರೂ ಈಗ ಅವನ ಮುಖ ನೋಡುತಿರುತ್ತಾರೆ. ಅವನ ಬಾಯಿಯಿಂದ ಮಾತು ಹೊರಡುವುದೇ ತಡ, ಅದು ಪೂರ್ಣವಾಗುವುದು. ಇಷ್ಟೊಂದು ಅಲ್ಪ ಸಮಯದಲ್ಲೇ ಅವನ ವಿವೇಕ ಬುದ್ಧಿಯನ್ನು ವಿಲಾಸವು ಆವರಿಸಿ ಬಿಟ್ಟಿತು. ತಾನು ಮಾಡುತ್ತಿರುವುದೇನು, ತಾನು ಹೀಗೆ ಮಾಡಿದುದರಿಂದ ನಿರಪರಾಧಿಗಳನ್ನು ಶಿಕ್ಷೆಗೊಳಪಡಿಸಿದಂತಾಗುವುದಿಲ್ಲವೆ, ಈ ವಿಚಾರ ಅವನ ಮನಸ್ಸಿಗೆ ಬರುತ್ತಲೇ ಇದ್ದಿಲ್ಲ. ಏಕಾಂತ ವಿಚಾರಕ್ಕೆ ಅವಕಾಶವೇ ಅವನಿಗೆ ದೊರೆಯುತಿದ್ದಿಲ್ಲ. ಸಾಯಂಕಾಲ ಮೋಟರಿನಲ್ಲಿ ಸವಾರಿ ಹೋಗುವದಾಯಿತು. ರಾತ್ರಿ ಅಧಿಕಾರಿಗಳೊಡನೆ ಥಿಯೇಟರಾಯಿತು. ಹೀಗೆ ಮೇಜಿಸ್ಟ್ರೇಟ್ ಕೋರ್ಟಿನಿಂದ ಮೊಕದ್ದಮೆ ಸೆಶ್ಶನಿಗೆ ದಾಟಿಸಿದ ದಿನ ರಮಾನಾಥನಿಗಾದಷ್ಟು ಆನಂದ ಪೋಲೀಸ್ ಅಧಿಕಾರಿಗಳಿಗೂ ಆಗಿದ್ದಿಲ್ಲ. ತನ ಸೌಭಾಗ್ಯ-ಸೂರ್ಯನು ಉದಯವಾದಂತೆ ಅವನಿಗೆ ಕಂಡಿತು.

ಸೆಶ್ಯನ್ ಜಜ್ಜರ ನ್ಯಾಯಾಲಯದಲ್ಲಿ ಮ್ಯಾಜಿಸ್ಟ್ರೇಟ್‌ಕೋರ್ಟಿನ ಹಾಗೆ ಸುಲಭದಲ್ಲಿ ಜಾರಲು ಸಾಧ್ಯವಿಲ್ಲವೆಂದು ಬಗೆದು ಪೋಲೀಸರು ರಮಾನಾಥನಿಗೆ ಆ ಸ್ಥಳವನ್ನೊಮ್ಮೆ ತೋರಿಸುವುದು ವಿಹಿತವೆಂದು ಬಗೆದು ಅಲ್ಲಿಗೆ ಕರೆದುಕೊಂಡು ಹೋದರು. ಏಕೆಂದರೆ ಸುಯೋಗದಿಂದ ಸೆಶ್ಯನ್‌ಜಡ್ಜರು ಒಬ್ಬ ಹಿಂದೀಯರಾಗಿದ್ದರು. ಕಳ್ಳನಿರಲಿ, ಪೋಲೀಸರಿರಲಿ, ಒಂದೇ ಬಗೆಯ ವರ್ತನೆಯ ನ್ಯಾಯಾಧೀಶರೆಂದು ಹೆಸರು ಪಡೆದಿದ್ದರು. ಪೋಲೀಸರು ರಮಾನಾಥನನ್ನು ಕರೆದುಕೊಂಡು ಹೋಗಿ ಸ್ಥಳವನ್ನು ತೋರಿಸಿದರು. ಒಬ್ಬ ಜಮೀನ್ದಾರರ ಮನೆಯಲ್ಲಿ ಡೇರೆಹೊಡೆದರು. ಹಗಲಿಡೀ ಶಿಕಾರಿಗೆ ಹೋಗುವುದು, ಗ್ರಾಮಫೋನ್‌ಸಂಗೀತ, ಚತುರಂಗದ ಆಟ, ನದೀತಟದ ವಿಹಾರ ಇವುಗಳಲ್ಲಿ ಕಳೆಯುತ್ತಿತ್ತು. ರಾಜಕುಮಾರನೊಬ್ಬನು ಬೇಟೆಗೆ ಹೊರಟಂತೆ ಕಾಣುತಿತ್ತು.

ಈ ಭೋಗ ವಿಲಾಸಗಳ ನಡುವೆ ರಾಮನಾಥನಿಗೆ ಜಾಲಪಳ ಅಭಾವವೊಂದು ಕೆಟ್ಟದೆನಿಸುತ್ತಿತ್ತು. ಅವನ ವಿಲಾಸೇಂದ್ರಿಯಗಳು ದಾರಿದ್ರ್ಯದ ದಿನಗಳು ದಾಟಿದ ಬಳಿಕ ಈ ಶೀತಲ ಸ್ಪರ್ಶದಿಂದ ಮರಳಿಸಚೇತವಾಗಿದ್ದವು. ಒಮ್ಮೆಗೆ ಈ ಮೊಕದ್ದಮೆ ತೀರಲಿ, ಆ ಮೇಲೆ ಜಾಲಪಳನ್ನು ಸಮಾಧಾನಪಡಿಸಿ ಕರೆತಂದು ಸುಖದಿಂದ ಕಾಲಕಳೆಯಬೇಕು. ಇದು ವರೆಗೆ ದಾರಿತಪ್ಪಿ ನಡೆಯುತ್ತಿದ್ದ ಜೀವನವನ್ನು ಸರಿದಾರಿಯಲ್ಲಿ ನಡೆಯಿಸಿಕೊಂಡು ಹೋಗಬೇಕು. ಈ ದಿನವನ್ನು ತೋರಿಸಿದ ಆ ದುರ್ಬಲ ಇಚ್ಛೆಯೇ ಅವನಿಗಿಂದು ನವೀನ ಸಂಸ್ಕೃತ ಜೀವನದ ಕನಸನ್ನು ಕಾಣಿಸುತಿತ್ತು. ಇಂತಹ ಜನರು ಕುಡುಕರ ಹಾಗೆ ನಿತ್ಯವೂ ಸಂಕಲ್ಪಗಳನ್ನು ಮಾಡುತ್ತಲೇ ಇರುತ್ತಾರೆ. ಆದರೆ ಆ ಸಂಕಲ್ಪಗಳ ಅಂಶವೇನಾಗುವುದು? ಹೊಸ ಹೊಸ ಪ್ರಲೋಭಗಳು ಮುಂದೆ ಬಂದು, ಸಂಕಲ್ಪದ ಅವಧಿಯು ಮುಂದೆ ಮುಂದೆ ಹೋಗುತ್ತಲೇ ಇರುತ್ತದೆ. ಹೊಸ ಮುಂಜಾವಿನ ನೇಸರು ಉದಯಿಸುವುದೇ ಇಲ್ಲ.

ಒಂದು ತಿಂಗಳು ಕಳೆಯಿತು. ಪೋಲೀಸ ಸಹಯೋಗಿಗಳೊಡನೆ ರಮಾನಾಥನು ಮೋಟರಿನಲ್ಲಿ ಬರುತ್ತಿದ್ದಾಗ ದೇವೀದೀನನ ಮನೆ ಕಂಡಿತು. ಫಕ್ಕನೆ ದೃಷ್ಟಿ ಮಹಡಿಯ ಕಿಡಿಕಿಯ ಕಡೆ ಹೋಯಿತು. ಇದೇನು ದೇವೀದೀನನ ಮನೆಯಲ್ಲಿ ಯುವತಿ ಎಲ್ಲಿಂದ? ಓಹೋ, ಇವಳು ಜಾಲಪ. ಛೇ, ಆಗಲಾರದು.

ಜಾಲಪಳಿಗೆ ನನ್ನ ಪತ್ತೆ ಹೇಗೆ ತಿಳಿಯಬೇಕು. ಇಲ್ಲಲ್ಲ. ಜಾಲಪ ಎಂಬುದರಲ್ಲಿ ಸಂದೇಹವಿಲ್ಲ ಮೋಟರು ನಡೆಯಿಸುತ್ತಿದ್ದ ದರೋಗನಿಗೆಂದನು—ಸ್ವಲ್ಪ ನಿಲ್ಲಿಸಿ, ದೇವೀದೀನನ ಹತ್ತಿರ ಒಂದು ಮಾತು ಹೇಳುವುದಿದೆ.

ದರೋಗನು ಮೋಟರಿನ ವೇಗ ಕಡಿಮೆ ಮಾಡಿದನು. ಆದರೆ ಮರು ಕ್ಷಣ ಏನೋ ಎನಿಸಿ ಹಾರಿಸಿಬಿಟ್ಟನು ರಮಾನಾಥನಿಗೆ ತುಂಬಾ ಕೆಡುಕೆನಿಸಿತು. ಸ್ವಲ್ಪ ಜೋರಿನಲ್ಲಿ ಹೇಳಿದನು—ನಾನು ನಿಮ್ಮ ಕೈದಿಯೆಂದು ಮಾಡಿದಿರಾ?

ದರೋಗನೆಂದನು—ನಾನೇನು ಮಾಡಲಿ? ಇನಸ್ಪೆಕ್ಟರ್‌ಸಾಹೇಬರು ತಡವಾದರೆ ಸಿಟ್ಟು ಮಾಡುತ್ತಾರಲ್ಲ?

ಬಂಗಲೆಗೆ ಬಂದ ಮೇಲೆ ರಮಾನಾಥನಿಗೆ ಒಂದೇ ಚಿಂತೆ ಹೃದಯದಲ್ಲಿ ಬೆಂಕಿ ಎಬ್ಬಿಸಿರುವುದು ಜಾಲಪಳೆಂಬುದು ಖಂಡಿತ. ಅವಳೊಡನೆ ಮಾತಾಡುವುದು ಹೇಗೆ? ಹದಿನೈದು ಮಿನಿಟುಗಳ ತನಕ ಬಾಗಿಲಲ್ಲೇ ನಿಂತು ಯೋಚಿಸಿದನು. ನಿರಾಶನಾಗಿ ಹಾಸುಗೆಯ ಮೇಲೆ ಬಿದ್ದುಕೊಂಡನು.

ತುಸು ಹೊತ್ತಿನಲ್ಲಿ ಎದ್ದು ಹೊರ ಅಂಗಳದಲ್ಲಿ ಅಡ್ಡಾಡಹತ್ತಿದನು. ಬಾಗಿಲಲ್ಲಿ ಚೌಕೀದಾರನು ನಿಂತಿದ್ದನು. ರಮಾನಾಥನಿಗೆ ಅವನಿಗೆ ಗೋಳಿ ಹೊಡೆದು ಕೊಂದುಬಿಡಲೇ ಎನ್ನುವಷ್ಟು ಕ್ರೋಧ ವೇರಿತು. ನನಗೊಂದು ಒಳ್ಳೆಯ ಹುದ್ದೆ ಸಿಗಲಿ ಆಗ ಒಬ್ಬೊಬ್ಬರನ್ನೇ ವಿಚಾರಿಸುವೆನು ನಿನ್ನನ್ನು ಡಿಸ್‌ಮಿಸ್ ಮಾಡದಿರುವುದಿಲ್ಲ ನೋಡು. ಹೇಗೆ ದೆವ್ವನ ಹಾಗೆ ಗಂಟು ಬಿದ್ದಿರುವೆ! ಮುಖನೋಡಿ ಒಮ್ಮೆ! ಆಡಿನ ಬಾಲದ ಹಾಗೆ ತೋರುತ್ತಿದೆ! ವಾಹ್ರೆ ನಿನ್ನ ಪಗಡಿಯೆ! ಬುಟ್ಟಿಹೊತ್ತುಕೆಂಡ ಕೂಲಿಯುವನ ಹಾಗಿದೆ! ಒಂದು ನಾಯಿ ಕೂಗಿದರೆ ಬಾಲ ಮಡಿಚಿಕೊಂಡು ಕಾಲಿಗೆ ಬುದ್ಧಿ ಹೇಳುತ್ತೀರಿ ನೀವು; ಆದರೆ ಆಹಾ ಇಲ್ಲಿ ಎಷ್ಟು ಠೀವಿಯಿಂದ ನಿಂತಿದ್ದೀರಿ! ಕೋಟೆಯ ಕಾವಲಿಗೆ ನಿಂತಂತಿದೆ! ವಾಹ್ ವಾಹ್!

ಒಬ್ಬ ಚೌಕೀದಾರನು ಬಂದು ಹೇಳಿದನು—ಇನ್ಸ್‌ಪೆಕ್ಟರ್ ಸಾಹೇಬರು ಕರೆದಿದ್ದಾರೆ. ರಮಾನು ಸಿಡಿಮಿಡಿಗೊಂಡು ಎಂದನು 'ಈಗ ಪುರಸೊತ್ತಿಲ್ಲ ವೆಂದು ಹೇಳು'

ಮತ್ತೆ ಯೋಚನೆಗಾರಂಬಿಸಿದನು. ಜಾಲಪ ಇಲ್ಲಿ ಹೇಗೆ ಬಂದಿರಬಹುದು? ಒಬ್ಬಳೇ ಬಂದಿರುವಳೇ ಅಥವಾ ಸಂಗಡ ಯಾರಾದರೂ ಇದ್ದಾರೆ?

ಬೇರೆಯವರು ನನ್ನನ್ನು ನೋಡಲಿಕ್ಕೆ ಬರುವುದು ಬೇಡ. ಆದರೆ ಜಾಲಪಳು ನನ್ನೊಡನೆ ಇಲ್ಲಿದ್ದರೆ ಯಾರ ಅಡ್ಡಿ? ನಾಳೆ ಈ ವಿಷಯ ತಿಳಿಯಬೇಕು. ದೇವೀದೀನನೂ ಎಂಥಾ ವಿಚಿತ್ರ ಮನುಷ್ಯ. ಮೊದಲು ದಿನಕ್ಕೆ ನಾಲ್ಕು ಸಾರಿ ಬರುತ್ತಿದ್ದ ಈಗ ಇವನಿಗೇನಾಯಿತು?

ಅಡುಗೆಯವನು ಥಾಲಿಯನ್ನು ಹಿಡಿದುಕೊಂಡು ಬಂದನು. ಒಂದು ಬಗೆಯ ಮಾಂಸ ಮಾತ್ರವಿತ್ತು. ಈಗ ರಮಾನಾಥನಿಗೆ ಹಸಿವಾಗಬೇಕಾದರೆ ರುಚಿಕರ ಭೋಜನವೇ ಬೇಕು. ನಾಲ್ಕೈದು ಬಗೆಯ ಮಾಂಸ ಪದಾರ್ಥಗಳು, ಚಟ್ನಿ ಪಲ್ಯ-ಇವುಗಳೆಲ್ಲಾ ಇಲ್ಲದೆ ತೃಪ್ತಿಯಾಗುವಂತೆಯೇ ಇಲ್ಲ.

ಸಿಟ್ಟಿನಿಂದ ಹೇಳಿದನು--ಇದರಲ್ಲೇನು ತಿನ್ನಲಿಕ್ಕಿದೆ? ನಿನ್ನ ತಲೆ ತಿನ್ನುವುದೆ? ಎದುರಿನಿಂದೊಯ್ಯು. ಹೂಂ.

ಅಡುಗೆಯವನು ಹೆದರಿಕೊಂಡೆಂದನು—ಇಷ್ಟು ಬೇಗದಲ್ಲಿ ಬೇರೇನೂ ಮಾಡುವಂತಿದ್ದಿಲ್ಲ. ನೀವು ಬಂದು ಎರಡು ತಾಸಾಯಿತಷ್ಟೆ

"ಎರಡು ತಾಸೂ ಸಾಲದೆ ನಿನಗೆ?"

"ಸ್ವಾಮಿ, ಇನ್ನೇನು ಅರಿಕೆಮಾಡಲಿ?"

"ಸುಮ್ಮನೆ ಒದರ ಬೇಡ"

"ಸ್ವಾಮಿ...."

"ಒದರಬೇಡ ಎಂದೆನಲ್ಲವೆ? ಡ್ಯಾಮ್!"

ಅಡುಗೆಯವನು ಮತ್ತೆ ಮಾರ್ನುಡಿಯದೆ ಸೀಸೆಯನ್ನು ತಂದ. ಛರ್ಫನ್ನು ಗ್ಲಾಸಿನಲ್ಲಿಹಾಕಿ ಮೇಜಿನ ಮೇಲಿಟ್ಟು ಹಿಂದೆಸರಿದ. ಶರಾಬು ಕುಡಿದಂತೆ ರಮಾನಾಥನ ಕೋಪವು ಇನ್ನಷ್ಟು ಏರುತ್ತಿತ್ತು. ಕೆಂಗಣ್ಣಿನಿಂದ ಬಡ ಅಡುಗೆಯವನನ್ನು ನೋಡಿಹೇಳಿದನು—ನಿನ್ನನ್ನು ಕಿವಿಹಿಡಿದು ಹೊರಗೆಹಾಕುವೆ ತಿಳಿಯಿತೆ? ಈಗ! ಈ ನಿಮಿಷ!

ಕೊನೆಯ ಗ್ಲಾಸನ್ನೂ ಖಾಲಿಮಾಡಿ ರಮಾನಾಥನು ಅಂಗಳದಲ್ಲಿ ಅತ್ತಿತ್ತ ತಿರುಗಹತ್ತಿದನು ಫಕ್ಕನೆ ಬೇಲಿಯ ಕಡೆನೋಡಿದನು. ಯಾರೋ ನಿಂತಂತೆ ಕಂಡಿತು ಎಲ್ಲಿಯಾದರೂ ತನ್ನನ್ನು ಕೊಲ್ಲಲಿಕ್ಕೆ ಬರುವ ಷಡ್ಯಂತ್ರಕಾರರಲ್ಲೊಬ್ಬನಿರಬಹುದೆ ಎಂದು ಸಂದೇಹವಾಯಿತು. ಅಷ್ಟರಲ್ಲಿ ಒಂದು

ಮೋಟಾರಿನ ಬೆಳಕಿನಲ್ಲಿ ಆವ್ಯಕ್ತಿ ಹೆಂಗಸೆಂದು ತಿಳಿದು ತುಸು ಧೈರ್ಯವಾಯಿತು. ಆದರೆ ವೇಷ ಬದಲಿಸಿ ಬಂದ್ದಿದರೆ! ಅವನು ಹಿಂದೆಹಿಂದೆ ಹೋದಂತೆ ಆಛಾಯೆ ಮುಂದೆಮುಂದೆ ಬರತೊಡಗಿತು. ಬೇಲಿಯ ಬಳಿ ಬಂದು ಒಂದು ಲಕೋಟೆಯನ್ನು ಒಳಗೆ ಬಿಸಾಡಿ ಕತ್ತಲಲ್ಲಿ ಲೀನವಾಯಿತು. ರಮಾನಾಥನ ಹಾರಿ ಆ ಲಕೋಟೆಯನ್ನು ತೆಗೆದನು. ನೇರವಾಗಿ ಕೋಣೆಯೊಳಗೆ ಹೋಗಿ ಕಿಡಿಕಿ ಬಾಗಿಲುಗಳನ್ನೆಲ್ಲ ಮುಚ್ಚಿಕೊಂಡು ಓದಲಿಕ್ಕೆ ಹಿಡಿದನು. ಬರೆಹವನ್ನು ಕಂಡೊಡನೆ ಯಾರೆಂದು ತಿಳಿಯಿತು. ಒಂದೇ ಉಸಿರಿನಲ್ಲಿ ಇಡಿ ಕಾಗದವನ್ನು ಓದಿ ಮುಗಿಸಿದನು. ಒಂದು ನಿಟ್ಟುಸಿರು ಹೊರಟಿತು. ಆದರ ಜತೆಗೆ ಆ ಆರುತಿಂಗಳಿಂದ ಅವನ ಆತ್ಮವನ್ನೊತ್ತಿಹಿಡಿದು ಅವನ ಜೀವನ ರಕ್ತವನ್ನು ಹೀರುತ್ತಲಿದ್ದ ಆ ಭೀಷಣ ಭಾರವು ತೊಲಗಿ ಹೋಯಿತು. ಇಷ್ಟೊಂದು ಸ್ಫೂರ್ತಿಯೂ, ಗರ್ವವೂ, ಆತ್ಮವಿಶ್ವಾಸವು ಆತನಲ್ಲಿ ಈ ಹಿಂದೆ ಉಂಟಾಗಿದ್ದಿಲ್ಲ. ದರೋಗನ ಬಳಿ ಹೋಗಿ ನನಗಿನ್ನು ಈ ಮೊಕದ್ದಮೆಯಲ್ಲಿ ಯಾವ ಸಂಬಂಧವೂ ಇಲ್ಲವೆಂದು ಹೇಳಿ ಬಿಡಬೇಕೆಂದು ತೋರಿತು. ಆದರೆ ವ ರಕ್ಷಣ ಅಪಯಶ ಒದಗುವುದು ಎಂತೂ ಬಂದೇಯಿತ್ತು, ಇನ್ನು ಪರಿಶ್ರಮದ ಫಲವನ್ನೇಕೆ ತೊರೆಯಲಿ? ನಾನು ಹೇಳಿಕೆ ಬದಲಿಸುವುದೇ ಬೇಡ, ಇವರಿಗೆ ಹಿಟ್ಟುಬೇಳೆಯ ಬೆಲೆ ತಿಳಿದೀತು. ಮಕ್ಕಳಿರಾ! ಇಷ್ಟುದಿನವೂ ನನ್ನನ್ನು ಮಂಕುಗೊಳಿಸಿದಿರಲ್ಲವೆ?

ಆದರೆ ಬೇಡ. ಇವರು ನನಗೆ ಮೋಸ ಮಾಡಿದಹಾಗೆ ನಾನೂ ಇವರ ಮೇಲೊಂದು ಕಪಟವನ್ನು ಹೂಡುವೆ. ಒಳ್ಳೆಯ ನೌಕರಿಯ ಭರವಸೆಯನ್ನು ಕಾಗದ ಪತ್ರದಲ್ಲಿ ಕೊಡದೆ ಸಾಕ್ಷಿ ಹೇಳಲಾರೆನೆಂದು ಹೇಳಿಬಿಡುವೆ. ಇದನ್ನು ದರೋಗರಿಗೆ ಈಗಲೇ ತಿಳಿಸುವೆನೆಂದು ಒಮ್ಮೆ ಹೊರಟನು. ಆದರೆ ಮತ್ತೆ ಏನೋ ಯೋಚಿಸಿ ನಿಂತನು. ಜಾಲಪಳಮೇಲೆ ಇಷ್ಟು ಅನುರಾಗ, ಶ್ರದ್ಧೆಗಳು ಅವನಿಗೆ ಇದಕ್ಕೆ ಹಿಂದೆ ಎಂದೂ ಉಂಟಾದ್ದಿಲ್ಲ. ದೇವತೆಗಳು ತನ್ನ ಆತ್ಮರಕ್ಷಣೆಗೆಂದು ಕಳುಹಿದ ದೇವೀಯೋ ಆಕೆ ಎಂದವನು ಭಾವಿಸಿದನು. ಒಂದು ಬಾರಿ ಅವಳನ್ನು ನೋಡಬೇಕೆಂಬ ಇಚ್ಛೆ ನಿಮಿಷನಿಮಿಷಕ್ಕೆ ಹೆಚ್ಚಿತು.

ಹತ್ತು ಹೊಡೆದಿತ್ತು. ರಮಾನಾಥನು ಕೋಣೆಯ ದೀಪವನ್ನು ನಂದಿಸಿ, ಕಿಡಿಕಿಯನ್ನು ಮುಚ್ಚಿದನು. ಮೆಲ್ಲನೆ ಎದ್ದು ಹೊರಅಂಗಳಕ್ಕೆ

ಒಂದು ಕತ್ತಲಲ್ಲಿ ಕೆಲವು ಕ್ಷಣಗಳವರೆಗೆ ನಿಂತುಕೊಂಡನು ಜಾಲಪಳಿನನ್ನು ತೋಟದಲ್ಲಿ ಇದ್ದಿರಬಹುದೆಂಬುದು ಅವನ ಆಸೆಯಾಗಿತ್ತು. ತಂತಿಯ ಬೇಲಿಯನ್ನು ನುಸುಳಿ ಹೋಗುವುದೆಂದು ನಿರ್ಧರಿಸಿದನು. ವಸ್ತ್ರವನ್ನೆಲ್ಲ ಕಟ್ಟಿಕೊಂಡು ಕಾಲನ್ನಾಚೆ ಹಾಕಿದನು. ಆದರೆ ವಸ್ತ್ರವು ಮುಳ್ಳಿಗೆ ಸಿಲುಕಿಕೊಂಡಿತು. ಧೈರ್ಯಮಾಡಿ ತಲೆಯನ್ನಾಚೆಕಡೆ ಹೊಗಿಸಿದನು ಅಂಗಿಯ ಕೈಯೂ ಸಿಕ್ಕಿಕೊಂಡಿತು. ಒಟ್ಟು ಪೇಚಾಟಕ್ಕೆ ಬಿದ್ದನು ವಸ್ತ್ರವನ್ನು ಎಳೆದನು. ಎಳೆವಭರದಲ್ಲಿ ಬೆನ್ನಿಗೆ ಒಂದೆರಡು ಗಾಯವಾಯಿತು ಆದರೇನು? ಹೇಗೂ ಒಮ್ಮೆಗೆ ಬೇಲಿಯಿಂದ ಪಾರಾದನು ಉಟ್ಟವಸ್ತ್ರವೆಲ್ಲ ಹರಿದುಹೋಗಿತ್ತು. ಅಂಗಿಯನ್ನು ತೆಗೆದೆಸೆದನು ಅದರಬದಲು ಶಾಲನ್ನು ಹೊದ್ದುಕೊಂಡು ತೋಟದಲ್ಲಿ ಅತ್ತಿತ್ತ ಅಲೆದನು. ಮೆಲ್ಲನೆ ಒಂದೆರಡುಬಾರಿ ಕೂಗಿದನು. ಮಾರುತ್ತರವಿಲ್ಲದುದನ್ನು ಕಂಡು ನಿರಾಶನಾದರೂ ಮೋಹವು ಅವನನ್ನು ಬಿಡಲಿಲ್ಲ. ನೇರವಾಗಿ ತೋಟವನ್ನು ದಾಟಿ ಬೀದಿಹಿಡಿದನು. ಬಂಗಲೆಯಿಂದ ಹೊರಬಿದ್ದಿರುವೆನೆಂದು ಯಾರಿಗಾದರೂ ಗೊತ್ತಾದರೆ ಆಗಲಿ. ಪೋಲೀಸರು ನನಗೇನು ಮಾಡಬಲ್ಲರು?

ನಡುರಾತ್ರಿಕಳೆದಿತ್ತು. ದೇವೀದೀನನು ಬಂದು ಆರೆತಾಸಾಗಿರಬಹುದು. ದೇವೀದೀನನಿಗೆ ಮೊದಲು ಅವನ ಗುರುತಾಗಲಿಲ್ಲ. 'ಯಾರದು?' ಎಂದು ಕೇಳಿದನು. ಕೂಡಲೇ ತಿಳಿಯಿತು. ರಮಾನಾಥನ ಕೈಹಿಡಿದು ಕೇಳಿದನು— ಯಾರು ರಮಾ, ಒಳ್ಳೆಯವೇಷ ನಿನ್ನದು. ಬಟ್ಟೆಏನಾಯಿತು?

"ಬೇಲಿಯಲ್ಲಿ ಹರಿದುಹೋಯಿತು."

"ರಾಮ್‌ರಾಮ್, ಏನೂ ಪೆಟ್ಟಾಗಿಲ್ಲವಷ್ಟೆ."

"ಒಂದೆರಡು ಗಾಯುಗಳಿರಬಹುದು. ಪರವಾಇಲ್ಲ."

"ವಧುವಿನ ಪತ್ರಸಿಕ್ಕಿತಲ್ಲವೆ?"

"ಹಾಂ, ಆಗಲೇಸಿಕ್ಕಿತು. ಅವಳೂ ನಿನ್ನ ಸಂಗಡ ಇದ್ದಳೆ?"

'ಅವಳು ನನ್ನ ಸಂಗಡ ಇದ್ದುದಲ್ಲ. ನಾನು ಅವಳ ಜತೆಯಲ್ಲಿದ್ದೆನೆನ್ನು. ನಿನ್ನನ್ನು ಮೋಟರಿನಲ್ಲಿ ನೋಡಿದಂದಿನಿಂದ ಹೋಗುವ, ಹೋಗುವ ಎಂದು ಜಪಮಾಡುತ್ತಿದ್ದಳು.'

"ನೀನು ಕಾಗದ ಹಾಕಿದ್ದಿಯಾ?"

"ಇಲ್ಲ. ಅವಳು ಬಂದಾಗ ನನಗೂ ಆಶ್ಚರ್ಯವಾಯಿತು. ಹಿಂದಿನಿಂದ ಅವಳೇ ಹೇಳಿದಳು. ಆ ಚತುರಂಗದ ನಕ್ಷೆಯ ಆಟ ಹೂಡಿದವಳು ಅವಳೇ."

ರಮಾನಾಥನಿಗೆ ಲಜ್ಜೆ ಮಿತಿಮೀರಿತು. ಭಯಂಕರ ಸೋಲು. ಅದೂ ಹೀಗೆ!

ಮೇಲೆಹೋಗಿದ್ದ ಮುದುಕಿಯನ್ನು ಕರೆದು ದೇವೀದೀನನೆಂದನು— ಯಾರಲ್ಲಿ, ಏನುಮಾಡುತ್ತೀಯೆ!? ವಧುವನ್ನು ನೋಡಲಿಕ್ಕೆ ಯಾರೋ ಬಂದಿದ್ದಾರೆಂದು ಹೇಳವಳಿಗೆ

ಹೇಗೆಂದು ಅವನು ರಮಾನಾಥನ ಕೈಹಿಡಿದು ಹೇಳಿದನು—ನಡಿ, ನಿನ್ನನ್ನು ಜಡ್ಜರ ಮುಂದೆ ಹಾಜರುಪಡಿಸುತ್ತೇನೆ. ಓಡಿ ಆರುತಿಂಗಳಾಯಿತು. ವಾರಂಟಿಲ್ಲದೆಯೆ ಸಿಕ್ಕಿದಿಯಲ್ಲವೆ ಹೀಗೆ ಹಿಡಿಯುವುದು ಪೋಲೀಸರಿಗೂ ಸಾಧ್ಯವಿಲ್ಲ.

ರಮಾನಾಥನಿಗೆ ಒಮ್ಮೆ ಸಂಕೋಚವೆನಿಸಿತು ಮೆಟ್ಟಲಿನ ಹತ್ತಿರ ನಿಂತುಬಿಟ್ಟನು.

"ಯಾಕೆನಿಂತಿ?"

ರಮಾನಾಥನು ತಲೆತುರಿಸಿಕೊಂಡು ಹೇಳಿದನು—ಇಲ್ಲ, ಏನೂಇಲ್ಲ. ಬಂದೆ ಮುದುಕಿ ಮೇಲಿಂದ ಅಂದಳು—ಕೇಳಿ, ಯಾರವನು? ಎಲ್ಲಿಂದ ಬಂದಿರುವನು? ದೇವೀದೀನನು ವಿನೋದಕ್ಕಾಗಿ ಹೇಳಿದನು—ಹೇಳುವುದಕ್ಕಿರುವುದನ್ನೆಲ್ಲಾ ವಧುವಿನ ಹತ್ತಿರವೇ ಹೇಳುತ್ತಾನಂತೆ.

"ಏನಾದರೂ ಪತ್ರತಂದಿದ್ದಾನೆಯೆ?"

"ಇಲ್ಲ."

ಮೌನ. ದೇವೀದೀನ ಒಂದುಕ್ಷಣನೋಡಿ ಆಮೇಲೆಂದನು—ಹಿಂದೆ ಹೋಗೆಂದು ಹೇಳಲೆ?

ಜಾಲಪಳು ಮೆಟ್ಟಲಬಳಿ ಬಂದು ಕೇಳಿದಳು—ಯಾರವನೆಂದು ಹೇಳಬಾರದೆ?

"ಬಹಳದೂರದಿಂದ ಬಂದೆನೆಂದೆನ್ನುತ್ತಾನೆ."

"ಎಲ್ಲಿರುವನು?"

"ಇಲ್ಲೇ ನಿಂತಿದ್ದಾನೆ."

"ಸರಿ, ಕರೆತನ್ನಿ"

ರಮಾನಾಥನು ಶಾಲುಹೊದ್ದುಕೊಂಡು ನಾಚಿಕೆಯಿಂದಲೂ ಭಯದಿಂದಲೂ ನಿಚ್ಚಣಿಕೆಯನ್ನೇರಿದನು. ಅವನನ್ನು ಕಂಡೊಡನೆ ಜಾಲಪ ಗುರುತು ಹಿಡಿದಳು. ಒಡನೆ ಎರಡುಹೆಜ್ಜೆ ಹಿಂಜರಿದಳು. ದೇವೀದೀನನು ಅಲ್ಲಿಲ್ಲದಿರುತ್ತಿದ್ದರೆ ಎರಡುಹೆಜ್ಜೆ ಮುಂದೆ ಬರುತ್ತಿದ್ದಳು.

ಅವಳ ಕಣ್ಣುಗಳಲ್ಲಿ ಇಂತಹ ಗರ್ವವೂ, ಅಂಗಾಂಗಗಳಲ್ಲಿ ಇಂತಹ ಚಪಲತೆಯೂ, ಕಪೋಲಗಳಲ್ಲಿಷ್ಟು ಪರಿಳಿತವೂ, ಹೃದಯದಲ್ಲಿಂತಹ ಮೃದುಕಂಪನವೂ ಹಿಂದೆಂದೂ ಉಂಟಾಗಿದ್ದಿಲ್ಲ. ಅವಳ ತಪಸ್ಸು ಇಂದಿಗೆ ಫಲಿಸಿತು.

[೩೬]

ವಿಯೋಗಿಗಳ ಮಿಲನದ ರಾತ್ರಿಯು ಪಸುಟಿಗರ ಬೀಡಿನಇರುಳಂತೆ ಮಾತಿನಲ್ಲೇ ಕಳೆದು ಹೋಗುವುದು. ರಮಾನಾಥನಿಗೂ ಜಾಲಪಳಿಗೂ ಕಂತವ್ಮು ಆರುತಿಂಗಳಿನ ಕತೆಯನ್ನು ಹೇಳುವುದಿತ್ತು. ತನ್ನ ಗೌರವವನ್ನು ಹೆಚ್ಚಿಸಿಕೊಳ್ಳುವುದರ ಸಲುವಾಗಿ ರಮಾನಾಥನು ತನ್ನ ಕಷ್ಟಗಳನ್ನು ಹಿರಿಹಿರಿದಾಗಿ ಬಣ್ಣಿಸಿದನು. ಜಾಲಪಳು ಹೇಳಿದ ಕತೆಯಲ್ಲಿ ಕಷ್ಟದ ಪ್ರಸ್ತಾಪವೇ ಇಲ್ಲ. ಏತಕ್ಕೆಂದರೆ ಪತಿಗೆ ದುಃಖ ವುಂಟುಮಾಡುವುದು ಆಕೆಯಿಂದಾಗದು. ಆದರೆ ರಮಾನಾಥನಿಗೆ ಆಕೆಗೆ ಅಳುಬರಿಸುವುದರಲ್ಲಿಯೇ ಒಂದು ಬಗೆಯ ಸಂತೋಷವಾಗುತ್ತಿತ್ತು. ತಾನು ಏಕೆ ಓಡಿದೆ ಹೇಗೆ ಓಡಿದೆ-ಮುಂತಾದ ಎಲ್ಲ ವಿವರಗಳನ್ನೂ ಉಪ್ಪುಕಾರ ಹಚ್ಚಿ ಆಕೆಯ ಕೋಮಲ ಮನಸ್ಸಿನಮೇಲೆ ಚೆನ್ನಾಗಿ ಪರಿಣಾಮವಾಗುವಂತೆ ಉಸುರಿದನು. ಚತುರಂಗದ ವಿಷಯದಲ್ಲಿಯೂ ಸೋಲು ಅವನಿಗೇ ಆದುದರಿಂದ, ತನ್ನ ಕಷ್ಟಗಳನ್ನು ಬಣ್ಣಿಸುವಾಗ ಇಲಿಯನ್ನು ಹುಲಿಮಾಡದಹೊರತು ಬೇರೆ ಉಪಾಯವಾದರೂ ಏನಿದ್ದಿತು?

ಜಾಲಪಳು ಬಿಕ್ಕುತ್ತಾ ಹೇಳಿದಳು—ಇಷ್ಟೆಲ್ಲ ಕಷ್ಟಗಳನ್ನು ಸಹಿಸುವಾಗಲೂ ನಿಮಗೆ ಮನೆಗೊಂದು ಪತ್ರಬರೆಯುವಾ ಎಂದು ತೋರಲಿಲ್ಲವೇ? ಬರೆಯುವ ಅಗತ್ಯವೇನಿತ್ತು? ನಮಗೂ ನಿಮಗೂ ಯಾವಸಂಬಂಧ? ಮುಖದ ಮೇಲಿನ ಪ್ರೀತಿ ಎದುರಿಗಿದ್ದಾಗ ಮಾತ್ರ. ಕಣ್ಣಿಂದ ಅಡ್ಡವಾದೊಡನೆ ಬಿಟ್ಟವೇ ಅಡ್ಡನಿಂತಂತೆ. ಅಲ್ಲವೆ?

“ಹಾಗೇನೂ ಅಲ್ಲ, ಜಾಲಪಾ” ಮನೆಯಿಂದ ನಾನೇ ಓಡಿಹೋಗಿ ನಾಲ್ಕುಕಾಸು ಕೈಯಲ್ಲಿ ಮಾಡಿಕೊಳ್ಳದೆ ಏನೆಂದು ಪತ್ರಬರೆಯಲಿ ಹೇಳು. ಅಷ್ಟೂ ನಾಚಿಕೆಗೇಡಿಯೆನಾನು?”

“ಚೆನ್ನಾಗಿ ಹೇಳಿದಿರಿ. ಮನುಷ್ಯನಿಗಿಂತಲೂ ಹಣಮಿಗಿಲಲ್ಲವೆ? ನಾವಂತೂ ಹಣಕ್ಕೆ ಬಾಯಿಬಿಡತಕ್ಕವರೇ. ಕಳವುಮಾಡಿ, ಸುಲಿಗೆಮಾಡಿ, ಕೃತಕನೋಟನ್ನು ತಯಾರಿಸಿ, ಸುಳ್ಳು ಸಾಕ್ಷಿಹೇಳಿ ಅಥವಾ ಬಿಕ್ಕೆಬೇಡಿ, ಹೇಗೆ ಏನು ಬೇಕಾದರೂಮಾಡಿ, ರೂಪಾಯಿತಂದು ನಮ್ಮಕೈಯಲ್ಲಿಹಾಕಿ ಎಂದಿದ್ದೆವಲ್ಲವೆನಾವು? ಆಹಾಹಾ, ನಮ್ಮ ಸ್ವಭಾವವನ್ನು ಅರ್ಥಮಾಡಿಕೊಂಡ ಬಗೆಯು! ಸುಮ್ಮಗಲ್ಲ ತುಳಸೀದಾಸರೆಂದುದು— ಸ್ವಾರ್ಥ್ ಲಾಇ ಕರಹಿಂ ಸಬ್‌ಪ್ರೀತಿ!

“ಹಾಗಲ್ಲಪ್ರಿಯೇ, ನನ್ನ ಯೋಚನೆಬೇರೆ. ಈ ಪರದೇಸಿ ವೇಷದಲ್ಲಿ ನಿಮ್ಮನ್ನೆಲ್ಲ ಹೇಗೆ ಕಾಣುವೆನೋ ಎಂದು, ಎಲ್ಲರಿಗಿಂತಲೂ ಹೆಚ್ಚಾಗಿ ನಿನಗೆ ಹೆದರುತ್ತಿದೆ. ನೀನು ನನ್ನನ್ನು ಎಂತಹ ಕಪಟಿಯೆಂದೂ, ಸುಳ್ಳುಗಾರನೆಂದೂ, ಅಂಜುಬುರುಕನೆಂದೂ ಬಗೆಯುತ್ತೀಯೋ ಎಂದೆಣಿಸುತ್ತಿದ್ದೆ ರೂಪಾಯಿಯ ಗಂಟನ್ನು ಕಂಡು ನೀನು ತುಸು ಹದಬೀಳಬಹುದೆಂಬ ವಿಚಾರವೂ ಪ್ರಾಯಶಃ ನನ್ನಲ್ಲಿತ್ತು”

“ನೀವು ಹಣದಗಂಟನ್ನುತಂದಿದ್ದರೆ ನಾನದನ್ನು ಬೆರಳಿಂದಲೂ ಮುಟ್ಟುತ್ತಿದ್ದಿಲ್ಲ ನಿಮ್ಮದೃಷ್ಟಿಯಲ್ಲಿ ನಾನೆಷ್ಟುನೀಚಳಿರುವೆ ಸ್ವಾರ್ಥಿನಿಯಿರುವೆ, ಎಂಬುದು ನನಗಿಂದು ತಿಳಿಯಿತು ಆದರಲ್ಲಿ ನಿಮ್ಮತಪ್ಪೇನೂ ಇಲ್ಲ, ಎಲ್ಲವೂನನ್ನದೇ ಗಂಡನಿಗೆ ಮೂವತ್ತು ನಾಲ್ವತ್ತು ರೂಪಾಯಿಗಿಂತ ಹೆಚ್ಚು ಸಂಪಾದನೆ ಇಲ್ಲವೆಂದು ಗೊತ್ತಿದ್ದೂ, ಯಾವಸ್ತ್ರೀಯು ನಿತ್ಯವೂ ಎರಡು ಮೂರು ರೂಪಾಯಿಗಳನ್ನು ವಿಲಾಸಕ್ಕಾಗಿ ವೆಚ್ಚಮಾಡುತ್ತಾ ಸಾವಿರಾರು ರೂಪಾಯಿಯ ಆಭರಣಗಳನ್ನು ತೊಡಬೇಕೆಂಬ ಆಸೆಮಾಡುವಳೋ ಅಂಥವಳು ತನ್ನ ಮತ್ತು ಪತಿಯ ವಿನಾಶಕ್ಕೆ ಕೈಹಚ್ಚಿರುವಳೆಂದು ತಿಳಿಯಬೇಕು. ನನ್ನನ್ನು ನೀವು ಧನಲೋಲುಪಳೆಂದು ಬಗೆದುದು ಚೆನ್ನಾಯಿತು; ಒಮ್ಮೆ ಸುಟ್ಟುಕೊಂಡಬೆಂಕಿಗೆ ಇನ್ನು ಬೀಳಲಾರೆ. ಇಷ್ಟರಲ್ಲಿಯೇ ನನ್ನ ಪಾಪಕ್ಕೆ ತಕ್ಕಪ್ರಾಯಶ್ಚಿತ್ತ ದೊರೆಯಿತು; ಇನ್ನುಳಿದುದನ್ನು ಬಾಳ್ವೆಕೊನೆಗೊಳ್ಳುವುದ

ರೊಳಗೆಮಾಡಿ ತೀರಿಸುವೆ ಭೋಗವಿಲಾಸದ ಅಭಿಲಾಷೆ ತೀರಿತೆಂದಲ್ಲ, ಆಭರಣಗಳಮೇಲೆ ಒಲವು ಕುಂದಿತೆಂದಲ್ಲ; ಪುರುಷಾರ್ಥ, ಪರಿಶ್ರಮ ಸದುದ್ಯೋಗಗಳ ಹಾದಿಯನ್ನುಬಿಟ್ಟು ಆತ್ಮವನ್ನು ಕಲುಷಿತವನ್ನಾಗಿಸಿ ನೀವು ಒಂದು ಲಕ್ಷರೂಪಾಯಿತಂದು ನನ್ನಮುಂದೆ ಸುರಿದರೂ ನಾನದನ್ನು ಒದ್ದು ಚೆಲ್ಲುವವಳೇಹೊರತು ಕಣ್ಣೆತ್ತಿಯೂ ನೋಡುವೆನೆಂದು ಬಗೆಯಬೇಡಿ. ನೀವು ಪೋಲೀಸರ ಸಾಕ್ಷಿಹೇಳಿರುವಿರೆಂದು ಗೊತ್ತಾದ ನಿಮಿಷವೇ ನಿಮ್ಮ ಬಂಗಲೆಯನ್ನು ಹುಡುಕಿಕೊಂಡುಹೊರಟೆ, ಆದರೆ ನೀವಿರಲಿಲ್ಲ. ಇಷ್ಟೊಂದು ಜನರ ರಕ್ತದ ಹೊಣೆಯನ್ನು ನಾನು ವಹಿಸಲಾರೆ. ನ್ಯಾಯಾಲಯದಲ್ಲಿ ಪೋಲೀಸರ ಕೈಗೆ ಸಿಕ್ಕು ನಾನು ಹಾಗೆ ಹೇಳಿದೆನೇಹೊರತು, ನನಗೂ ಈ ಮೊಕದ್ದಮೆಗೂ ಯಾವತರದ ಸಂಬಂಧವೂ ಇಲ್ಲವೆಂದು ಕಟ್ಟುನಿಟ್ಟಾಗಿ ಹೇಳಿಬಿಡಿ."

"ನಿನ್ನ ಪತ್ರಸಿಕ್ಕಿದ ಹೊತ್ತಿನಿಂದಲೂ ಇದೇಯೋಚನೆಯಲ್ಲಿರುವೆ. ಏನುಮಾಡಬೇಕೆಂದೇ ತೋರುವುದಿಲ್ಲ. ಒಮ್ಮೆ ಹೇಳಿದಮಾತನ್ನು ಅಲ್ಲಗಳೆಯುವಷ್ಟು ಸಾಹಸ ನನ್ನಲ್ಲಿಲ್ಲ"

"ಹೇಳಿಕೆ ಬದಲಿಸಲೇಬೇಕು"

"ಅದು ಹೇಗೆಮಾಡಲಿ? ಹೇಳು"

"ಇದರಲ್ಲಿ ಕಷ್ಟವೇನುಬಂತು? ಮುನಿಸಿಪಾಲಿಟಿಯ ಮೊಕದ್ದಮೆ ಏನೂ ಇಲ್ಲವೆಂದಮೇಲೆ ಭಯವೇತರದು?"

"ಭಯವಲ್ಲದಿದ್ದರೂ ಲಜ್ಜೆ ಇದೆಯಲ್ಲವೆ? ಯಾವಬಾಯಿಯಿಂದ ಒಂದು ಮಾತನ್ನು ಉಸುರಿದೆನೋ, ಅದನ್ನು ಅದೇ ಬಾಯಿಯಿಂದ ಹೇಗೆ ಅಲ್ಲವೆನ್ನಲಿ? ಅಷ್ಟೇ ಅಲ್ಲದೆ ಒಂದು ಹುದ್ದೆಯೂ ಸಿಗುವುದು. ಜೀವನವು ಸುಖಮಯವಾಗಿಸಾಗುವುದು, ಹೀಗಿದ್ದು ಲಕ್ಷ್ಮಿಯನ್ನು ತ್ಯಜಿಸಿ ಗಲ್ಲಿಗಲ್ಲಿ ಅಲೆಯುತ್ತಿರುವುದು ಜಾಣರ ಲಕ್ಷಣವಲ್ಲವೆಂದು ನನ್ನನಂಬಿಗೆ.

ಜಾಲಪಳು ಉತ್ತರ ಕೊಡಲಿಲ್ಲ. ಮನುಷ್ಯನಲ್ಲಿ ಸ್ವಾರ್ಥದ ಮಾತ್ರೆ ಎಷ್ಟು ಅಧಿಕವಾಗಿರುವುದೆಂದು ಯೋಚಿಸುತ್ತಿದ್ದಳು.

"ರಮಾನಾಥನು ಧೃಷ್ಟತೆಯಿಂದ ಮರಳಿ ಎಂದನು—ಇನ್ನೊಂದು ಮಾತಿದೆ ನಾನು ನನ್ನ ಹೇಳಿಕೆಯನ್ನು ಬದಲಿಸಿದೆನೆಂದೇ ಮಾಡುವ. ಆಗ ನಿರಪರಾಧಿಗಳಿಗೆ ಶಿಕ್ಷೆ ತಪ್ಪುವುದೆಂದು ನಾನು ಹೇಳಲಾರೆ. ಇನ್ನೊಬ್ಬನನ್ನಾದರೂ ಸಾಕ್ಷಿಗಾರನನ್ನಾಗಿ ಮಾಡಿ ಪೋಲೀಸರು ತಮ್ಮ ಕಾರ್ಯಸಾಧಿಸದಿರುತ್ತಾರೆಯೆ? ನಾನೊಬ್ಬ ಸುಮ್ಮನೆ ನಿಷ್ಠುರಕ್ಕೆ ಸಿಕ್ಕಂತಾಗುವುದು.

"ನಾಚುಕೆ ಬಿಟ್ಟವರಂತೆ ಮಾತಾಡುವಿರೇಕೆ? ಅನ್ನದ ಸಲುವಾಗಿ ನಿರಪರಾಧಿಗಳ ಕುತ್ತಿಗೆ ಹಿಚುಕಲು ಹಿಂಜರಿಯದಷ್ಟು ಹೀನಸ್ಥಿತಿಯೊದಗಿತೆ? ನಾನಿದನ್ನು ಸಹಿಸಲಾರೆ. ಕೂಲಿ-ಕುಂಬಳಿ ಮಾಡುವುದಾಗಬಹುದು, ಹೊಟ್ಟೆಗಿಲ್ಲದೆ ಸಾಯಬಹುದು ಎಂತಹ ದೊಡ್ಡ ವಿಪತ್ತನ್ನೂ ಹೊರಬಹುದು. ಯಾವುದನ್ನು ಬೇಕಾದರೂ ಮಾಡಲು ನಾನು ಸಿದ್ಧಳು ಆದರೆ ಒಬ್ಬರಿಗೆ ಕೆಡಕನ್ನುಂಟುಮಾಡಿ ನನಗೆ ಸ್ವರ್ಗಾಧಿಪತ್ಯದೊರೆಯುವದಾದರೂ ಆ ಪದವಿ ನನಗೆ ಬೇಡವೇಬೇಡ."

"ನಾನು ಇಲ್ಲಿ ಕೂಲಿಯುವನಾಗಬೇಕೆಂದು ನಿನಗೆ ಬಯಕೆಯೆ?"

"ಹಾಗೆಂದು ನನ್ನ ಅಭಿಪ್ರಾಯವಲ್ಲ ಆದರೆ ಕೂಲಿಕೆಲಸವಾದರೂ ಬೇಕು, ನೆತ್ತರಿಂದ ತೊಯ್ದ ರೊಟ್ಟಿತಿನ್ನುವುದು ಬೇಡ"

ರಮಾನಾಥನು ಮತ್ತೆ ಶಾಂತನಾಗಿ ಹೇಳಿದನು—ಜಾಲಪಾ, ನೀನು ನನ್ನನ್ನು ಎಷ್ಟು ನೀಚನೆಂದು ಬಗೆದಿರುವಿಯೋ ಅಷ್ಟು ನೀಚನು ನಾನಲ್ಲ. ಕೆಟ್ಟಮಾತು ಎಲ್ಲರಿಗೂ ಕೆಟ್ಟದೆನಿಸುವುದು. ನನಗೇನು ಇವರ ಕೊರಳು ಕೊಯ್ಯಬೇಕೆಂದು ಆಸೆಯೆ? ಆದರೇನು ಮಾಡಲಿ? ಪರಿಸ್ಥಿತಿಯು ದೆಸೆಯಿಂದ ನಿಸ್ಸಹಾಯನಾಗಿರುವೆ ಒದೆಗಳನ್ನು ತಿನ್ನುತ್ತಾ ಜೀವಿಸಿಕೊಂಡಿರುವುದು ನನಗೆ ಒಗ್ಗುವುದಿಲ್ಲ. ಪೋಲೀಸರ ಕೋಪಕ್ಕೂ ಪಾತ್ರನಾಗಲಾರೆ ಪ್ರಪಂಚದಲ್ಲಿ ಆದರ್ಶದಂತೆ ನಡೆಯುವವರು ಎಷ್ಟುಮಂದಿ ಇರಬಹುದು? ನನಗೆ ಸಾಧ್ಯವಾಗದಷ್ಟು ಏರಿಕೆಯಲ್ಲಿ ನನ್ನನ್ನೇಕೆ ಇರಿಸುತ್ತೀಯೆ?"

ಜಾಲಪಳು ತೀಕ್ಷ್ಣ ಸ್ವರದಲ್ಲೆಂದಳು—ಕೊಲ್ಲುವ ಶಕ್ತಿ ಇರುವ ಮನುಷ್ಯನಲ್ಲಿ ಕೊಲ್ಲದೆ ಇರುವ ಶಕ್ತಿಯಿಲ್ಲದಿರುವುದು ಆಶ್ಚರ್ಯದ ಸಂಗತಿ. ಓಡುವ

ವನಲ್ಲಿ ನಿಲ್ಲುವಶಕ್ತಿಯಿಲ್ಲವೆಂದರೆ ನಂಬುವವರಾರು? ಮನಸ್ಸಿದ್ದರೆ ಮಾರ್ಗ ತಾನಾಗಿತೋರುವುದು ಹೇಳಿಕೆಯನ್ನು ಖಂಡಿತ ಬದಲಿಸುವೆನೆಂದು ನಿಶ್ಚಯಮಾಡಿದರೆ ಸಾಕು, ಮಿಕ್ಕೆಲ್ಲಾ ತಮ್ಮಿಂದತಾವೇ ಬಂದು ಕೂಡುವುವು"

ರಮಾನಾಥನು ತಲೆ ತಗ್ಗಿಸಿ ಕೇಳುತ್ತಿದ್ದನು.

ಜಾಲಪ ಇನ್ನೂ ಆವೇಶದಲ್ಲಿ ಮುಂದುವರಿದಳು— ಈ ಪಾಪದ ಕೃತಿಯಲ್ಲಿ ನಿಮಗೆ ಅಷ್ಟು ಮನಸ್ಸಿದ್ದರೆ, ನನ್ನನ್ನು ಈಗಲೇ ಕಳಿಸಿಬಿಡಿ. ಮುಖಕ್ಕೆ ಮಸಿಹಚ್ಚಿಕೊಂಡು ಇಲ್ಲಿಂದ ಹೋದವಳು ಮತ್ತೆ ನಿಮಗೆ ತೋರಿಸಲು ಬರುವುದಿಲ್ಲವೆಂದಿಟ್ಟುಕೊಳ್ಳಿ. ನೀವು ಸುಖವಾಗಿರಿ. ನಾನು ಬೆಂದುಳಿಸಿ ದುಡಿದು ಹೊಟ್ಟೆಹೊರೆಯಬಲ್ಲೆ. ಪ್ರಾಯಶ್ಚಿತ್ತ ಇನ್ನೂ ಮುಗಿಯಲಿಲ್ಲವೇ? ಈ ದೌರ್ಬಲತೆ ನಮ್ಮ ಬೆನ್ನು ಬಿಡುವುದಿಲ್ಲ ನಮ್ಮ ಸರ್ವನಾಶಮಾಡದೆ ಇದು ನಿಲ್ಲದೆಂದು ಈಗ ನನಗೆ ತೋರುತ್ತಿದೆ.

ರಮಾನಾಥನ ಹೃದಯಕ್ಕೆ ಬರೆಕೊಟ್ಟಂತಾಯಿತು.

ಜಾಲಪ ಕೇಳಿದಳು— ನಿಮಗೆ ಹೇಳುವುದಕ್ಕೆ ನಿಮ್ಮನಾಚಿಕೆ ಅಡ್ಡ ಬರುವುದಾದರೆ ನಾನೇ ಸುಪರಿಂಟೆಂಡೆಂಟರ ಬಳಿಹೋಗಿ ಹೇಳುವೆ. ಈಗ ಹೇಳಿ ನಿಮ್ಮಹೇಳಿಕೆ ಬದಲಿಸುವಿರಾ ಏನು?

ರಮಾ—ಹೂಂ, ಬದಲಿಸುವೆ.

ಜಾಲಪ—ನಾನು ಹೇಳಿದೆನೆಂದೇ ಅಥವಾ ನಿಮ್ಮಹೃದಯಕ್ಕೊಪ್ಪಿಯೆ?

ರಮಾ—ಮನಃಪೂರ್ವಕವಾಗಿಯೂ ಬದಲಿಸುವೆ.
ಆಮೇಲೆ ಮನೆಯ ಕುರಿತು ನಾನಾಬಗೆಯ ಚರ್ಚೆಗಳು ನಡೆದುವು.

## [೩೭]

ರತನ ಪತ್ರಗಳಲ್ಲಿ ಜಾಲಪಳಿಗೆ ಧೈರ್ಯಗೊಡುತ್ತಿದ್ದಳಾದರೂ ತನ್ನ ಸ್ವಂತದ ವಿಷಯ ಏನೊಂದನ್ನೂ ಬರೆಯುತಿದ್ದಿಲ್ಲ. ತಮ್ಮ ವ್ಯಥೆಯು ಹೆಚ್ಚಾಗಿರುವವರಿಗೆ ಬೇರೆ ವ್ಯಥೆಯನ್ನು ಹೊರಿಸುವುದೇಕೆಂದು ಮೌನ ತಾಳಿದ್ದಳು.

ಈಗ ರತನಳು ಬಹಳ ದುರವಸ್ಥೆಗೀಡಾಗಿದ್ದಳು. ಹಣವನ್ನು ಹುಲ್ಲೆಂದು
ಬಗೆಯುತ್ತಿದ್ದ ರತನಳೇ ಇಂದು ರೊಟ್ಟಿಗಾಗಿ ಕಾತರಿಸಬೇಕಾಗಿ ಬಂತು
ಆಕೆಯ ವೈವಾಹಿಕ ಜೀವನವು ಅಷ್ಟೊಂದು ಸುಖಮಯವಾಗಿತ್ತೆಂದು ಹೇಳ
ಲಾರೆವಾದರೂ, ಅದರಲ್ಲಿ ಯಾವುದೊಂದು ವಿಷಯಕ್ಕೂ ಕೊರತೆಇದ್ದಿಲ್ಲ
ಬೇಕಾದಷ್ಟು ಆಹಾರಸಾಮಗ್ರಿಯೂ, ನೌಕರ-ಚಾಕರರೂ ಇದ್ದರೆ ಸಾಯಲಿಕ್ಕೆ
ಬಿದ್ದ ಕುದುರೆಯ ಮೇಲೂ ಸವಾರಿಮಾಡಬರುವುದಿಲ್ಲವೆ? ಅಂತಹ ಒಂದು
ಕುದುರೆಯನ್ನೇರಿದ ಸವಾರನಂತೆ ರತನಳ ಜೀವನಯಾತ್ರೆ ಮಂದಗತಿಯಿಂದ
ಸಾಗುತಿತ್ತು. ಬೇರೆ ಸವಾರರು ತಮ್ಮ ವೇಗದ ಕುದುರೆಗಳಮೇಲೆ ಹಾರಿ
ಹೋಗುತ್ತಿರುವುದನ್ನು ಕಂಡಾಗ ಆಕೆಗೆ ತನ್ನ ದಶೆಯಮೇಲೆ ಬೇಸರ ಹುಟ್ಟಿ
ರಬಹುದು. ಆದರೂ ಅವಳು ದುಃಖಿಸುತ್ತಿದ್ದಿಲ್ಲ, ತನ್ನ ಅದೃಷ್ಟವನ್ನು ಹಳಿ
ಯುತ್ತಿದ್ದಿಲ್ಲ ಕಟ್ಟಿಹಾಕಿದ ದನವು ತನ್ನೆದುರಿನ ಒಣಹುಲ್ಲನ್ನೇ ತಿನ್ನುವುದ
ರಲ್ಲಿ ಮಗ್ನವಾಗಿ ಸುತ್ತುಮುತ್ತಲಿನ ಎಳಗರಿಕೆಗೆ ಆಸೆಪಡೆದು ಸುಮ್ಮನೆ ಮೆಲು
ಕಾಡುತಿರುವಂತೆ ಅವಳು ಆ ಬಂಧನದಲ್ಲೇ ಸುಖವನ್ನು ಕಾಣುತ್ತಿದ್ದಳು.
ಯೌವನ ಕಾಲದಲ್ಲಿ ಆತ್ಮಪ್ರದರ್ಶನದ ಹಸಿವು ಪ್ರೇಮದಹಸಿವಿಗಿಂತಲೂ
ಅಧಿಕವಾಗಿರುತ್ತದೆ. ಒಲವಿನ ಹಸಿವುಬರುವುದು ಆ ಬಳಿಕ ಆಕೆಯ ಎಳೆಯ
ಆತ್ಮವು ಶೃಂಗಾರ ಮತ್ತು ಆತ್ಮಪ್ರದರ್ಶನಗಳಲ್ಲಿ ಮಗ್ನವಾಗಿತ್ತು. ಸಂಪನ್ನ
ತೆಗೆ ಮಾನಸಿಕ ವ್ಯಥೆಗಳನ್ನು ಬಹುಮಟ್ಟಿಗೆ ತಣಿಸುವ ಗುಣವೊಂದಿರುತ್ತದೆ.
ದುಃಖವನ್ನು ಮರೆಯಿಸುವ ಸಾಧನಗಳೆಷ್ಟೋ ಇವೆ; ಆದರೆ ವಿಪನ್ನತೆ ದೊರೆ
ಕೊಂಡಾಗ ಒಂದೋ ಅಳಬೇಕು, ಇಲ್ಲವೇ ಆತ್ಮಹತ್ಯೆಗೆ ಇಳಿಯಬೇಕು,
ಹೊರತು ಬೇರೆ ಮಾರ್ಗವಿಲ್ಲ. ರತನಳ ಭಾಗ್ಯವು ತಿರವುಮುರವಾಗಿಹೋ
ಯಿತು. ಸುಖಸ್ವಪ್ನವು ಭಂಗವಾಯಿತು. ವಿಪನ್ನತೆಯ ಕಂಕಾಲವು
ಆಕೆಯ ಮೊಗವನ್ನೆ ದಿಟ್ಟಿಸುತಿತ್ತು.

ಇದಕ್ಕೆಲ್ಲಕಾರಣಗಳೂ ಅವಳೇ. ವಕೀಲರು ಪಥ್ಯದಿಂದಿದ್ದರೆ ರೋಗಿ
ಬಹಳ ದಿನ ಬದುಕಬಲ್ಲನೆಂದು ನಂಬಿದ್ದರು. ಆದ್ದರಿಂದ ಕೊನೆಗಾಲದ
ವರೆಗೂ ಅವರಿಗೆ ಉಯಿಲು ಬರೆಯಿಸಬೇಕೆಂದು ಅನಿಸಲೇ ಇಲ್ಲ. ಆ ಯೋ
ಚನೆ ಬಂದಾಗ ರತನಳಹತ್ತಿರ ಪ್ರಸ್ತಾಪಿಸಿದರು. ಆದರೆ ಉಯಿಲು ಎಂದೊ
ಡನೆ ಗಾಬರಿಗೊಂಡು ಇವಳೇ ಅದಕ್ಕೆ ತಡೆಮಾಡಿದಳು. ಆ ಬಳಿಕ ಅವರಿಗೆ
ಸರಿಯಾಗಿ ತಿಳಿವು ಬರಲೂ ಇಲ್ಲ.

ಅವರು ತೀರಿಕೊಂಡಮೇಲೆ ರತನಳ ಮನಸ್ಸು ಯಾವುದನ್ನೂ ತಿಳಿಯ ಲಾರದಷ್ಟು ವಿರಕ್ತವಾಯಿತು. ಎಲ್ಲವನ್ನೂ ಮಣಿಭೂಷಣನ ಮೇಲೆ ಬಿಟ್ಟು ನಿಶ್ಚಿಂತೆಯಿಂದಿದ್ದಳು; ಅದನ್ನು ಮೆಲ್ಲಮೆಲ್ಲನೆ ಒಂದೊಂದನ್ನೇ ನುಂಗಿ ಹಾಕಿ ಒಂದುದಿನ ಬಂಗಲೆಯನ್ನು ಮಾರಿಯೇಬಿಟ್ಟನು. ಚಿಕ್ಕಮ್ಮನ ಹತ್ತಿರಬಂದು ಹೇಳಿದನು—ಇವೊತ್ತು ಬಂಗಲೆ ಖಾಲಿಮಾಡಬೇಕು ಮಾರಿಬಿಟ್ಟದ್ದೇನೆ.

ರತನ–ಬಂಗಲೆ ಮಾರಕೂಡದೆಂದು ನಾನು ನಿನ್ನೊಡನೆ ಹೇಳಿದ್ದಿಲ್ಲವೆ? ಮಣಿಭೂಷಣನು ವಿನಯದ ಆವರಣವನ್ನು ಕಳಚಿಹಾಕಿ ಜೋರಿನಿಂದಲೇ ಎಂದನು—ನೀವು ಹೇಳಿದ್ದನ್ನು ಬೇಗ ಮರೆತು ಬಿಡುತ್ತೀರಿ ಇದೇಕೋಣೆ ಯಲ್ಲಿ 'ಮಾರಿದರೆ ಮಾರು ನನಗೇಕೆಬೇಕು' ಎಂದು ಹೇಳಿದ್ದೀರಿ. ಈಗ ಹೀಗೆ ನ್ನುತ್ತೀರಿ. ಇನ್ನು ನೀವು ನನ್ನೊಡನೆ ಬರಬಹುದು. ನಿಮ್ಮ ರಕ್ಷಣೆಯಭಾರ ನನ್ನಮೇಲಿದೆ. ಕುಲಮರ್ಯಾದೆಗೋಸ್ಕರ ನಾನು ನಿಮ್ಮನ್ನು ನನ್ನಸಂಗಡ ಕರಕೊಂಡುಹೋಗುವೆ.

"ನನ್ನ ಮರ್ಯಾದೆಯನ್ನು ನಾನು ರಕ್ಷಿಸಿಕೊಳ್ಳಬಲ್ಲೆ ನನ್ನ ಮರ್ಜಿಗೆ ವಿರುದ್ಧವಾಗಿ ನೀನು ಈಮನೆಯ ಒಂದು ಒಡಕುಪಾತ್ರೆಯನ್ನೂ ಮಾರಲಾರೆ"

"ಈ ಮನೆಯ ಮೇಲೂ ಚಿಕ್ಕಪ್ಪನ ಸಂಪತ್ತಿಯ ಮೇಲೂ ನಿಮ್ಮ ಯಾವ ಅಧಿಕಾರವೂ ನಡೆಯದು. ಸಮ್ಮಿಲಿತ ಕುಟುಂಬ ಪದ್ಧತಿಯಲ್ಲಿ ವಿಧ ವೆಗೆ ಗಂಡನ ಆಸ್ತಿಯ ಮೇಲೆ ಏನೂ ಹಕ್ಕಿರುವದಿಲ್ಲ. ಇನ್ನು ಹಾಗೆಉಯಿಲು ಗಿಯಿಲಿದ್ದರೆ ನೋಡಬಹುದಿತ್ತು. ಅವರು ಹಾಗೇನು ಮಾಡಲಿಲ್ಲವೆಂದಮೇಲೆ ಅವರು ಕಾನೂನಿನ ಸಾಧಾರಣ ವ್ಯವಹಾರಕ್ಕೆ ಅಡ್ಡಿ ತರಲಿಚ್ಛಿಸಲಿಲ್ಲವೆಂದೇ ಅಭಿಪ್ರಾಯವಾಗುತ್ತದೆ. ನಿಮಗೆ ಇರಲಿಕ್ಕೆ ಹತ್ತುರೂಪಾಯಿ ಬಾಡಿಗೆಯ ಮನೆ ಸಾಕು ತಿಂಗಳಿಗೆ ಐವತ್ತುರೂಪಾಯಿ ಅಶನಾರ್ಥದ ಏರ್ಪಾಡು ನಾನು ಮಾಡುವೆ ಸಾಲವನ್ನೆಲ್ಲ ತೀರಿಸಿ ಇದಕ್ಕಿಂತ ಹೆಚ್ಚುಕೊಡಲು ನನ್ನ ಹತ್ತಿರ ಏನೂ ಇರುವದಿಲ್ಲ"

"ರತನ ನಿರುತ್ತರಳಾದಳು. ಮೋಟಾರು ಹಿಡಿದು ಕೊಂಡು ತನ್ನ ಪರಿ ಚಯದ ಎಷ್ಟೋ ವಕೀಲರ ಬಳಿಹೋಗಿ ವಿಚಾರಿಸಿದಳು. ಅಣ್ಣತಮ್ಮಂದಿರಲ್ಲಿ

ಪಾಲಾಗಿತ್ತೆಂದು ಸಿದ್ಧಮಾಡಬೇಕೇ ವಿನಾ ಬೇರಾವ ಮಾರ್ಗವೂ ಇಲ್ಲವೆಂದೂ ಎಲ್ಲರೂ ಅಭಿಪ್ರಾಯ ಕೊಟ್ಟರು. ಅಭಾಗಿನಿ ರತನ ತಲೆಯ ಮೇಲೆ ಕೈಯಿಟ್ಟು ಕೊಂಡು ಹಿಂದೆ ಬಂದಳು.

ಇಡೀ ದಿನ ರತನ ಮೌನಚಿಂತೆಯಲ್ಲಿ ಮುಳಗಿದಳು. ಇಷ್ಟು ದಿನ ಅವಳು ತಾನೇ ಮನೆಯ ಯಜಮಾನಿಯೆಂದು ತಿಳಿದಿದ್ದಳು ಇಂದು ಆ ಸ್ವಪ್ನವು ಭಂಗವಾಯಿತು. ನಿನ್ನೆ ಅವಳದಾಗಿದ್ದ ವಸ್ತುವು ಇಂದು ಅವಳದಲ್ಲ. ಅವಳಿಂದು ಅದರ ಕಡೆಗೆ ಕಣ್ಣೆತ್ತಿ ಕೂಡ ನೋಡುವಂತಿಲ್ಲ! ಎಷ್ಟು ಕೆಟ್ಟ ಕನಸದು! ಹೌದು, ಅವಳಿಂದು ಅನಾಥೆ ನಿನ್ನೆಯ ವರೆಗೆ ಭಿಕ್ಷೆ ನೀಡುತ್ತಿದ್ದಳು ಇಂದು ಆಕೆಯೇ ಬೇಡಬೇಕು. ಬೇರಾವ ಆಸರೆಯೂ ಇಲ್ಲವೆ? ಮೊದಲು ಅವಳು ಅನಾಥೆಯೇ, ಆದರೆ ಸ್ವಾಮಿನಿಯೆಂಬ ಭ್ರಮೆಯೊಂದಿತ್ತು. ಈಗ ಆ ಭ್ರಮೆಯ ಆಧಾರವೂ ಇಲ್ಲವಾಯಿತು!

ಸಹಸಾ ಅವಳ ವಿಚಾರವು ಪಲ್ಲಟವಾಯಿತು. ನಾನೇಕೆ ನನ್ನನ್ನು ಅನಾಥೆಯೆಂದು ಬಗೆಯಲಿ? ಭಿಕ್ಷೆಗೆ ಕೈ ನೀಡಲೇಕೆ? ಪ್ರಪಂಚದಲ್ಲಿ ಲಕ್ಷಾಂತರ ಸ್ತ್ರೀಯರು ಹುಜೂರಿ ಮಾಡಿ ಹೊಟ್ಟೆ ಹೊರೆದುಕೊಳ್ಳುವದಿಲ್ಲವೆ? ನನಗೆ ಹೊಲಿಗೆಕೆಲಸ ಬರುವದಿಲ್ಲವೆ? ಹುಡುಗರನ್ನು ಓದಿಸಲಾರೆನೆ? ಅಥವಾ ಒಂದು ಸಣ್ಣ ಅಂಗಡಿಯನ್ನು ತೆರೆಯಲಾರೆನೆ? ಜನ ನಕ್ಕಾರೆಂದಲ್ಲವೆ ಅಂಜಬೇಕು? ನನ್ನ ಸಮಾಜವನ್ನು ಕಂಡು ನಗುತ್ತಾರೆ. ನಗಲಿ.

ಸಾಯಂಕಾಲ ಮಣಿಭೂಷಣನು ಬಂದಾಗ ರತನ ಹೇಳಿದಳು—ನನಗೆ ಈ ಮನೆಯ ಒಂದು ಹುಲ್ಲುಕಡ್ಡಿಯೂ ಬೇಡ. ಯಾವುದರ ಮೇಲೆ ನನ್ನ ಅಧಿಕಾರವಿಲ್ಲವೊ ಆ ವಸ್ತು ಹೇಗೆ ನನ್ನದಾದೀತು? ನಾನು ದಯೆಯನ್ನು ಪ್ರಾರ್ಥಿಸುವ ಭಿಕಾರಿಣಿಯಲ್ಲ. ಇಲ್ಲಿಯ ವಸ್ತುಗಳಿಗೆ ನೀನು ಒಡೆಯನು! ನೀನೇ ಒಯ್ಯು ನನಗೇನೂ ಕೆಡುಕೆನಿಸದು. ಕೂಲಿಕುಂಬಳಿ ಮಾಡಿ ತಮ್ಮ ನಿರ್ವಾಹ ಮಾಡಿಕೊಳ್ಳುವ ವಿಧವೆಯರು ಈ ಪ್ರಪಂಚದಲ್ಲಿ ಎಷ್ಟೋ ಮಂದಿ ಇರುವರು ಅವರಂತೆಯೇ ನಾನೊಬ್ಬಳು. ನಾನು ಹಾಗೆಯೇ ಮಜೂರಿ ಮಾಡುವೆನು. ಅದಾಗದಿದ್ದರೆ ಯಾವುದಾದರೂ ಭಾವಿಗೆ ಬಿದ್ದು ಸಾಯುವೆನು ತಮ್ಮ ಹೊಟ್ಟೆಯೊಂದನ್ನು ಹೊರಕೊಳ್ಳಲಾರದ ವ್ಯಕ್ತಿಗೆ ಬದುಕಲಿಕ್ಕೂ, ಇನ್ನೊಬ್ಬರಿಗೆ ಹೊರೆಯಾಗುವದಕ್ಕೂ, ಯಾವ ಅಧಿಕಾರವೂ ಇರುವದಿಲ್ಲ.

ಅವರು ತೀರಿಕೊಂಡಮೇಲೆ ರತನಳ ಮನಸ್ಸು ಯಾವುದನ್ನೂ ತಿಳಿಯ ಲಾರದಷ್ಟು ವಿರಕ್ತವಾಯಿತು. ಎಲ್ಲವನ್ನೂ ಮಣಿಭೂಷಣನ ಮೇಲೆ ಬಿಟ್ಟು ನಿಶ್ಚಿಂತೆಯಿಂದಿದ್ದಳು; ಅದನ್ನು ಮೆಲ್ಲಮೆಲ್ಲನೆ ಒಂದೊಂದನ್ನೇ ನುಂಗಿ ಹಾಕಿ ಒಂದುದಿನ ಬಂಗಲೆಯನ್ನು ಮಾರಿಯೇಬಿಟ್ಟನು. ಚಿಕ್ಕವ್ವನ ಹತ್ತಿರಬಂದು ಹೇಳಿದನು—ಇವೊತ್ತು ಬಂಗಲೆ ಖಾಲಿಮಾಡಬೇಕು ಮಾರಿಬಿಟ್ಟದ್ದೇನೆ.

ರತನ–ಬಂಗಲೆ ಮಾರಕೂಡದೆಂದು ನಾನು ನಿನ್ನೊಡನೆ ಹೇಳಿದ್ದಿಲ್ಲವೆ? ಮಣಿಭೂಷಣನು ವಿನಯದ ಆವರಣವನ್ನು ಕಳಚಿಹಾಕಿ ಜೋರಿನಿಂದಲೇ ಎಂದನು—ನೀವು ಹೇಳಿದ್ದನ್ನು ಬೇಗ ಮರೆತು ಬಿಡುತ್ತೀರಿ ಇದೇಕೋಣೆ ಯಲ್ಲಿ 'ಮಾರಿದರೆ ಮಾರು ನನಗೇತಕೆಬೇಕು' ಎಂದು ಹೇಳಿದ್ದೀರಿ. ಈಗ ಹೀಗೆ ನ್ನುತ್ತೀರಿ. ಇನ್ನು ನೀವು ನನ್ನೊಡನೆ ಬರಬಹುದು. ನಿಮ್ಮ ರಕ್ಷಣೆಯಭಾರ ನನ್ನಮೇಲಿದೆ. ಕುಲಮರ್ಯಾದೆಗೋಸ್ಕರ ನಾನು ನಿಮ್ಮನ್ನು ನನ್ನಸಂಗಡ ಕರಕೊಂಡುಹೋಗುವೆ.

"ನನ್ನ ಮರ್ಯಾದೆಯನ್ನು ನಾನು ರಕ್ಷಿಸಿಕೊಳ್ಳಬಲ್ಲೆ ನನ್ನ ಮರ್ಜಿಗೆ ವಿರುದ್ಧವಾಗಿ ನೀನು ಈ ಮನೆಯ ಒಂದು ಒಡಕುಪಾತ್ರೆಯನ್ನೂ ಮಾರಲಾರೆ"

"ಈ ಮನೆಯ ಮೇಲೂ ಚಿಕ್ಕಪ್ಪನ ಸಂಪತ್ತಿಯ ಮೇಲೂ ನಿಮ್ಮ ಯಾವ ಅಧಿಕಾರವೂ ನಡೆಯದು. ಸಮ್ಮಿಲಿತ ಕುಟುಂಬ ಪದ್ಧತಿಯಲ್ಲಿ ವಿಧ ವೆಗೆ ಗಂಡನ ಆಸ್ತಿಯ ಮೇಲೆ ಏನೂ ಹಕ್ಕಿರುವದಿಲ್ಲ. ಇನ್ನು ಹಾಗೆಉಯಿಲು ಗಿಯಿಲಿದ್ದರೆ ನೋಡಬಹುದಿತ್ತು. ಅವರು ಹಾಗೇನು ಮಾಡಲಿಲ್ಲವೆಂದಮೇಲೆ ಅವರು ಕಾನೂನಿನ ಸಾಧಾರಣ ವ್ಯವಹಾರಕ್ಕೆ ಅಡ್ಡಿತರಲಿಚ್ಛಿಸಲಿಲ್ಲವೆಂದೇ ಅಭಿಪ್ರಾಯವಾಗುತ್ತದೆ. ನಿಮಗೆ ಇರಲಿಕ್ಕೆ ಹತ್ತುರೂಪಾಯಿ ಬಾಡಿಗೆಯ ಮನೆ ಸಾಕು ತಿಂಗಳಿಗೆ ಐವತ್ತುರೂಪಾಯಿ ಅಶನಾರ್ಥದ ಏರ್ಪಾಡು ನಾನು ಮಾಡುವೆ ಸಾಲವನ್ನೆಲ್ಲ ತೀರಿಸಿ ಇದಕ್ಕಿಂತ ಹೆಚ್ಚುಕೊಡಲು ನನ್ನ ಹತ್ತಿರ ಏನೂ ಇರುವದಿಲ್ಲ"

"ರತನ ನಿರುತ್ತರಳಾದಳು. ಮೋಟಾರು ಹಿಡಿದು ಕೊಂಡು ತನ್ನ ಪರಿ ಚಯದ ಎಷ್ಟೋ ವಕೀಲರ ಬಳಿಹೋಗಿ ವಿಚಾರಿಸಿದಳು. ಅಣ್ಣತಮ್ಮಂದಿರಲ್ಲಿ

ಪಾಲಾಗಿತ್ತೆಂದು ಸಿದ್ಧಮಾಡಬೇಕೇ ವಿನಾ ಬೇರಾವ ಮಾರ್ಗವೂ ಇಲ್ಲವೆಂದೂ ಎಲ್ಲರೂ ಅಭಿಪ್ರಾಯ ಕೊಟ್ಟರು. ಅಭಾಗಿನಿ ರತನ ತಲೆಯ ಮೇಲೆಕೈಯಿಟ್ಟು ಕೊಂಡು ಹಿಂದೆ ಬಂದಳು.

ಇಡೀ ದೀನ ರತನ ಮೌನಚಿಂತೆಯಲ್ಲಿ ಮುಳಗಿದಳು. ಇಷ್ಟು ದಿನ ಅವಳು ತಾನೇ ಮನೆಯ ಯಜಮಾನಿಯೆಂದು ತಿಳಿದಿದ್ದಳು ಇಂದು ಆ ಸ್ವಪ್ನವು ಭಂಗವಾಯಿತು. ನಿನ್ನೆ ಅವಳದಾಗಿದ್ದ ವಸ್ತುವು ಇಂದು ಅವಳದಲ್ಲ. ಅವಳಿಂದು ಅದರ ಕಡೆಗೆ ಕಣ್ಣೆತ್ತಿ ಕೂಡ ನೋಡುವಂತಿಲ್ಲ! ಎಷ್ಟು ಕೆಟ್ಟ ಕನಸದು! ಹೌದು, ಅವಳಿಂದು ಅನಾಥೆ ನಿನ್ನೆಯ ವರೆಗೆ ಭಿಕ್ಷೆ ನೀಡುತ್ತಿದ್ದಳು ಇಂದು ಆಕೆಯೇ ಬೇಡಬೇಕು. ಬೇರಾವ ಆಸರೆಯೂ ಇಲ್ಲವೆ? ಮೊದಲು ಅವಳು ಅನಾಥೆಯೇ, ಆದರೆ ಸ್ವಾಮಿನಿಯೆಂಬ ಭ್ರಮೆಯೊಂದಿತ್ತು. ಈಗ ಆ ಭ್ರಮೆಯ ಆಧಾರವೂ ಇಲ್ಲವಾಯಿತು!

ಸಹಸಾ ಅವಳ ವಿಚಾರವು ಪಲ್ಲಟವಾಯಿತು. ನಾನೇಕೆ ನನ್ನನ್ನು ಅನಾಥೆಯೆಂದು ಬಗೆಯಲಿ? ಭಿಕ್ಷೆಗೆ ಕೈನೀಡಲೇಕೆ? ಪ್ರಪಂಚದಲ್ಲಿ ಲಕ್ಷಾಂತರ ಸ್ತ್ರೀಯರು ಮಜೂರಿ ಮಾಡಿ ಹೊಟ್ಟೆ ಹೊರೆದುಕೊಳ್ಳುವದಿಲ್ಲವೆ? ನನಗೆ ಹೊಲಿಗೆಕೆಲಸ ಬರುವದಿಲ್ಲವೆ? ಹುಡುಗರನ್ನು ಓದಿಸಲಾರೆನೆ? ಅಥವಾ ಒಂದು ಸಣ್ಣ ಅಂಗಡಿಯನ್ನು ತೆರೆಯಲಾರೆನೆ? ಜನ ನಕ್ಕಾರೆಂದಲ್ಲವೆ ಅಂಜಬೇಕು? ನನ್ನ ಸಮಾಜವನ್ನು ಕಂಡು ನಗುತ್ತಾರೆ. ನಗಲಿ.

ಸಾಯಂಕಾಲ ಮಣಿಭೂಷಣನು ಬಂದಾಗ ರತನ ಹೇಳಿದಳು—ನನಗೆ ಈ ಮನೆಯ ಒಂದು ಹುಲ್ಲುಕಡ್ಡಿಯೂ ಬೇಡ. ಯಾವುದರ ಮೇಲೆ ನನ್ನ ಅಧಿಕಾರವಿಲ್ಲವೊ ಆ ವಸ್ತು ಹೇಗೆ ನನ್ನದಾದೀತು? ನಾನು ದಯೆಯನ್ನು ಪ್ರಾರ್ಥಿಸುವ ಭಿಕಾರಿಣಿಯಲ್ಲ. ಇಲ್ಲಿಯ ವಸ್ತುಗಳಿಗೆ ನೀನು ಒಡೆಯನು! ನೀನೇ ಒಯ್ಯು ನನಗೇನೂ ಕೆಡುಕೆನಿಸದು. ಕೂಲಿಕುಂಬಳಿ ಮಾಡಿ ತಮ್ಮ ನಿರ್ವಾಹ ಮಾಡಿಕೊಳ್ಳುವ ವಿಧವೆಯರು ಈ ಪ್ರಪಂಚದಲ್ಲಿ ಎಷ್ಟೋ ಮಂದಿ ಇರುವರು ಅವರಂತೆಯೇ ನಾನೊಬ್ಬಳು. ನಾನು ಹಾಗೆಯೇ ಮಜೂರಿ ಮಾಡುವೆನು. ಅದಾಗದಿದ್ದರೆ ಯಾವುದಾದರೂ ಭಾವಿಗೆ ಬಿದ್ದು ಸಾಯುವೆನು ತಮ್ಮ ಹೊಟ್ಟೆಯೊಂದನ್ನು ಹೊರಕೊಳ್ಳಲಾರದ ವ್ಯಕ್ತಿಗೆ ಬದುಕಲಿಕ್ಕೂ, ಇನ್ನೊಬ್ಬರಿಗೆ ಹೊರೆಯಾಗುವದಕ್ಕೂ, ಯಾವ ಅಧಿಕಾರವೂ ಇರುವದಿಲ್ಲ.

ಹೀಗೆ ಕೇಳುತ್ತಾ ರತನ ಬಾಗಿಲ ಕಡೆಗೆ ಹೊರಟಳು.

ಮಣಿಭೂಷಣನು ಬಾಗಿಲಿಗೆ ಅಡ್ಡನಿಂತು ಕೇಳಿದನು-ನಿಮಗೆ ಇಚ್ಛೆಯಿಲ್ಲವಾದರೆ ನಾನು ಈಗಲೇ ಮಾಡುವದಿಲ್ಲ.

ರತನಳು ಅವನನ್ನು ಉರಿಗಣ್ಣಿನಿಂದ ನೋಡಿದಳು. ಅವನ ಮುಖವು ಕೆಂಪೇರಿತ್ತು. ಉಕ್ಕಿಬರುವ ಕಂಬನಿಗಳನ್ನೊತ್ತಿಹಿಡಿದು ಹೇಳಿದಳು—ಈ ಮನೆಗೂ ನನಗೂ ಯಾವತರದ ಸಂಬಂಧವೂ ಇಲ್ಲವೆಂದು ಹೇಳಿದೆಲ್ಲವೆ? ನಾನು ಸಂಬಳದ ದಾಸಿಯಿದ್ದೆ. ಮನೆಯದಾಸಿಗೂ ಮನೆಗೂ ಏನ ಸಂಬಂಧ? ಈ ಕಾನೂನನ್ನು ರಚಿಸಿದ ಪಾಪಿಯಾರೋ ನಾನರಿಯೆ. ದೇವರು ಎಲ್ಲಾದರೂ ಇರುವುದು ನಿಜವಾದರೆ, ಅವನ ಮನೆಯಲ್ಲಿ ನ್ಯಾಯಕ್ಕೆ ಜಯ ಹೌದಾದರೆ ಒಂದುದಿನ ಅವನಿದಿರಲ್ಲೇ ಆ ಪಾಪಿಯಹತ್ತಿರ 'ನಿನ್ನ ಮನೆಯಲ್ಲಿ ತಾಯಿಂದಿರೂ, ಸೋದರಿಯರೂ ನಿನಗಿದ್ದಿಲ್ಲವೆ? ಅವರ ಅಪಮಾನವನ್ನು ಮಾಡುವಾಗ ನಿನಗೆ ಲಜ್ಜೆಬರಲಿಲ್ಲವೆ?' ಎಂದು ಕೇಳುತ್ತಿದ್ದೆ ನನ್ನ ನಾಲಗೆಯಲ್ಲಿ ಅಷ್ಟುಶಕ್ತಿ ಇರುತ್ತಿದ್ದರೆ ಇಡೀ ದೇಶದಲ್ಲಿ ನನ್ನ ಸ್ವರ ಕೇಳುವಹಾಗೆಮಾಡಿ, ಎಲ್ಲಾಸ್ತ್ರೀಯರಿಗೂ ಹೇಳುತ್ತಿದ್ದೆ—ಭಗಿನಿಯರೆ, ಸಮ್ಮಿಲಿತ ಕುಟುಂಬದೊಡನೆ ಮದುವೆ ಯಾಗಬೇಡಿ ಹಾಗೆ ಮಾಡಿಕೊಂಡದ್ದೇ ಆದರೆ ಪಾರಾಗಿ ಬೇರೆ ಮನೆ ಕಟ್ಟಿಕೊಳ್ಳುವವರೆಗೆ ವಿಶ್ರಮಿಸ ಬೇಡಿ. ನಿಮ್ಮ ಪತಿಯ ತರುವಾಯದಲ್ಲಿ ಆ ಮನೆಯಲ್ಲಿ ನಿಮ್ಮನ್ನು ಮರ್ಯಾದೆಯಿಂದ ಪಾಲಿಸುವರೆಂಬ ಭ್ರಮೆಯಲ್ಲಿರಬೇಡಿ. ಕುಟುಂಬವೆಂದರೆ ನಿಮಗೆ ಹೂವಿನ ಹಾಸಿಗೆಯಲ್ಲ, ಮುಳ್ಳಿನ ಶಯ್ಯೆಯೆಂದು ಬಗೆಯಿರಿ; ನಿಮ್ಮನ್ನು ದಾಟಿಸುವ ನೌಕೆಯಲ್ಲ, ನಿಮ್ಮನ್ನು ನುಂಗುವ ಮೊಸಳೆಯೆಂದು ತಿಳಿದು ಎಚ್ಚರವಾಗಿರಿ.

ಮುಚ್ಚಂಜೆಯಾಗಿತ್ತು. ರತನ ವೇಗದಿಂದ ಮಾರ್ಗದಲ್ಲಿ ನಡೆಯುತ್ತಿದ್ದಳು. ದಾರಿಯಲ್ಲಿ ಅವಳ ಪರಿಚಿತ ಸ್ತ್ರೀಯರೆಷ್ಟೋ ಮಂದಿ ಅವಳನ್ನು ನಿಲ್ಲಿಸಿ ತಮ್ಮ ಮೋಟರೊಳಗೆ ಬರುವಂತೆ ಒತ್ತಾಯಪಡಿಸಿದರು. ಆದರೆ ಇಂದು ಅವರ ಒತ್ತಾಯವು ಆಕೆಯ ಎದೆಯನ್ನಿರಿವ ಬಾಣವಾಗಿತ್ತು. ಇಂದು ಅವಳ ವಾಸ್ತವಿಕ ಜೀವನವು ಆರಂಭವಾಯಿತು.

## ೩೮

ರಮಾನಾಥನು ದೇವೀದೀನನಲ್ಲಿಂದ ಹೊರಟು ಬಂಗಲೆಗೆ ಬರುವಷ್ಟು ಹೊತ್ತಿಗೆ ನಸುಕು ಹರಿಯುವುದರಲ್ಲಿತ್ತು. ಬೆಳಗಿನ ಉಪಹಾರವನ್ನು ತೀರಿಸಿ ಅವನು ದರೋಗರ ಬಳಿಗೆ ಹೋದನು. ಅವನ ಮುಖದ ಭಾವವನ್ನು ಕಂಡು 'ಇದೇನು ಇಂದು ಹೀಗೆ?' ಎಂದು ಕೇಳಿದನು. ರಮಾನಾಥನು ತಾನು ಈ ಮೊಕದ್ದಮೆಯಲ್ಲಿ ಇನ್ನು ಸಾಕ್ಷಿ ಹೇಳುವುದಿಲ್ಲವೆಂದೂ, ಪೋಲೀಸರ ಒತ್ತಾಯಕ್ಕಾಗಿ ತಾನು ಈ ಹಿಂದೆ ಹೇಳಲೊಪ್ಪಿದೆನೆಂದೂ ಜಡ್ಜರ ಹತ್ತಿರ ಹೇಳಿಬಿಡುವೆನೆಂದು, ಹೇಳಿದನು. ದರೋಗನು ಏನೆಲ್ಲಾ ಪ್ರಲೋಭನಗಳನ್ನು ತೋರಿಸಿದನು. ಆದರೆ ರಮಾನಾಥನ ಮೇಲೆ ಅವುಗಳು ಏನೂ ಪರಿಣಾಮ ಮಾಡದಾದುವು.

ಅಷ್ಟರಲ್ಲಿ ಡಿಪ್ಟೀ ಸಾಹೇಬರೂ ಇನ್ಸ್‌ಪೆಕ್ಟರರೂ ಬಂದಿಳಿದರು. ರಮಾನಾಥನನ್ನು ನೋಡಿ ಹೇಳಿದರು— ಹೋ, ನಮ್ಮ ಬಾಬುಗಳು ತಯಾರಾಗಿ ಕೂತಿದ್ದಾರೆ. ಇದೇ ವಿಷಯ ಚರ್ಚೆ ನಡೆಯುತ್ತಿತ್ತು ಅಲ್ಲವೆ?

ರಮಾನಾಥನು ಲಾಭ-ನಷ್ಟದ ಅರಿವಾದವನಂತೆ ಹೇಳಿದನು— ಹೌದು ಸ್ವಾಮಿ, ಚರ್ಚೆ ಏನೋ ಆ ವಿಷಯವೇ. ಇಷ್ಟು ದಿನ ನೀವು ಹೇಳಿದ ಪ್ರಕಾರ ನಡೆದೆ. ಇನ್ನು ನನ್ನ ಕಣ್ಣಿಂದ ನೋಡಿಕೊಂಡೇ ನಡೆಯುವ ವಿಚಾರ ಮಾಡಿದ್ದೇನೆ.

ಇನ್ಸ್‌ಪೆಕ್ಟರರು ದರೋಗನ ಮುಖವನ್ನೂ, ದರೋಗನು ಡಿಪ್ಟಿಯ ಮುಖವನ್ನೂ ಡಿಪ್ಟಿಯು ಇನ್ಸ್‌ಪೆಕ್ಟರರ ಮುಖವನ್ನೂ ನೋಡಿದರು. ಇನ್ಸ್‌ಪೆಕ್ಟರರು ವಿಸ್ಮಿತರಾಗಿ ಎಂದರು— ವಿಷಯ ಏನು, ಪ್ರಮಾಣಕ್ಕೂ ಹೇಳುತ್ತೇನೆ, ನೀವು ಸ್ವಲ್ಪ ಕೋಪಿಸಿಕೊಂಡಂತೆ ಕಾಣುವುದು.

ರಮಾ— ಇವೊತ್ತು ನಾನು ಹಿಂದೆ ಕೊಟ್ಟ ಹೇಳಿಕೆಯನ್ನು ಬದಲಿಸಬೇಕೆಂದು ನಿರ್ಧರಿಸಿರುತ್ತೇನೆ. ನಿರಪರಾಧಿಗಳನ್ನು ಕೊಲೆ ಮಾಡಲಾರೆ.

ಇನ್ಸ್‌ಪೆಕ್ಟರರು ದಯಾಭಾವದಿಂದ ಹೇಳಿದರು— ನೀವು ನಿರಪರಾಧಿಗಳ ಕೊಲೆ ಮಾಡುತ್ತಿಲ್ಲ. ನಿಮ್ಮ ಭಾಗ್ಯದ ಮಹಲನ್ನು ಕಟ್ಟುತ್ತಿದ್ದೀರಿ.

ಪ್ರಮಾಣಕ್ಕೂ ಅನ್ನುತ್ತೇನೆ, ಇಂತಹ ಸಂದರ್ಭ ಎಲ್ಲರಿಗೂ ಸಿಗುವುದಿಲ್ಲ. ನಿಮಗೆ ಇವೊತ್ತು ಇಷ್ಟು ಸಿಟ್ಟು ಬರಲು ಕಾರಣವೇನು? ದರೋಗರೆ, ನಿಮಗೇನಾದರೂ ಗೊತ್ತಿದೆಯೆ? ಯಾರಾದರೂ ಇವರಿಗೆ ಆಗದ್ದನ್ನು ಮಾಡಿದರೆ? ಇವರಿಗೆ ಅವಿಧೇಯರಾಗಿ ನಡೆದವರು ಯಾರಾದರೂ ಇದ್ದರೆ ಅವರನ್ನು ಗುಂಡುಹಾಕಿ ಕೊಂದುಬಿಡಿ.

ದರೋಗ— ನಾನು ಈಗಲೇ ಹೋಗಿ ತಿಳಿದುಕೊಂಡು ಬರುತ್ತೇನೆ.

ರಮಾ— ಬೇಡ, ಬೇಡ. ಅಷ್ಟು ಕಷ್ಟ ಪಡಬೇಡಿ. ಯಾರೂ ನನಗೆ ಏನೂ ಮಾಡಿಲ್ಲ. ನನ್ನ ಲಾಭಕ್ಕಾಗಿ ಧರ್ಮವನ್ನು ಕೊಲೆ ಮಾಡಲಾರೆ.

ಡಿಪ್ಟಿಯವರು ಶುಷ್ಕ ವಾಣಿಯಿಂದ ಹೇಳಿದರು— ರಮಾಬಾಬೂ, ಇದು ನಿಮ್ಮ ಒಳ್ಳೆಯದಕ್ಕಲ್ಲ.

ರಮಾ— ನಿಮ್ಮ ಒಳ್ಳೆಯದಕ್ಕಾಗದಿರಬಹುದು. ನನ್ನ ಉದ್ಧಾರಕ್ಕೆಂದೇ ಹೀಗೆ ಮಾಡುವೆನೆಂಬ ನಿರ್ಧಾರಕ್ಕೆ ಬಂದಿದ್ದೇನೆ.

ಡಿಪ್ಟಿ— ಅದೆಲ್ಲಾ ಇರಲಿ. ನಮ್ಮ ಮೊಕದ್ದಮೆ ಹಾಳಾದರೆ ಹಾಳಾಗಲಿ ನೀವು ಇದ್ದಷ್ಟು ಕಾಲಕ್ಕೆ ಮರೆಯದಂಥಾ 'ಲೆಸನ್' ಕಲಿಸಿಬಿಡುತ್ತೇವೆ. ನಾವು ಒಂದು ರಿಪೋರ್ಟು ಮಾಡಿದರೆ ಸಾಕು.

ಹೀಗೆ ಹೇಳಿ ರಮಾನಾಥನನ್ನು ಹಸಿಹಸಿ ತಿಂದುಬಿಡುವರೋ ಎಂಬಂತೆ ಕಣ್ಣು ಕೆರಳಿಸಿ ನೋಡಿದರು. ರಮಾನಾಥನು ಬೆಚ್ಚಿಹೋದನು. ಶೀಲ ವಿನಯಗಳ ಮೂರ್ತಿಯಾದ ಡಿಪ್ಟೀ ಸಾಹೇಬರು, ಈ ತೆರನಾಗಿ ಇಷ್ಟು ಶೀಘ್ರದಲ್ಲಿ ರೌದ್ರಾವತಾರವನ್ನು ತಾಳಬಹುದೆಂದು ಅವನೆಣಿಸಿರಲಿಲ್ಲ. ತೀವ್ರ ಸ್ವರದಲ್ಲಿ ಹೇಳಿದನು— ಹಾಗಾದರೆ ನೀವು ನನ್ನಿಂದ ಜಬರದಸ್ತಿಯಾಗಿ ಸಾಕ್ಷಿ ಹೇಳಿಸುವಿರಾ?

ಡಿಪ್ಟಿ ಕಾಲು ಕೊಡಹುತ್ತಾ ಹೇಳಿದರು— ಹೌದು ಜಬರದಸ್ತಿಯಿಂದ.

ರಮಾ— ಇದು ಒಳ್ಳೆಯ ತಮಾಷೆಯಾಯಿತಲ್ಲ!

ಡಿಪ್ಟಿ— ಪೋಲೀಸರಿಗೆ ಮೋಸಮಾಡುವುದು ಸುಲಭವೆಂದು ಗ್ರಹಿಸಿದೆಯಾ. ಎರಡೇ ಎರಡು ಸಾಕ್ಷಿ ಕೊಟ್ಟು ನೀನು ರಾಜದ್ರೋಹ ಮಾತುಗಳ

ನ್ನಾಡುತ್ತಿದ್ದೆ ಎಂದು ಈಗ ಬೇಕಾದರೆ ಈಗ ಸಾಬೀತು ಮಾಡುವೆ. ಸರಿ, ಏಳು ವರ್ಷ ಒಳಗೆ ಕೂತರಾಯಿತು. ಹಿಟ್ಟು ಬೀಸಿಬೀಸಿ ಕೈ ಜಟ್ಟು ಕಟ್ಟುವುದು. ಈ ಹೊಳಪಿನ ಕೆನ್ನೆ ಆಗ ಇರಲಾರದು.

ರಮಾನಾಥನಿಗೆ ಜೈಲೆಂದರೆ ರೋಮ ನೆಟ್ಟಗಾಗುತ್ತಿತ್ತು. ಜೈಲಿನ ಭಯವೇ ಅವನನ್ನು ಸಾಕ್ಷಿ ಹೇಳುವಂತೆ ಪ್ರೇರಿಸಿತ್ತು. ಈಗಲೂ ಆ ಭಯವೇ ಅವನನ್ನು ಕಾತರನನ್ನಾಗಿ ಮಾಡಿತು. ಡಿಪ್ಟಿಯು ಭಾವವಿಜ್ಞಾನವನ್ನರಿತವನಾಗಿದ್ದನು. ಹೀಗೆಂದನು— ಅಲ್ಲಿ ಹಲ್ವಾ ಪೂರಿ ಸಿಗಲಾರದು. ಧೂಳು ಸೇರಿದ ಹಿಟ್ಟಿನ ರೊಟ್ಟಿ, ಹುಳ ಹಿಡಿದ ಬೇಳೆಯ ಹುಳಿಯಷ್ಟೇ ತಿನ್ನಲು ಸಿಕ್ಕೀತು. ನಾಲ್ಕು ತಿಂಗಳು ಕತ್ತಲುಕೋಣೆಯನ್ನು ಮಾಡಿಸಿದರೆ ಅಲ್ಲೇ ಸಾಯುವೆ. ಮಾತುಮಾತಿಗೆ ವಾರ್ಡರನ ಬೈಗಳು, ಕೆರವಿನ ಹೊಡೆತ ಎಲ್ಲಾ ತಿನ್ನಬೇಕು. ಏನೆಂದು ಮಾಡಿದಿ?

ರಮಾನಾಥನ ಮುಖವು ಬಿಳುಪಿಟ್ಟಿತು. ನಡುಗುವ ದನಿಯಲ್ಲೆಂದನು ನಿಮಗೆ ಹೀಗೆಯೇ ಮಾಡಬೇಕೆಂಬ ಮನಸ್ಸಿದ್ದರೆ ಹೀಗೆಯೇ ಮಾಡಿರಿ. ಕಳಿಸಿ ಜೈಲಿಗೆ! ಅಲ್ಲೇ ಸತ್ತುಬಿಡುವೆ. ಆ ಮೇಲಾದರೂ ನಿಮ್ಮ ಸಹವಾಸ ತಪ್ಪೀತಲ್ಲಾ.

ಇನ್ಸ್‌ಪೆಕ್ಟರರು ರಮಾನಾಥನ ಕಡೆಗೆ ತಮ್ಮ ಸಹಾನುಭೂತಿಯನ್ನು ಪ್ರದರ್ಶಿಸುತ್ತಾ ಡಿಪ್ಟಿಯವರ ಹತ್ತಿರ ಹೇಳಿದರು— ಪ್ರಮಾಣಕ್ಕೂ ಹೇಳುತ್ತೇನೆ, ನಿಮಗೆ ಜನರ ಸ್ವಭಾವ ಕಂಡುಹಿಡಿಯುವ ಕಲೆಯೇ ಗೊತ್ತಿಲ್ಲ. ಇವರ ಸ್ಥಳದಲ್ಲಿ ನಾನಿರುತ್ತಿದ್ದರೂ ಹೀಗೆಯೇ ಹೇಳುತ್ತಿದ್ದೆ. ಆದರೂ ಇವರು ನಮ್ಮ ವಿರುದ್ಧ ಸಾಕ್ಷಿ ಹೇಳಿಯಾರೆಂದು ನಾನು ನಂಬುವುದಿಲ್ಲ. ನೀವು ನಿಮ್ಮ ಕೆಲಸ ನೋಡಿಕೊಳ್ಳಿ ರಮಾಬಾಬುಗಳ ಚಿಂತೆ ನನಗೆ ಬಿಡಿ.

ಹೀಗೆಂದು ರಮಾನಾಥನ ಕೈಯನ್ನು ಹಿಡಿದುಕೊಂಡು ಎಂದರು— ರಮಾಬಾಬು, ನೀವು ನನ್ನ ಸಂಗಡ ಬನ್ನಿರಿ. ಎರಡು ರಿಕಾರ್ಡು ಕೇಳುವಾ.

ರಮಾನಾಥನು ಸಿಟ್ಟುಗೊಂಡ ಬಾಲಕನಂತೆ ಕೈಬಿಡಿಸಿಕೊಂಡು ಹೇಳಿದನು– ನನ್ನ ಸುದ್ದಿ ಬರಬೇಡಿ ನೀವು. ಜೈಲಿನಲ್ಲಿ ಸಾಯುವವನು ನಾನು.

ಇನ್ಸ್‌ಪೆಕ್ಟರರು ಅವನ ಹೆಗಲ ಮೇಲೆ ಕೈಯನ್ನಿರಿಸಿ ಹೇಳಿದರು— ಜೈಲಿನಲ್ಲಿ ನಿಮ್ಮ ಶತ್ರುಗಳು ಸಾಯಲಿ! ಬಾಯಿಂದ ಹಾಗೆಲ್ಲ ಕೆಟ್ಟ ಶಬ್ದ ಹೇಳಬೇಡಿ ನೀವು.

ಅದೇ ಸಮಯದಲ್ಲಿ ಸರಕಾರಿ ಎಡ್ವೊಕೇಟರು ಮೋಟರಿನಿಂದ ಇಳಿದರು.

## ೩೯

ಹತ್ತು ಗಂಟೆಯ ಹೊತ್ತಿಗೆ ಸರಿಯಾಗಿ ಜಾಲಪ ಮತ್ತು ದೇವೀದೀನರು ಕಚೇರಿಗೆ ತಲುಪಿದರು. ಮೇಲಿನ ಗ್ಯಾಲರಿಯು ಪ್ರೇಕ್ಷಕರಿಂದ ತುಂಬಿತ್ತು ಸ್ಥಳವಿಲ್ಲದೆ ಎಷ್ಟೋ ಜನರು ಹೊರ ಜಗಲಿಯಲ್ಲಿ ನಿಂತಿದ್ದರು. ಜಾಲಪ ಗ್ಯಾಲರಿಯಲ್ಲಿ ಹೋಗಿ ಕೂತಳು. ದೇವೀದೀನನು ಜಗಲಿಯಲ್ಲಿ ನಿಂತನು.

ಹನ್ನೊಂದು ಹೊಡೆಯುವಾಗ ಅಭಿಯೋಗದ ತನಿಖೆಗಾರಂಭ ವಾಯಿತು. ಮೂರು ಗಂಟೆಗೆ ರಮಾನಾಥನ ಸಾಕ್ಷಿಗಾರಂಭವಾಯಿತು. ಅವನು ಸಾಕ್ಷಿಯ ಪಂಜರಕ್ಕೆ ಬಂದು ನಿಂತಾಗ ಜನರ ಕಿವಿಗಳು ನೆಟ್ಟ ಗಾದುವು. ಜಾಲಪಳಿಗೆ ರಮಾನಾಥನು ತನ್ನನ್ನೊಂದು ಬಾರಿ ನೋಡಿದ ರಾಗುತ್ತಿತ್ತೆಂದು ತೋರಿತು. ಎದ್ದು ನಿಂತಳು ಆದರೆ ತಲೆ ತಗ್ಗಿಸಿ ನಿಂತ ರಮಾನಾಥನು ಕಣ್ಣನ್ನು ಮೇಲಕ್ಕೆತ್ತಲೇ ಇಲ್ಲ.

ರಮಾನಾಥನ ಹೇಳಿಕೆಗೆ ಆರಂಭವಾಯಿತು. ಮೊದಲ ವಾಕ್ಯವನ್ನು ಕೇಳಿ ಜಾಲಪಳ ಮೈಯಲ್ಲಿ ರೋಮಾಂಚವೆದ್ದಿತು, ಎರಡನೆಯ ವಾಕ್ಯದಿಂದ ಅವಳ ಮುಖ ಕೆಂಪೇರಿತು, ಮೂರನೆಯ ವಾಕ್ಯವು ಅವಳ ಮುಖದ ಕಳೆಯನ್ನು ಕುಂದಿಸಿತು. ನಾಲ್ಕನೆಯ ವಾಕ್ಯವನ್ನು ಕೇಳಿದೊಡನೆ ಆಕೆ ಒಂದು ನಿಟ್ಟುಸಿರು ಬಿಟ್ಟು ಅತ್ತ ಕಡೆ ಗಮನ ಕೊಡುವುದನ್ನೇ ನಿಲ್ಲಿಸಿದಳು. ಎಲ್ಲೆಲ್ಲಿಯೂ ಮೌನ ನೆಲಸಿತ್ತು. ಅವಳು ಒಂದೆರಡು ಬಾರಿ ಕೆಮ್ಮಿದಳು. ರಮಾನಾಥನಿಗೆ ಇದು ಕೇಳಿಸಿದುದರಿಂದಲೋ ಅಥವಾ ಆತ್ಮಗ್ಲಾನಿಯ ಭಾವ ಉದಯವಾದುದರಿಂದಲೋ ಏನೇ ಇರಲಿ, ಅವನ ಸ್ವರ ಸ್ವಲ್ಪ ತಗ್ಗಿತು. ತಲೆಯಂತೂ ಮತ್ತಷ್ಟು ತಗ್ಗಿತು.

ಜಾಲಪನ ಹತ್ತಿರವೇ ಕೂತಿದ್ದ ಒಬ್ಬಳು ಮಹಿಳೆಯೆಂದಳು– ಇವನಿಗೆ ಗುಂಡು ಹಾರಿಸಿ ಕೊಲ್ಲಬೇಕೆಂದು ಮನಸ್ಸಾಗುತ್ತಿದೆ. ಚಿಕ್ಕದೊಂದು ಹುದ್ದೆಯ ಲೋಭದಿಂದ ನಿರಪರಾಧಿಗಳ ಕೊರಳನ್ನು ಕತ್ತರಿಸುವುದಕ್ಕೂ ಹಿಂಜರಿಯದ ಇಂತಹ ಜನರು ಈ ದೇಶದಲ್ಲಿ ಎಷ್ಟು ಮಂದಿ ಇದ್ದಾರೋ ?

ಜಾಲಪ ಮಾತನಾಡಲಿಲ್ಲ.

ಕನ್ನಡಕವನ್ನಿಟ್ಟಿದ್ದ ಇನ್ನೊಬ್ಬ ಸ್ತ್ರೀಯೆಂದಳು— ಈ ನಿರ್ಭಾಗ್ಯ ದೇಶವನ್ನು ದೇವರೇ ಕಾಪಾಡಬೇಕು! ಇವನಿಗೆ ಗವರ್ನರ್ ಪದವಿ ಸಿಗಲಿಕ್ಕಿಲ್ಲ. ಹೆಚ್ಚೆಂದರೆ ಒಂದು ಕ್ಲಾರ್ಕ ಕೆಲಸ ಸಿಕ್ಕೀತು. ಇಷ್ಟಕ್ಕೋಸ್ಕರವೇ ತನ್ನ ಆತ್ಮವನ್ನು ಹಿಂಸಿಸಿಕೊಳ್ಳುತ್ತಿದ್ದಾನೆ. ಮನೆಯಲ್ಲಿ ಅನ್ನಕ್ಕೂ ಗತಿಯಿಲ್ಲದ ಯಾರೋ ನೀಚನಿರಬೇಕು.

ಮೂರನೆಯವಳು ಕನ್ನಡಕದವಳೊಡನೆ ಹೇಳಿದಳು– ಮನುಷ್ಯ 'ಫ್ಯಾಶನೇಬಲ್ಲಾ'ಗಿ ಕಾಣುತ್ತಾನೆ. ಇಂಥವನು ನಿನಗೆ ಗಂಡನಾಗಿ ಸಿಕ್ಕಿದರೆ ಏನು ಮಾಡುತ್ತಿದ್ದಿ ?

'ಮೂಗು ಕೊಯ್ದು ಕೈಯಲ್ಲಿ ಕೊಡುತ್ತಿದ್ದೆ.'

'ನಾನು ಏನು ಮಾಡುತ್ತಿದ್ದೆ, ಗೊತ್ತೆ ?'

'ಏನು ಗುಂಡು ಹಾರಿಸುತ್ತಿದ್ದಿಯೆ ?'

'ಅಲ್ಲಲ್ಲ, ಪೇಟೆಯ ಮಧ್ಯದಲ್ಲಿ ನಿಲ್ಲಿಸಿ ಕೆರದಿಂದ ಐನೂರು ಹೊಡೆತ ತಿನಿಸುತ್ತಿದ್ದೆ.'

'ಅವನ ಮೇಲೆ ನಿನಗೆ ಸ್ವಲ್ಪವೂ ದಯೆ ಬಾರದೆ?'

'ಹುಂ, ದಯೆ! ಇಷ್ಟು ಮಾಡಿದರೂ ಪೂರಾ ಶಿಕ್ಷೆ ಸಂದಂತಾಗಲಾರದು. ದೊಡ್ಡ ಗುಡ್ಡದ ಮೇಲಿಂದ ಕೆಳಗೆ ದೂಡಬೇಕು. ಆಗ ಸ್ವಲ್ಪ ಸಮಾಧಾನವಾದೀತು. ಇಂಥವರನ್ನು ಅಮೇರಿಕದಲ್ಲಾಗುತ್ತಿದ್ದರೆ ಜೀವಂತ ಸುಡುತ್ತಿದ್ದರು.'

ಒಬ್ಬಳು ವೃದ್ಧೆ ಈ ಯುವತಿಯರನ್ನು ತಿರಸ್ಕರಿಸುತ್ತ ಹೇಳಿದಳು— ಸುಮ್ಮನೆ ಮಾತಾಡಿ ಬಾಯಿಯನ್ನೇಕೆ ಹೊಲಸು ಮಾಡಿಕೊಳ್ಳುತ್ತೀರಿ ?

ಅವನು ಘೃಣಾಯೋಗ್ಯನಲ್ಲ, ದಯಾಪಾತ್ರನು. ಅವನ ಮುಖವನ್ನು ನೋಡಿ, ಎಷ್ಟು ಬಿಳುಪೇರಿದೆ? ಅವನ ಮನಸ್ಸಿಗೊಪ್ಪಿ ಅವನು ಹೇಳುವಂತೆ ಕಾಣು ತ್ತಿದೆಯೆ? ಪೋಲೀಸರ ಗದರಿಕೆಗೆ ಹೆದರಿಹೋಗಿದ್ದಾನೆ. ಒಂದೊಂದು ಮಾತೂ ಅವನ ಹೃದಯವನ್ನು ಚೀರಿಕೊಂಡು ಹೊರಬರುವಂತೆ ಕಾಣುತ್ತಿದೆ.

ಕನ್ನಡಕದವಳು ವ್ಯಂಗದಿಂದ ಹೇಳಿದಳು— ಕಾಲಿಗೆ ಮುಳ್ಳು ನಾಟು ವಾಗ, ಯಾರಿಗೆ ನೋವಾಗುವುದಿಲ್ಲ?........

ಜಾಲಪಳಿಗೆ ಮತ್ತೆ ಅಲ್ಲಿ ಇರಲಿಕ್ಕಾಗಲಿಲ್ಲ, ರಮಾನಾಥನು ಹೇಳು ತ್ತಿರುವುದೆಲ್ಲಾ ಸುಳ್ಳೆಂದು ಎದ್ದು ಹೇಳಿಯೇ ಬಿಡುವೆನೆಂದು ಎಷ್ಟೋ ಸಲ ನಿರ್ಧರಿಸಿದಳು. ಆದರೂ ತಾನೇಕೆ ತಡ ಮಾಡುತ್ತಿರುವೆನೆಂಬುದು ಆಕೆಗೆ ತಿಳಿಯಲಿಲ್ಲ. ತಾನು ಅಷ್ಟು ಹೇಡಿ ಇರುವೆನೆ? ಪೋಲೀಸರು ಅವಳನ್ನು ತಮ್ಮ ಶತ್ರುವೆಂದೆಣಿಸಿಯಾರು, ಎಣಿಸಿಕೊಳ್ಳಲಿ. ಈ ಬಡವರ ಪ್ರಾಣ ಉಳಿಯುವುದಲ್ಲಾ? ಒಂದು ಸಲ ಮಾತು ಕುತ್ತಿಗೆಯವರೆಗೆ ಬಂದಿತ್ತು. ಆದರೆ ಪರಿಣಾಮದ ಭಯವು ನಾಲಗೆಯನ್ನು ತಡೆದು ಹಿಡಿಯಿತು. ಕೊನೆಗೆ ಅವಳು ಅಲ್ಲಿಂದ ಎದ್ದು ಹೋಗುವುದರಲ್ಲೇ ತನ್ನ ಕ್ಷೇಮವಿದೆಯೆಂದರಿತು ಹೊರಗೆ ಬಂದಳು. ದೇವೀದೀನನೊಡನೆ ಮನೆಯ ಕಡೆಗೆ ಹೊರಟಳು. ದೇವೀದೀನನ ಹತ್ತಿರ ಕೇಳಿದಳು-- ತಂದೆ, ಇದೇ ಕೊನೆಯ ತೀರ್ಮಾನವೆ? ಇನ್ನು ಅಪೀಲಿಲ್ಲವೆ?

‘ಉಂಟು. ಹೈಕೋರ್ಟಿನವರೆಗೆ ಹೋದರೆ ಹೋಗಬಹುದು.’

‘ನಾನು ಇದ್ದ ಸಂಗತಿಯನ್ನೆಲ್ಲಾ ಜಡ್ಜರ ಹತ್ತಿರ ಹೋಗಿ ಹೇಳಿದ ರೇನಾಗುವುದು?’

‘ಜಡ್ಜರ ಹತ್ತಿರ!’

‘ಹಾಂ!’

‘ಈ ವಿಷಯದಲ್ಲಿ ನಾನೇನೂ ಹೇಳಲಾರೆ ದೊಡ್ಡ ಜನರು. ಅವರ ಮರ್ಜಿ ಹೇಗೆಂದು ನಂಬುವುದು?’

'ಯಾಕೆ, ಪೋಲೀಸರ ಹತ್ತಿರ ನಿಮ್ಮ ಸಾಕ್ಷಿಗಾರನು ಸುಳ್ಳು ಸಾಕ್ಷಿ ಹೇಳಿದನೆಂದು ಅವರು ಎನ್ನಲಾರರೆ?'

'ಹೇಳಲಿಕ್ಕೇನು? ಹೇಳಲೂಬಹುದು.'

'ಹಾಗಾದರೆ ಇಂದೇ ಅವರನ್ನು ಕಾಣಲು ಹೋಗುವೆ.'

'ಆದರೆ ಅಪಾಯದ ಸಂಗತಿ.'

'ಏನು ಅಪಾಯವಿದೆ? ಹೇಳು.'

'ರಮೂನ ಮೇಲೆ ಸುಳ್ಳು ಸಾಕ್ಷಿಯ ಮೊಕದ್ದಮೆ ನಡೆಯಿಸಬಹುದು.'

'ನಡೆಯಿಸಲಿ. ಮಾಡಿದ್ದುಣ್ಣೋ ಮಾಹಾರಾಯಾ.'

'ಮತ್ತೊಂದು ಸಂಶಯವಿದೆ. ಅದು ಬಹಳ ಭಯಂಕರ.'

'ಅದೇನು?'

'ಪೋಲೀಸು ಮಂದಿ ಬಹಳ ಹೇಡಿತನದ್ದಾಗಿರುತ್ತದೆ. ಯಾರಿಗಾದರೂ ಅಪಮಾನ ಮಾಡುವುದೆಂದರೆ ಇವರಿಗೆ ಬಹಳ ಸಂತೋಷ. ನಿನ್ನನ್ನು ಸೆರೆ ಹಿಡಿಯಲೂಬಹುದು. ಸಾಕ್ಷಿಯವನು ಎರಡೆಣಿಸುವ ಸಂದರ್ಭದಲ್ಲಿ ಪೋಲೀಸರು ಅವನ ಮನೆಮುಂದಿಗೆ ಕಷ್ಟಕೊಟ್ಟು ಅವನನ್ನು ಅಂಜಿಸುವುದುಂಟು.'

ಜಾಲಪ ಬೆಚ್ಚಿ ಬಿದ್ದಳು. ತಾನು ಸೆರೆಯಾಗುವೆನೆಂದು ಆಕೆಗೆ ಭಯವಿರಲಿಲ್ಲ. ಪೋಲೀಸರು ರಮೂನ ಮೇಲೆ ಎಲ್ಲಾದರೂ ಅತ್ಯಾಚಾರ ಮಾಡಿದರೆ? ಈ ಭಯವು ಅವಳನ್ನಾವರಿಸಿಬಿಟ್ಟಿತು. ಆಕೆಗೆ ನೂರಾರು ಮೈಲಿಗಳ ಪ್ರಯಾಣ ಮಾಡಿ ಬಂದಂತೆ ಬಳಲಿಕೆಯಾಯಿತು. ಅವಳ ಸತ್ಸಾಹಸವು ಮಂಜಿನಂತೆ ಕರಗಿ ಹೋಯಿತು.

'ತಂದೆ, ಇನ್ನೊಮ್ಮೆ ಅವರನ್ನು ನಾನು ನೋಡುವಂತಿಲ್ಲವೆ?'

'ಇಲ್ಲ. ಪಹರೆಯನ್ನು ಬಿಗಿ ಮಾಡಿರಬಹುದು. ಹಾಗೆ ಭೇಟಿಯಾದರೂ ಇನ್ನು ಹೇಳಿಕೆಯನ್ನು ಬದಲಿಸುವಂತಿಲ್ಲ.'

‘ ಹಾಗಾದರೆ ನನ್ನ ಕೆಲಸವಾಯಿತು. ನಾನು ಮನೆಗೆ ಹೋಗುವು ದೊಳ್ಳೆಯದು. ’

‘ ಬೇಡವ್ವಾ ಬೇಡ. ನೀನಿಲ್ಲದಿದ್ದರೆ ನಮಗಾಗಲಿಕ್ಕೇ ಇಲ್ಲ. ಶ್ರೀಮಾನ್ಜನವೇನಾಗುವುದೆಂದು ನೋಡಿಕೊಂಡು ಹೋದರಾಯಿತು. ’

ಜಾಲಪ ಮತ್ತೆ ಮಾತಾಡಲಿಲ್ಲ. ರಮಾನಾಥನ ಹತ್ತಿರ ಒಮ್ಮೆ ಮಾತಾಡಲಿಕ್ಕಾಗಿದ್ದರೆ.... ಇದ್ದರೆ.... ! ಅವನಿಗೆ ಏನೇನು ಹೇಳುತ್ತಿದ್ದಳೋ ಆ ಶಬ್ದಗಳ ಸಾಗರವೇ ಆಕೆಯ ಮಸ್ತಿಷ್ಕದಲ್ಲಿ ತೆರೆಮಸಗುತ್ತಿತ್ತು. ಅವಳ ಮನಸ್ಸು ಹೀಗೆನ್ನುತ್ತಿತ್ತು— ನಿನ್ನ ಧನವೈಭವಗಳು ನಿನ್ನನ್ನು ಉದ್ಧಾರ ಮಾಡಲಿ. ನಾನವುಗಳನ್ನು ಕಣ್ಣೆತ್ತಿ ನೋಡೆನು. ನೆತ್ತರದಿಂದ ತೊಯ್ದ ನಿನ್ನ ಕೈಗಳು ನನ್ನನ್ನು ಮುಟ್ಟಿದರೆ ನನ್ನ ಮೈಯಲ್ಲಿ ಬೊಕ್ಕೆ ಏಳಬಹುದು. ಹಣ ಮತ್ತು ಹುದ್ದೆಯ ಸಲುವಾಗಿ ತನ್ನ ಆತ್ಮವನ್ನು ಮಾರಿಕೊಂಡವನನ್ನು ನಾನು ಮನುಷ್ಯನೆಂದೆಣಿಸುವುದಿಲ್ಲ. ನೀನು ಮನುಷ್ಯನಲ್ಲ, ನೀನು ಪಶುವೂ ಅಲ್ಲ, ನೀನು ಹೇಡಿ ! ಹೇಡಿ !

ಜಾಲಪಳ ಮುಖಮಂಡಲವು ತೇಜೋಮಯವಾಯಿತು. ಗರ್ವದಿಂದ ಆಕೆಯ ಕೊರಳು ನೇರವಾಯಿತು. ಜರಿ ಶಾಲಿನ ಮುಂಡಾಸು ಕಂಡು ಜಾಲಪಳು ಆನಂದದಿಂದ ಕುಣಿದಾಡುವಳೆಂದು ಬಗೆದೆಯಾ ? ನೀನು ಕುದುರೆಯ ಮೇಲಲ್ಲ ಆಕಾಶದವರೆಗೆ ಏರು, ನನ್ನ ದೃಷ್ಟಿಯಲ್ಲಿ ನೀನು ಕೊಲೆ ಪಾತಕಿ, ಪೂರಾ ಕೊಲೆಪಾತಕಿ. ಇಷ್ಟು ಧನಲೋಭವೆ. ಜಾಲಪಳು ನಿನ್ನ ಪಾಲನೆಗೆ ಬಾಯಿ ಬಿಡುತ್ತಿಲ್ಲ. ಇವೇ ಸಂತಪ್ತ ಭಾವನೆಗಳಲ್ಲಿ ಮುಳುಗಿ ಜಾಲಪ ಮನೆಯನ್ನು ಮುಟ್ಟಿದಳು.

## ೪೦

ಒಂದು ತಿಂಗಳು ಕಳೆಯಿತು. ಜಾಲಪಳ ಆ ಒಂದು ತಿಂಗಳ ಉದ್ವೇಗವನ್ನು ಹೇಳುವಂತಿಲ್ಲ. ಹುಚ್ಚಳಂತಾಗಿದ್ದಳು. ರಮಾನಾಥನನ್ನು ಹೃದಯದಿಂದ ಕಿತ್ತೊಗೆದಿದ್ದಳು. ಅವನ ಮೇಲೆ ಅವಳಿಗೀಗ ಕ್ರೋಧವಿಲ್ಲ, ದಯೆಯಿಲ್ಲ, ಆದರೆ ಉದಾಸೀನತೆ ಇತ್ತು. ಈಗ ಅವನು ಸತ್ತನೆಂಬ ಸುದ್ದಿ

ಕೇಳಿದರೂ ಆಕೆ ಅಳುತ್ತಿದ್ದಿಲ್ಲ. ಎರಡು-ಎರಡೂವರೆ ವರುಷಗಳ ಹಿಂದೆ ಕೊರಳಿಗೆ ಬಿದ್ದಿದ್ದ ಪ್ರಣಯಬಂಧನವು ಈಗ ಮುರಿದುಹೋಗಿತ್ತು. ಈ ನಡುವೆ ರಮಾನಾಥನು ಎಷ್ಟೋ ಸಲ ದೇವಿದೀನನ 'ಮನೆಯಾಚಿನಿಂದ ಹಾದು ಹೋಗಿದ್ದನು. ಮನೆ ಹತ್ತಿರ ಹತ್ತಿರವಾದಂತೆ ಅವನ ಕಣ್ಣುಗಳು ಯಾರನ್ನೋ ಹುಡುಕುವಂತಿದ್ದುವು. ಆದರೆ ಜಾಲಪ ಆ ಕಡೆ ಕಣ್ಣು ಹಾಯಿಸುತ್ತಿದ್ದಿಲ್ಲ. ಆದರೂ ಪ್ರಣಯಬಂಧನದ ಗುರುತು ಪೂರಾ ತೊಡೆದು ಹೋಗಿರಲಿಲ್ಲ. ರಮಾನಾಥನ ಪ್ರೇಮವಿಹ್ವಲ ಮೂರ್ತಿಯು ಒಮ್ಮೊಮ್ಮೆ ಆಕೆಯ ಹೃದಯಾಂತರಾಳವನ್ನು ಹೊಕ್ಕು ಅಲ್ಲಿದ್ದ ತಮವನ್ನು ಒಂದು ಕ್ಷಣದ ವರೆಗೆ ಹರಿಯಿಸಿ ಮರಳಿ ಮಾಯವಾಗುತ್ತಿತ್ತು.

ಮನೆಯಲ್ಲಿ ಮಾತುಮಾತಿಗೆ ಕೆಂಡವಾಗುತ್ತಿದ್ದ ಜಾಲಪಳು ಇಂದು ಸೇವೆ, ತ್ಯಾಗ, ಮತ್ತು ಸಹಿಷ್ಣುತೆಗಳ ಮೂರ್ತಿಯಾಗಿದ್ದಳು. ಮನೆಗೆಲಸ ವನ್ನೆಲ್ಲಾ ಅವಳೇ ಮಾಡುತ್ತಿದ್ದಳು. ಮುದುಕಿ ಬೇಡಬೇಡವೆಂದು ಎಷ್ಟುಹೇಳಿದರೂ ಆಕೆ ಕೇಳುತ್ತಿದ್ದಿಲ್ಲ. ಸ್ಪೃಶ್ಯಾಸ್ಪೃಶ್ಯತೆಯ ವಿಚಾರ ಎಂದೋ ಮಾಯವಾಗಿತ್ತು. ಇಬ್ಬರಲ್ಲಿ ತಾಯಿ-ಮಕ್ಕಳೊಳಗಿನ ಪ್ರೇಮ ವುಂಟಾಗಿತ್ತು.

ಮೊಕದ್ದಮೆಯ ಕೆಲಸವೆಲ್ಲ ಮುಗಿಯಿತು. ದೇವೀದೀನನು ತೀರ್ಮಾ ನವು ಅಚ್ಚಾಗಿದ್ದ ಪೇಪರನ್ನು ತಂದು ಜಾಲಪಳಿಗೆ ಕೊಟ್ಟನು. ಅವಳು ಒಂದು ಉಸಿರಿನಲ್ಲಿ ಎಲ್ಲವನ್ನೂ ಓದಿಹಾಕಿದಳು. ತೀರ್ಮಾನದಲ್ಲಿ ರಮಾ ನಾಥನ ಹೊಗಳಿಕೆ ಅಲ್ಲಲ್ಲಿ ಎದ್ದು ಕಾಣುತ್ತಿತ್ತು. ಅವನ ಹೇಳಿಕೆಯೇ ತೀರ್ಮಾನದ ದೊಡ್ಡ ಅವಲಂಬವಾಗಿತ್ತು.

ದೇವೀದೀನನು ಕೇಳಿದನು— ತೀರ್ಮಾನ ಅಚ್ಚಾಗಿದೆಯೆ?

'ಹೌದು.'

'ಯಾರುಯಾರಿಗೆ ಶಿಕ್ಷೆಯಾಗಿದೆ?'

'ಒಬ್ಬರನ್ನೂ ಬಿಡಲಿಲ್ಲ. ಐವರಿಗೆ ಹತ್ತು-ಹತ್ತು ವರುಷ. ಎಂಟು ಮಂದಿಗೆ ಐದೈದು ವರುಷ. ಒಬ್ಬ ದಿನೇಶನಿಗೆ ಗಲ್ಲು.'

' ಯಾರಿಗೆ? ದಿನೇಶನಿಗೆ ಗಲ್ಲಿ ! ಪಾಪ ಮುದಿತಾಯಿ, ಹೆಂಡತಿ, ಮಕ್ಕಳುಮರಿಗಳು ಎಲ್ಲ ಇದ್ದಾರೆ. ಇಲ್ಲಿ ಯಾವುದೋ ಶಾಲೆಯಲ್ಲಿ ಮಾಸ್ತರ ನಾಗಿದ್ದನು. ಒಂದು ಬಾಡಿಗೆ ಮನೆಯಲ್ಲಿರುತ್ತಿದ್ದನು. ಪಾಪ ! ಇನ್ನು ಆ ಕುಟುಂಬದ ಗತಿ ಏನು? ಉಳಿದವರಿಗಾದರೂ ಚಿಂತಿಲ್ಲ. ಎಂಟು ಜನರಿಗೆ ಮದುವೆಯೇ ಆಗಲಿಲ್ಲ. ಉಳಿದೈವರಿಗೆ ಮದುವೆಯಾಗಿದ್ದರೂ, ಮನೆಯಲ್ಲಿನೂ ಕಡಮೆಯಿಲ್ಲ. '

' ಆ ದಿನೇಶನ ಮನೆಯನ್ನು ಪತ್ತೆ ಹಚ್ಚುವಿಯಾ? '

' ಓ, ಅದರಲ್ಲೇನು ಕಷ್ಟ. '

' ಯಾವಾಗ ಹೊರಡುವಿ ನಾನು ಸಹ ಬರುವೆ. ಈಗ ಹೋದರೂ ಹೋಗಬಹುದು. ಹೊತ್ತಿದೆ. '

' ಮೊದಲು ನಾನು ನೋಡಿ ಬರುತ್ತೇನೆ. ನನ್ನೊಟ್ಟಿಗೆ ಅಲೆಯುವುದೇ ಒಂದು ಕೆಲಸವೆ? '

ದೇವೀದೀನನು ಹೋದಮೇಲೆ ಜಾಲಪ ಮತ್ತೆ ಸಮಾಚಾರ ಪತ್ರ ವನ್ನು ಕೈಗೆ ತೆಗೆದುಕೊಂಡಳು. ಆದರೆ ಅವಳ ಧ್ಯಾನವೆಲ್ಲಾ ದಿನೇಶನಲ್ಲಿ ಕೇಂದ್ರೀಕೃತವಾಗಿತ್ತು. ಪಾಪ, ಗಲ್ಲು ಶಿಕ್ಷೆ ದೊರೆಯಿತೆಂದು ಕೇಳಿದಾಗ ಅವನ ಮನೆಮಂದಿ ಎಷ್ಟು ಗೋಳಾಡಬಹುದು. ಶಾಲೆಯ ಉಪಾಧ್ಯಾಯ ನಿದ್ದನೆಂದಮೇಲೆ ಊಟ ಬಹಳ ಕಷ್ಟದಿಂದಲೇ ಸಾಗುತ್ತಿದ್ದಿರಬಹುದು. ಇವರಿಗೆ ಇನ್ನು ಗತಿ ಏನು? ಈಗವಳಿಗೆ ರಮಾನಾಥನು ಒಬ್ಬ ರಾಕ್ಷಸ ನಿರುವನೆಂದು ಭಾಸವಾಯಿತು. ಅವನನ್ನು ಮೊದಲೇ ಯಾರಾದರೂ ಕೊಂದು ಹಾಕಿದ್ದರೆ ಇಷ್ಟು ಜನರ ಮೇಲೆ ಈ ಬಗೆಯ ಅತ್ಯಾಚಾರ ವಾಗುತ್ತಿದ್ದಿಲ್ಲ.

ಸಂಜೆಯಾಯಿತು ದೇವೀದೀನನು ಇನ್ನೂ ಬಂದಿರಲಿಲ್ಲ. ಬಾಗಿಲಲ್ಲಿ ಒಂದು ಮೋಟಾರು ಬಂದು ನಿಂತಿತು. ರಮಾನಾಥನು ಅದರಿಂದ ಕೆಳ ಗಿಳಿದು ಜಗ್ಗೋನನ್ನು ಕಂಡು ಕೇಳಿದನು-- ಎಲ್ಲಾ ಕ್ಷೇಮವಷ್ಟೆ? ತಂದೆ ಎಲ್ಲಿರುವನು.

ಮುದುಕಿ ಆವನ ಕಡೆಗೆ ಒಮ್ಮೆ ನೋಡಿ ಆ ಮೇಲೆ ಮುಖ ತಿರುಗಿಸಿ ಬಿಟ್ಟಳು. ಹೀಗಂದಳು— ಎಲ್ಲಿ ಹೋದರೋ ಗೊತ್ತಿಲ್ಲ.

ರಮಾನಾಥನು ಭಂಗಾರದ ನಾಲ್ಕು ಬಳೆಗಳನ್ನು ಮುದುಕಿಯ ಕಾಲಮೇಲಿರಿಸಿ ಹೇಳಿದನು— ತಾಯಿ, ನಿನಗಾಗಿ ತಂದಿರುವೆ ತೊಟ್ಟು ನೋಡು. ದೊಡ್ಡದಾಗಬಹುದೆ?

ಜಗ್ಗೋ ಬಳೆಗಳನ್ನು ತೆಗೆದು ನೆಲದಮೇಲೊಗೆದು ಬಿಟ್ಟು ಕಣ್ಣು ಕೆರಳಿಸಿ ಹೇಳಿದಳು— ದೇವರ ದಯೆಯಿಂದ ಎಷ್ಟೋ ಬಳೆಗಳನ್ನು ತೊಟ್ಟಿರುವೆನು. ಈಗಲೂ ಸೇರೆರಡುಸೇರು ಚಿನ್ನ ಒಳಗಿದೆ, ಆದರೆ ಉಂಡುದಾಗಲೀ, ಉಟ್ಟುದಾಗಲೀ, ತೊಟ್ಟುದಾಗಲೀ ನಮ್ಮ ಸ್ವಂತದ ಪರಿಶ್ರಮದಿಂದಲ್ಲದೆ, ಯಾರೊಬ್ಬರ ಕುತ್ತಿಗೆ ಹಿಚುಕಿ ಪಾಪಕ್ಕೆ ಪಕ್ಕಾಗಲಿಲ್ಲ. ನಿನ್ನಂತಹ ಕುಪುತ್ರನಿಗೆ ಜನ್ಮವಿತ್ತ ಮಾತೆಗೆ ಧಿಕ್ಕಾರವಿರಲಿ! ಈ ಪಾಪದ ಆರ್ಜನೆಯನ್ನು ಹಿಡಕೊಂಡು ವಧುವಿಗೆ ತೋರಿಸಬಂದಿರುವೆಯಾ? ಇಷ್ಟು ದಿನ ಅವಳೊಡನಿದ್ದೂ ನಿನ್ನ ಲೋಭಿ ಕಣ್ಣುಗಳಿಗೆ ಅವಳ ಸ್ವರೂಪ ತಿಳಿಯಲಿಲ್ಲ. ನಿನ್ನಂತಹ ರಾಕ್ಷಸನು ಆಕೆಯಂತಹ ದೇವಿಯ ಕೈ ಹಿಡಿಯಬಾರದಾಗಿತ್ತು! ನೀನು ನಿನ್ನ ಕ್ಷೇಮವನ್ನು ಅಪೇಕ್ಷಿಸುವುದಾದರೆ, ಬಂದಹಾಗೆ ಹೋಗು. ಅವಳ ಮುಂದೆ ಹೋಗಿ ಏಕೆ ಮರ್ಯಾದೆ ಕಳೆದುಕೊಳ್ಳುವೆ? ಪೋಲೀಸರ ಕೈಯಿಂದ ಗಾಯಗೊಂಡು, ಪೆಟ್ಟುತಿಂದು ಜೈಲನ್ನನುಭವಿಸಿ ನೀನು ಇಲ್ಲಿಗೆ ಬಂದಿದ್ದರೆ ಅವಳು ನಿನಗೆ ಆರತಿ ಎತ್ತುತ್ತಿದ್ದಳು. ನಿನ್ನ ಕಾಲನ್ನು ತೊಳೆದು ನೀರು ಕುಡಿಯುತ್ತಿದ್ದಳು. ತಾವು ಮಜೂರಿ ಮಾಡಿಯಾಗಲಿ, ಉಪವಾಸ ವಿದ್ದಾಗಲಿ, ಹರಕು ಚಿಂದಿಗಳನ್ನು ತೊಟ್ಟಾಗಲಿ ಜೀವಿಸಿಕೊಂಡಿದ್ದರೂ ಇತರರಿಗೆ ಹಾನಿ ಮಾಡದೆ ಬಾಳುವ ಹೆಂಗಸರ ಜಾತಿಯವಳಾಕೆ. ನೀನು ನನ್ನ ಮಗನಾಗಿದ್ದರೆ ನಿನಗೆ ವಿಷ ಕುಡಿಸುತ್ತಿದ್ದೆ. ನನ್ನ ಮುಂದೆ ನಿಂತಿರುವುದೇಕೆ? ಹೋಗಬಾರದೆ? ನಾನು ನಿನಗೆ ಏನಾದರೂ ಕೊಡುವುದುಂಟೆ?

ರಮಾನಾಥನು ತಲೆ ತಗ್ಗಿಸಿ ಎಲ್ಲವನ್ನೂ ಕೇಳಿ ಆ ಹತಕಂಠದಿಂದ ಹೇಳಿದನು— ಹೌದು, ತಾಯಿ, ನಾನು ಕೆಟ್ಟುದನ್ನೇನೋ ಮಾಡಿದೆ. ಇದಕ್ಕಾಗಿ ಸಾಯುವವರೆಗೂ ನಾನು ಲಜ್ಜೆ ಪಟ್ಟುಕೊಂಡಿರಬೇಕಾಗಿದೆ.

ಆದರೆ ನೀನು ಹೇಳುವಷ್ಟು ನೀಚನು ಮಾತ್ರ ನಾನಲ್ಲ. ಪೋಲೀಸರು ನನ್ನ ಮೇಲೆ ಮಾಡಿದ ಅತ್ಯಾಚಾರದ ಸಂಗತಿಯನ್ನು ಕೇಳಿದ್ದರೆ ನೀನು ಹೀಗೆ ಹೇಳುತ್ತಿದ್ದಿಲ್ಲ.

ಜಾಲಪಳಿಗೆ ಮಾತುಗಳ ಸ್ವರ ಕೇಳಿಸುತ್ತಿತ್ತು. ಮೆಟ್ಟಿಲ ಬಳಿ ಬಂದಳು. ರಮಾನಾಥನನ್ನು ನೋಡಿದಳು. ಆ ಕೊನೆಯ ವಾಕ್ಯವನ್ನು ಕೇಳಿದವಳೇ ಗಿಡಗನಂತೆ ಹಾರಿ ಬಂದು ಅವನ ಮುಂದೆ ನಿಂತು, ನೇತ್ರಗಳಿಂದ ವಿಷೋಕ್ತಿವಾದ ಬಾಣಗಳ ಮಳೆಗರೆಯುತ್ತಾ, ಹೇಳಿದಳು– ನೀವು ಗದರಿಕೆಗೆ ಬೆದರಿಕೆಗಳಿಗೊಳಗಾಗುವ ಮನುಷ್ಯರಾದರೆ ನಿಮ್ಮನ್ನು ಹೇಡಿಯೆಂದೆನ್ನಬೇಕು ಮನುಷ್ಯನೆಂದುಕೊಳ್ಳುವ ಯಾವ ಅಧಿಕಾರವೂ ನಿಮಗಿರುವುದಿಲ್ಲ. ಏನು ಅತ್ಯಾಚಾರವದು ? ಹೇಳಿ ನಾವೂ ಕೇಳುತ್ತೇವೆ. ನಗನಗುತ್ತಾ ತಲೆ ಕೆಡಿಸಿಕೊಂಡವರಿದ್ದಾರೆ, ತಮ್ಮ ಮಕ್ಕಳು ಮೃತ್ಯುವಿಗೆ ತುತ್ತಾಗುವುದನ್ನು ಕಣ್ಣಾರೆ ನೋಡಿದವರಿದ್ದಾರೆ. ಆದರೆ ಸತ್ಯವನ್ನು ಬಿಟ್ಟವರಿಲ್ಲ. ನೀವೂ ಮನುಷ್ಯರಾದರೆ ಅವರ ಗದರಿಕೆಗೇಕೆ ಬೆದರಿದಿರಿ? ಎದೆಯನ್ನು ಹೊರಳಿಸಿ ನಿಂತು 'ಹೊಡೆಯಿರಿ ಗೋಲಿ. ಸುಳ್ಳು ಹೇಳಲಾರೆ' ನೆಂದು ಏತಕ್ಕೆ ಹೇಳಲಾರದಾದಿರಿ? ಆತ್ಮದ ರಕ್ಷಣೆ ಮಾಡಲೆಂದೇ ದೇಹದೊಳಗೆ ಆತ್ಮವನ್ನಿರಿಸಿದುದು. ಅದರ ಸರ್ವ ನಾಶವನ್ನು ಮಾಡಲೆಂದಲ್ಲ. ಇಷ್ಟು ಪಾಪ ಮಾಡಿದ್ದಕ್ಕೆ ಸಿಕ್ಕಿದ ಬಹುಮಾನವಾದರೂ ಏನು ? ನಾವು ಕೇಳಬಹುದೆ?

ರಮಾನಾಥನು ಕಗ್ಗು ದನಿಯಲ್ಲೆಂದನು– ಇದುವರೆಗೆ ಏನೂ ಇಲ್ಲ.

ಜಾಲಪ ಸರ್ಪಿಣಿಯಂತೆ ಹೂಂಕರಿಸುತ್ತಾ ಎಂದಳು— ನನಗಿದನ್ನು ಕೇಳಿ ಸಂತೋಷವಾಯಿತು. ನಿಮಗೇನೂ ದೊರೆಯದಿರಲೆಂದು ದೇವರನ್ನು ಪ್ರಾರ್ಥಿಸುವೆ. ಆದರೆ ನಿಮ್ಮಂತಹ ಮೇಣದ ಗೊಂಬೆಯನ್ನು ಪೋಲೀಸರು ನೋಯಿಸಲಿಕ್ಕಿಲ್ಲ. ಏನಾದರೂ ದೊಡ್ಡ ಪರ್ವತ ಸಿಕ್ಕೀತು ನಿಮಗೆ. ಸುಳ್ಳು ಸಾಕ್ಷಿ ಸುಳ್ಳು ಮೊಕದ್ದಮೆ, ಮುಂತಾದ ಪಾಪದ ವ್ಯಾಪಾರಗಳನ್ನೇ ಬ್ರಹ್ಮನು ನಿಮ್ಮ ಹಣೆಯಲ್ಲಿ ಬರೆದಿರುವಂತೆ ಕಾಣುತ್ತದೆ, ಹೋಗಿರಿ, ಆನಂದದಿಂದ ಬದುಕಿಕೊಳ್ಳಿ. ನನಗೂ ನಿಮಗೂ ಇನ್ನು ಯಾವ ಸಂಬಂಧ

ಸಂಬಂಧವೂ ಇಲ್ಲ. ನೀವು ಸತ್ತಿರೆಂದೇ ನಾನು ಬಗೆಯುವೆ. ನೀವಾದರೂ ನಾನು ಸತ್ತೆನೆಂದು ಬಗೆಯಿರಿ. ಸರಿ, ನಡೆಯಿರಿ. ನಾನು ಹೆಣ್ಣು ಹೆಂಗಸು. ಆದರೆ ಯಾರಾದರೂ ನನ್ನನ್ನು ಗಡರಿಸಿ ನನ್ನ ಮೇಲೆ ಕೈಮಾಡಿದರೆ ಅವರನ್ನು ಕೊಲ್ಲುವುದು ನನ್ನಿಂದಾಗದಿದ್ದರೂ, ನನ್ನನ್ನು ಕೊಂದುಕೊಳ್ಳಲು ನಾನು ಹಿಂಜರಿಯಲಿಕ್ಕಿಲ್ಲ. ನಿಮ್ಮಲ್ಲಿ ಹೆಂಗಸಿನಷ್ಟೂ ಶೌರ್ಯವಿಲ್ಲದೆ ಹೋಯಿತು.

ರಮಾನಾಥನು ಭಿಕ್ಷುಕರಂತೆ ಅಂಗಲಾಚಿ ಹೇಳಿದನು — ನಾನು ಹೇಳುವುದೊಂದನ್ನೂ ನೀನು ಕೇಳುವುದಿಲ್ಲವೆ ?

' ಇಲ್ಲ. '

' ಹಾಗಾದರೆ ನಾನು ಮುಖಕ್ಕೆ ಮಸಿ ಬಳಿದುಕೊಂಡು ಎಲ್ಲಾದರೂ ಹೊರಟು ಹೋಗಲೇ ? '

' ನಿಮ್ಮಿಷ್ಟ ! '

' ನೀನು ನನ್ನನ್ನು ಕ್ಷಮಿಸುವುದಿಲ್ಲವೆ ? '

' ಇಲ್ಲ, ಎಂದೆಂದಿಗೂ ಇಲ್ಲ '

ರಮಾನಾಥನು ಒಂದು ಕ್ಷಣ ಸುಮ್ಮನಿದ್ದು ಆ ಮೇಲೆ ಮುದುಕಿಯ ಹತ್ತಿರ ಹೇಳಿದನು— ತಾಯಿ, ತಂದೆ ಬಂದರೆ ಸ್ವಲ್ಪ ನನ್ನನ್ನು ಭೆಟ್ಟಿಯಾಗಬೇಕೆಂದು ಹೇಳಿರುವೆನೆಂದು ಹೇಳು.

ಜಗ್ಗೋ ಸ್ವಲ್ಪ ಕರಗಿ ಹೇಳಿದಳು— ನಾಳೆ ಇಲ್ಲೇ ಬಂದುಬಿಡು.

ರಮಾ— ಇನ್ನು ಇಲ್ಲಿಗೆ ಬರಲಾರೆನಮ್ಮಾ !

ಮೋಟರು ಹೊರಟು ಹೋದಮೇಲೆ ಜಾಲಪಳೆಂದಳು— ಈ ಮೋಟಾರು ತೋರಿಸಲಿಕ್ಕೆ ಬಂದಿದ್ದರೆಂದು ಕಾಣುತ್ತದೆ. ಯಾರಾದರು ನೋಡಿದರೆ ' ಏನು ಇವರ ಸ್ವಂತದ್ದೇ ' ಎಂದು ಹೇಳಬೇಕು.

ಆಗ ಮುದುಕಿಯೆಂದಳು— ನೀನು ಹೀಗೆಲ್ಲ ಹೇಳಬಾರದಿತ್ತಮ್ಮಾ. ನಿನ್ನ ಸ್ಥಾನದಲ್ಲಿ ನಾನಿದ್ದಿದ್ದರೆ ನನ್ನ ಬಾಯಿಂದ ಇಂತಹ ಕಠೋರ ಶಬ

ಗಳು ಹೊರಡುತ್ತಿದ್ದಿಲ್ಲ. ಅಬ್ಬಾ ನಿನ್ನ ಸಾಹಸವೇ! ಎಲ್ಲಿ ಅವನು ನಿನ್ನ ಮೇಲೆ ಕೈ ಎತ್ತುವನೋ ಎಂದು ನಾನು ನಡುಗುತ್ತಿದ್ದೆ.

ಅಷ್ಟರಲ್ಲಿ ದೇವೀದೀನನು ಬಂದು ಕೇಳಿದನು— ಏನು ರಮಾ ಬಂದಿದ್ದನೆ ಇಲ್ಲಿಗೆ? ಮೋಟರಿನಲ್ಲಿ ನೋಡಿದೆ.

ಜಗ್ಗೋ— ಹಾಂ, ಬರಲಿಕ್ಕೆ ಬಂದಿದ್ದನು. ನೀವು ಸಿಗಬೇಕಂತೆ.

ದೇವೀದೀನ— ನೋಡುತ್ತೇನೆ. ಇಲ್ಲೇನಾದರೂ ಮಾತುಕತೆಯಾಯಿತೆ?

ಜಗ್ಗೋ ಪಶ್ಚಾತ್ತಾಪಪಡುತ್ತಾ ಎಂದಳು— ಹೂಂ, ಮಾತುಕತೆ ಏನೂ ಇಲ್ಲ. ಮೊದಲು ನಾನು ಪೂಜೆಮಾಡಿ ಸುಮ್ಮಗಾದೆ. ಆ ಮೇಲೆ ಇವಳು ಹೂವಿನ ಮಾಲೆಯನ್ನು ತೊಡಿಸಿದಳು.

ಜಾಲಪ ಕೇಳಿದಳು— ಮನೆ ಸಿಕ್ಕಿತೆ?

ದೇವೀ— ಹೌದು, ಹೌದು. ಹೌರಾದಲ್ಲಿ ಮನೆ. ಮನೆ ನಂಬರು ಎಲ್ಲ ಗೊತ್ತಾಯಿತು.

ಜಾಲಪ ಹೆದರಹೆದರುತ್ತಾ ಹೇಳಿದಳು— ಈಗಲೇ ಹೋಗೋಣವೆ, ಅಥವಾ ನಾಳೆ ಹೋದರೆ ಸಾಕೆ?

ದೇವೀ— ನೀನು ಹೇಳಿದ ಹಾಗೆ. ನಾನು ತಯಾರಿದ್ದೇನೆ.

ಜಾಲಪ— ತುಂಬಾ ಆಯಾಸವಾಗಿದೆ ನಿಮಗೆ.

ದೇವೀ— ಇಂತಹ ಕೆಲಸಗಳಲ್ಲಿ ಆಯಾಸವಿಲ್ಲ, ಮಗಳೇ.

ಎಂಟುಗಂಟೆಯ ಸಮಯ. ಬೀದಿಯಲ್ಲಿ ಸಾಲುಸಾಲಾಗಿ ಜನರು ಹೋಗುತ್ತಿದ್ದರು. ಅವರ ಉಲ್ಲಸಿತ ವದನಗಳನ್ನು ನೋಡಿ ಜಾಲಪಳಿಗೆ ಮತ್ಸರವಾಯಿತು. ಈಗ ಪೇಟೆಯಲ್ಲಾ ಬಂದಾಗುತ್ತಿದ್ದರೆ ಅವಳಿಗೆ ಆನಂದವಾಗುತ್ತಿತ್ತು. ಈ ಜನಸಾಗರದಲ್ಲಿ ಇಂತಹ ಸಣ್ಣಪುಟ್ಟ ಕಲ್ಲುಗಳು ಬಿದ್ದರೆ ಅದು ಅಲೆಯೆಬ್ಬಿಸಲಾರದೆಂದು ಆಕೆಗೆ ತಿಳಿದಿರಲಿಲ್ಲ.

# ೪೧

ರಮಾನಾಥನು ಮೋಟರಿನಲ್ಲಿ ಹೊರಟಾಗ ಅವನಿಗೆ ಏನೂ ಕಾಣುತ್ತಿದ್ದಿಲ್ಲ. ಎಲ್ಲಿಗೆ ಹೋಗುತ್ತಿರುವನೆಂಬುದರ ಪರವೆಯೇ ಅವನಿಗಿಲ್ಲ. ಎಷ್ಟೋ ಸಲ ನೋಡಿದ್ದ ರಸ್ತೆಗಳೂ ಹೊಸತೆಂಬಂತೆ ಕಾಣುತ್ತಿದ್ದುವು. ಅವನಿಗೆ ಜಾಲಪಳ ಮೇಲಾಗಲೀ, ಮುದುಕಿಯ ಮೇಲಾಗಲೀ ಕ್ರೋಧವಿದ್ದಿಲ್ಲ. ಕ್ರೋಧವಿದ್ದುದು ಅವನ ದುರ್ಬಲತೆಯ ಮೇಲೆ, ಸ್ವಾರ್ಥಲೋಲುಪತೆಯ ಮೇಲೆ, ಹೇಡಿತನದ ಮೇಲೆ. ಪೋಲೀಸರ ವಾತಾವರಣದಲ್ಲಿ ಅವನ ಔಚಿತ್ಯ ಜ್ಞಾನವು ಭ್ರಷ್ಟವಾಗಿತ್ತು. ತಾನೆಷ್ಟು ದೊಡ್ಡ ಅನ್ಯಾಯ ಮಾಡುತ್ತಿರುವೆನೆಂಬುದರ ಅರಿವು ಅವನಿಗಾದುದು ಜಾಲಪಳು ಆ ದಿನ ತಿಳಿಸಿದಾಗಲೇ. ಆ ಮೇಲೆ ಆ ಶಂಕೆ ಮನಸ್ಸಿನಲ್ಲಿ ಹುಟ್ಟಲೇ ಇಲ್ಲ. ದಿನದಿಂದ ದಿನಕ್ಕೆ ಪೋಲೀಸರ ಬಣ್ಣವೇರಿ, ಅವನು ಸಂಪೂರ್ಣ ಪೋಲೀಸರ ಕೈಯೊಳಗಾದನು. ಇಂದು ಅವನ ಮಣಿಖಚಿತ ಚಂದ್ರಹಾರವನ್ನು ಜೇಬಿನೊಳಗಿರಿಸಿಕೊಂಡು ತನ್ನ ವಿಜಯವಾರ್ತೆಯನ್ನರುಹಲು ಹೋಗಿದ್ದನು ಬಣ್ಣ-ಬಣ್ಣದ ಗಾಳಿ ಗೋಪುರಗಳನ್ನು ಕಟ್ಟಿಕೊಳ್ಳುತ್ತಾ ಜಾಲಪಲ ಬಳಿಗೈದಿದ್ದನು. ದೇವತೆಯು ವರದಾನದ ಬದಲು ಇವನು ಕೊಂಡುಹೋಗಿದ್ದ ಫಲಪುಷ್ಪಗಳ ತಟ್ಟೆಯನ್ನೊದ್ದು, ನೈವೇದ್ಯವನ್ನು ಚೆಲ್ಲಿಬಿಟ್ಟಳು! ಏನಾದರೂ ಹೇಳುವ ಅವಸರವೇ ಆತನಿಗೆ ದೊರೆಯಲಿಲ್ಲ. ಈಗ ಅವನಿಗೆ ತನ್ನ ಪಶುತೆಯ ನಿಜಕ್ಕೂ ಒಂದು ಭಯಂಕರ ದಾನವೀ ಮೂರ್ತಿಯಿದೆ ಎಂದು ಗೋಚರಿಸಿತು. ಈಗಲೇ ಜಡ್ಜರ ಬಳಿ ಹೋಗಿ ಇದ್ದ ಸಂಗತಿಯನ್ನು ಬಿಚ್ಚಿ ಹೇಳುವೆನೆಂದು ನಿರ್ಧರಿಸಿದನು. ಜಡ್ಜರು ತಮ್ಮ ತೀರ್ಮಾನವನ್ನು ಬದಲಿಸಲಿಕ್ಕಿಲ್ಲವೆ? ಪೋಲೀಸರು ಮಾತ್ರ ನನ್ನನ್ನು ಹಸಿಹಸಿ ತಿಂದಾರು. ತಿನ್ನಲಿ. ಏನು ಬೇಕಾದರೂ ಮಾಡಲಿ. ಇನ್ನು ನಾನು ದುರ್ಬಲತೆಗೆ ಆಳಾಗಿ ನಡೆಯಲಾರೆನು.

ಅವನು ಮೋಟಾರನ್ನು ನಿಲ್ಲಿಸಿ ಅತ್ತಿತ್ತ ಕಣ್ಣು ಹೊರಳಿಸಿದನು. ಎಲ್ಲಿಗೆ ಬಂದಿರುವೆನೆಂಬುದೇ ತಿಳಿಯದಾಯಿತು. ಒಬ್ಬ ಚೌಕೀದಾರನ ಹತ್ತಿರ ಜಡ್ಜ ಸಾಹೇಬರ ಮನೆ ಎಲ್ಲಿ ಎಂದು ಕೇಳಿದನು. ಅವನು ಅದು

ಚೌರಂಗಿಯಲ್ಲಿಂದೂ, ಅಲ್ಲಿಂದ ಸುಮಾರು ಆರೇಳು ಮೈಲುಗಳಾಗ ಬಹುದೆಂದೂ ಹೇಳಿದನು. ರಮಾನಾಥನು ಮರಳಿ ಮೋಟರು ಹತ್ತಿದನು. ಗಾಡಿ ಮೂವತ್ತು ಮೈಲಿನ ವೇಗದಿಂದ ಓಡುತ್ತಿತ್ತು. ಹತ್ತು ಮಿನಿಟಿನಲ್ಲಿ ಚೌರಂಗಿ ಬಂತು. ಫಕ್ಕನೆ ಒಬ್ಬ ಪೋಲೀಸರವನು ಕೆಂಪು ದೀಪ ತೋರಿಸಿದನು. ರಮಾನಾಥನು ಮೋಟಾರು ನಿಲ್ಲಿಸಿ ನೋಡಿದಾಗ— ಅವನೇ ದರೋಗ!

ದರೋಗನು ಕೇಳಿದನು— ಏನು ಇನ್ನೂ ಬಂಗಲೆಗೆ ಹೋಗಿಲ್ಲವೆ? ಮೋಟರನ್ನು ಇಷ್ಟು ವೇಗದಲ್ಲಿ ಬಿಡಬೇಡಿರಿ. ಅವಗಡವಾದೀತು. ಬೇಗಮ್ ಸಾಹೇಬರನ್ನು ಭೆಟ್ಟಿಯಾದಿರಾ?

ರಮಾನಾಥನೆಂದನು— ನನಗೊಂದು ಅಗತ್ಯದ ಕೆಲಸದ ಮೇಲೆ ಎಲ್ಲೋ ಹೋಗಲಿಕ್ಕಿದೆ. ನೀವು ಮೋಟರನ್ನೊಯ್ಯಿರಿ. ನಾನು ಕಾಲು ನಡಿಗೆಯಲ್ಲೆ ಬಂಗಲೆಗೆ ಬರುವೆ.

ದರೋಗನು ಮೋಟರಿನೊಳಹೊಕ್ಕು ಹೇಳಿದನು- ನನಗೂ ಬೇರೇನೂ ಕೆಲಸವಿರುವುದಿಲ್ಲ. ನಿಮಗೆ ಬೇಕಾದಲ್ಲಿಗೆ ಹೋಗಿಬರುವ.

'ನಾನು ಈಗ ಬಂಗಲೆಗೆ ಹೋಗುತ್ತಿಲ್ಲ.'

'ತಿಳಿಯಿತು, ತಿಳಿಯಿತು: ನನಗೇನೂ ಅಡ್ಡಿಯಿಲ್ಲ. ಆ ಬೇಗಮ್ ಸಾಹೇಬರಲ್ಲಿ............?

'ಇಲ್ಲ ಸ್ವಾಮಿ ಇಲ್ಲ.'

'ಹಾಗಾದರೆ ಬೇರೆ ಯಾವುದಾದರೂ ಕೊಳ್ಳೆ ದೊರೆತಿದೆಯೆ? ಬಂಗಲೆ ಯಲ್ಲೂ ಇವೊತ್ತು ಮನೋರಂಜನೆಗೆ ಬೇಕಾದಷ್ಟು ಸಾಮಗ್ರಿ ಇರುವುದು. ಝೋರಾ ನರ್ತನ ಮಾಡುತ್ತಾಳೆ.'

'ನೀವು ನನ್ನನ್ನು ಪುಂಡಾಟಿಕೆಯವನೆಂದು ಮಾಡಿದಿರಾ? ಅಷ್ಟು ನೀಚನಲ್ಲ.'

'ಸರಿ, ನನ್ನಿಂದ ತಪ್ಪಾಯಿತು ಕ್ಷಮಿಸಿ. ನೀವು ಇಷ್ಟರಲ್ಲೇ ನಿಮ್ಮನ್ನು ಅಪಾಯಕ್ಕೆ ಹೊರಗಾದವರೆಂದು ಎಣಿಸತೊಡಗಿದರೆಂದು ತೋರುವುದು.

ನಿಮಗೆಷ್ಟು ಶತ್ರುಗಳಿದ್ದಾರೆಂಬ ಸಂಗತಿ ನಿಮಗೆ ಗೊತ್ತಿಲ್ಲ. ನಿಮ್ಮ ಒಳ್ಳೆಯ ದಕ್ಕೇ ಹೇಳುತ್ತಿದ್ದೇನೆ.'

'ನೀವು ನನ್ನ ಒಳಿತಿನ ಕುರಿತು ಚಿಂತಿಸದಿದ್ದರೆ ಲೋಕಕ್ಕೆ ಒಳ್ಳೆಯ ದಾದೀತು. ಎಲ್ಲರೂ ಒಟ್ಟಾಗಿ ನನ್ನನ್ನು ಮಣ್ಣುಗೂಡಿಸಿದರೆ ಇನ್ನೂ ನಿಮಗೆ ತೃಪ್ತಿ ಇಲ್ಲ. ನಿಮ್ಮ ಮೋಟರು ಆನಂದದಿಂದ ಒಯ್ಯಿರಿ. ಮೋಟರಿನ ಸವಾರಿ ಮತ್ತು ಬಂಗಲೆಯ ವಾಸಕ್ಕಾಗಿ ಹದಿನೈದು ಜನರನ್ನು ಬಲಿ ಕೊಡಬೇಕಾದೀತು. ನನಗಷ್ಟು ಧೈರ್ಯವಿಲ್ಲ.'

ಹೀಗೆ ಹೇಳುತ್ತಾ ಅವನು ಮೋಟರಿನಿಂದಿಳಿದು ವೇಗವೇಗವಾಗಿ ಕಾಲುಹಾಕುತ್ತ ಜಡ್ಜರ ಬಂಗಲೆಯ ಕಡೆಗೆ ಹೋದನು. ಅವರ ಮನೆಯ ನಂಬರಿಗಾಗಿ ತಡಕಾಡಿದನು. ಅದೂ ಸಿಕ್ಕಿತು. ಅಲ್ಲೇ ನಿಂತು ಯಾರಾದರೂ ಹೊರಗೆ ಬಂದರೆ ಅವರ ಹತ್ತಿರ ಜಡ್ಜರು ಇರುವರೇ ಇಲ್ಲವೇ ಎಂದು ಕೇಳಬೇಕೆಂದು ಮಾಡಿದನು. ಒಳಗೆ ಹೋಗಲು ಕಾಲುಗಳೇಳುತ್ತಿದ್ದಿಲ್ಲ. ಜಡ್ಜರು 'ನೀನೇಕೆ ಸುಳ್ಳು ಸಾಕ್ಷಿ ಹೇಳಲು ಒಪ್ಪಿದಿ' ಎಂದು ಕೇಳಿದರೆ ಏನು ಹೇಳಬೇಕೆಂದು ಯೋಚಿಸತೊಡಗಿದನು. ಕೇವಲ ಎರಡು-ಮೂರು ವರ್ಷಗಳ ಶಿಕ್ಷೆಗೆ ಹೆದರಿ ಹದಿನೈದು ಜನರ ಪ್ರಾಣವನ್ನು ತೆಗೆಯಲು ಸಿದ್ಧನಾದಾಗ ನಿನ್ನ ಬುದ್ಧಿ ಎಲ್ಲಿ ಮಲಗಿತ್ತೆಂದು ಕೇಳಿದರೆ ಏನು ಉತ್ತರ ಕೊಡಲಿ ಎಂದು ಯೋಚಿಸಿದನು. ಇಲ್ಲ, ಬೇಕುಬೇಕೆಂದೇ ಅವರ ಮುಂದೆ ಲಜ್ಜಿತನಾಗಬೇಕಾಗುವುದು. ಅವನು ಹಿಂದಿರುಗಿದನು. ಈ ಲಜ್ಜೆಯನ್ನಿದಿರಿಸುವ ಸಾಮರ್ಥ್ಯವು ಆತನಲ್ಲಿರಲಿಲ್ಲ. ಯಮನಿಗೆ ಅಂಜದವರೂ ಲಜ್ಜೆಯ ಮುಂದೆ ನಿಂತಿರುವುದಕ್ಕೆ ಹೆದರುತ್ತಾರೆ. ಲಜ್ಜಾ ರಕ್ಷಣೆಗಾಗಿಯೇ ಅಲ್ಲವೆ ದೊಡ್ಡದೊಡ್ಡ ರಾಜ್ಯಗಳು ಉರುಳಿ ಬಿದ್ದುದು, ರಕ್ತದ ತೊರೆಗಳು ಪ್ರವಹಿಸಿದುದು, ಪ್ರಾಣದ ಹೋಳೀಹಬ್ಬವನ್ನು ನಡೆಯಿಸಿದುದು? ಅದೇ ಲಜ್ಜೆ ಇಂದು ರಮಾನಾಥನು ಹೆಜ್ಜೆ ಹಿಂದಿಡುವಂತೆ ಮಾಡಿತು.

## ೪೨

ಅರ್ಧ ರಾತ್ರಿಯ ಹೊತ್ತಿಗೆ ಮಲಗಿದ ರಮಾನಾಥನು ಏಳುವಾಗ ಒಂಭತ್ತು ಗಂಟೆಯಾಗಿತ್ತು. ಅವನು ಕನಸಿನಲ್ಲಿ ದಿನೇಶನಿಗೆ ಗಲ್ಲಿನ ಶಿಕ್ಷೆ

ಹೋಗುವುದನ್ನು ಕಾಣುತ್ತಿದ್ದನು. ಸಹಸಾ ಒಬ್ಬಳು ಹೆಂಗಸು ಬಂದು ಹಗ್ಗವನ್ನು ತುಂಡರಿಸಿಬಿಟ್ಟಳು ನಾಲ್ಕು ದಿಕ್ಕುಗಳಲ್ಲೂ ಗಲಾಟೆ ಹೆಚ್ಚಿತು. ಆ ಹೆಂಗಸು ಜಾಲಪಾ. ಅವಳ ಮುಂದೆ ಹೋಗುವ ಧೈರ್ಯ ಯಾರಿಗೂ ಬರುತ್ತಿದ್ದಿಲ್ಲ. ಆಗವಳು ಒಂದೇ ಹಾರಿಗೆ ರಮಾನಾಥನ ಕಡೆಗೂ ಕತ್ತಿ ಬೀಸಿಬಿಟ್ಟಳು. ರಮಾನಾಥನು ಗಾಬರಿಗೊಂಡು ಎದ್ದು ಕೂತನು. ಇದಿರಿನಲ್ಲಿ ದರೋಗ ಮತ್ತು ಇನ್ಸ್‌ಪೆಕ್ಟರರು ನಿಂತಿದ್ದರು. ಡಿಪ್ಟಿಯವರು ಆರಾಮ ಕುರ್ಚಿಯಲ್ಲಿ ಮಲಗಿಕೊಂಡು ಸಿಗಾರ ಎಳೆಯುತ್ತಿದ್ದರು.

ದರೋಗನೆಂದನು- ಏನು ಗಾಢನಿದ್ದೆ ಬಂದಂತಿತ್ತು. ನಿನ್ನೆ ಯಾವಾಗ ಮರಳಿದಿರಿ? ರಮಾನಾಥನು ಕುರ್ಚಿಯ ಮೇಲೆ ಕೂಡುತ್ತಾ ಹೇಳಿದನು— ನಿಮ್ಮ ಹಿಂದೆಯೇ ಬಂದಿದ್ದೆ. ಹೈಕೋರ್ಟಿನಲ್ಲಿ ಈ ಮೊಕದ್ದಮೆಯ ಅಪೀಲಿದೆಯಲ್ಲವೆ?

'ಇನ್ಸ್‌ಪೆಕ್ಟರ್— ಅಪೀಲಿನಲ್ಲೇನಿದೆ ಮಣ್ಣು? ಆ ವಿಷಯ ನೀವು ಚಿಂತಿಸಬೇಕಾಗಿಲ್ಲ.' ಆದರೆ ನಿಮ್ಮ ರಕ್ಷಣೆಯ ಸಲುವಾಗಿ ಪಹರೆಯನ್ನು ಸ್ವಲ್ಪ ಬಿಗಿ ಮಾಡದೆ ಉಪಾಯವಿಲ್ಲ. ಹೈಕೋರ್ಟು ತೀರ್ಮಾನ ಮುಗಿಯುವುದೇ ತಡ, ನಿಮ್ಮ ಹುದ್ದೆ ತಯಾರಾಗಿರುತ್ತದೆ.

ಡಿಪ್ಟೀ ಎಂದರು— ಇಲ್ಲಿ ನೋಡಿ. ಕಮಿಶ್ನರ್ ಸಾಹೇಬರು ಕೊಟ್ಟ ಡೀ. ಓ. ಯೂ. ಪಿ. ಯ ಹೋಮ್ ಸೆಕ್ರೆಟರಿಯವರ ಹೆಸರಿನಲ್ಲಿದೆ. ನೀವು ಇದನ್ನು ತೋರಿಸಿದಕೂಡಲೇ, ಒಳ್ಳೆಯ ಹುದ್ದೆ ಸಿಗುವುದು.

ಇನ್ಸ್‌ಪೆಕ್ಟರ್— ಕಮಿಶ್ನರ್ ಸಾಹೇಬರಿಗೆ ನಿಮ್ಮ ಮೇಲೆ ಬಹಳ ಖುಷಿಯಾಗಿದೆ.

ರಮಾನಾಥನು ಡಿಪ್ಟಿಯವರು ಕೊಟ್ಟ ಲಕ್ಕೋಟೆಯನ್ನು ತೆರೆದು ನೋಡಿ ಕೂಡಲೇ ಅದನ್ನು ಹರಿದು ಚೂರುಚೂರು ಮಾಡಿ ಹಾಕಿದನು. ಮೂವರೂ ಅವನನ್ನೇ ವಿಸ್ಮಯದಿಂದ ನೋಡಿದರು.

ದರೋಗನೆಂದನು— ಏನು ರಾತ್ರಿ ಕುಡಿದುದು ಹೆಚ್ಚಾಗಿತ್ತೆ? ನಿಮ್ಮ ಒಳ್ಳೆಯದಕ್ಕಲ್ಲ ಇದು.

ಡಿಪ್ಟಿ— ನನಗೇನೂ ಅರ್ಥವಾಗುವುದಿಲ್ಲ. ವಿಷಯವೇನು ?

ರಮಾ— ನೌಕರಿ ನನಗೆ ಬೇಡವೆಂದೂ, ಈ ಡಿ. ಓ. ನನಗವಶ್ಯ ವಿಲ್ಲೆಂದೂ, ನಾನು ಇಂದೇ ಇಲ್ಲಿಂದ ಹೊರಟುಹೋಗುವವನಿರುವೆನೆಂದೂ ಇದರ ಅರ್ಥ. ಬೇರೇನೂ ಇಲ್ಲ.

ಡಿಪ್ಟಿ— ಹೈಕೋರ್ಟಿನ ತೀರ್ಮಾನ ಮುಗಿಯದ ಮುಂಚೆ ನೀವು ಎಲ್ಲಿಗೂ ಹೋಗಲಾರಿರಿ.

ರಮಾ— ಏತಕ್ಕೆ ?

ಡಿಪ್ಟಿ— ಕಮಿಶನರ ಸಾಹೇಬರ ಹುಕುಮೇ ಹಾಗೆ.

ರಮಾ— ನಾನವರ ಗುಲಾಮನೇ!

ಇನ್ಸ್ಪೆಕ್ಟರ್-- ರಮಾನಾಥ ಬಾಬುಗಳೇ ಹೀಗೆ ಸಿಟ್ಟಾಗುವುದ ರಿಂದ ಲೇಶವಾದರೂ ಪ್ರಯೋಜನವಿಲ್ಲ. ನಿಮಗೆ ಗೊತ್ತಿಲ್ಲ. ಆಫೀಸರರ ಕೋಪವನ್ನು ಸಂಪಾದಿಸುವುದರಿಂದ ಎಂತಹ ಕಷ್ಟನಷ್ಟಗಳಿವೆಯೆಂಬು ದನ್ನು ನೀವು ವಿಚಾರ ಮಾಡಿನೋಡಲಿಲ್ಲ. ಹೇಗೂ ಇನ್ನು ಹತ್ತು ದಿನಗಳಿವೆ. ಅಷ್ಟರಲ್ಲಿ ಹೈಕೋರ್ಟಿನ ತೀರ್ಮಾನವೂ ಮುಗಿಯುವುದು. ನಿಮಗೆ ಕೆಟ್ಟದು ಮಾಡಬೇಕೆಂದು ನಮ್ಮ ಉದ್ದೇಶವಲ್ಲ. ಆದರೂ ನೀವು ನಿರ್ಬಂಧ ಪಡಿಸಿದರೆ ನಾವು ನಿರುಪಾಯರಾಗಬೇಕಾಗುವುದು. ಜೈಲಿನ ಯಾತನೆ ನಿಮಗೆ ಗೊತ್ತಿಲ್ಲ. ನರಕವಾದರೂ ಬೇಕು. ಅದು ಬೇಡ.

ದರೋಗ— ಪ್ರಾಯಶಃ ಇವರ ಬೇಗಮ್ ಸಾಹೇಬರ ಕಸಿವಿಸಿ ಇದು. ಅವರೆಂದರೆ ಇವರಿಗೆ ಹೆದರಿಕೆಯೆಂದು ಕಾಣುತ್ತದೆ.

ಇನ್ಸ್ಪೆಕ್ಟರ್— ಅಂದರೆ, ನಿನ್ನೆ ಹಾರವನ್ನು ಕೊಡಲಿಲ್ಲವೆ? ಅಥವಾ ಕೊಟ್ಟರೂ ಕೇಳಲಿಲ್ಲವೆ? ರಮಾನಾಥನು ಹಾರವನ್ನು ತೆಗೆದು ಮೇಜಿನಮೇಲಿರಿಸಿದನು.

ಇನ್ಸ್ಪೆಕ್ಟರ್— ಸರಿ, ಆವರಿದನ್ನು ಸ್ವೀಕರಿಸಲಿಲ್ಲವೆಂದಾಯಿತು.

ಡಿಪ್ಟಿ-- ಯಾರೋ 'ಪ್ರೌಡ್ ಲೇಡಿ' ಇರಬೇಕು.

ಇನ್ಸ್‌ಪೆಕ್ಟರ್— ಹಾಗಾದರೆ ಇನ್ನು ಅವರನ್ನು ಸಂತೋಷಪಡಿಸ ಬೇಕಾಯಿತು.

ದರೋಗ— ಬೇಕೋ ಬೇಡವೋ ಎಂಬುದು ನಮ್ಮ ಬಾಬುಗಳ ವ್ಯವಹಾರದ ಮೇಲೆ ಹೊಂದಿಕೊಂಡಿದೆ. ನಿಮ್ಮನ್ನಿವರು ಒತ್ತಾಯಪಡಿ ಸುವುದಿಲ್ಲವಾದರೆ, ಅವರಿಗೆ ಯಾಕೆ ಉಪದ್ರವ?

ಡಿಪ್ಟಿ— ಆ ಖಟಿಕನನ್ನೂ ವಿಚಾರಿಸಬೇಕು.

ರಮಾನಾಥನ ಮುಂದೆ ಈಗ ಹಿಂದಿನವುಗಳಿಂದ ಭೀಕರವೂ, ಜಟಿಲವೂ ಆದ ಒಂದು ಸಮಸ್ಯೆ ಬಂತುನಿಂತಿತು. ತನ್ನೊಬ್ಬನನ್ನೇ ಆದರೆ ಕರ್ತವ್ಯದ ಪೇಟಿಯಲ್ಲಿ ಬಲಿಕೊಡಲೂ ಅವನು ಸಿದ್ಧನು; ಆದರೆ ಜಾಲಪ ಳನ್ನು ಸಂಕಟದಲ್ಲಿಳಿಸುವ ಕೆಲಸ ಅವನಿಂದಾಗದು. ಪೋಲೀಸರ ಹಿಡಿತ ದಿಂದ ನಿರ್ದೋಷನಾಗಿ ಪಾರಾಗುವ ಯಾವ ಮಾರ್ಗವೂ ಅವನಿಗೆ ಕಾಣಲಿಲ್ಲ. ಆ ತೀವ್ರತೆ ತೀಕ್ಷ್ಣತೆಗಳು ಕ್ಷಣಮಾತ್ರದಲ್ಲಿ ಮಾಯವಾದುವು. ವಿವಶನಾಗಿ ಎಂದನು— ಅಂತೂ ನಾನು ಏನು ಮಾಡಬೇಕೆಂದು ನಿಮ್ಮ ಮನಸ್ಸು? ಹೇಳಿರಿ.

ಇನ್ಸ್‌ಪೆಕ್ಟರ್— ಮತ್ತೇನೂ ಇಲ್ಲ. ನೀವು ಕೆಲವು ದಿನಗಳ ಮಟ್ಟಿಗೆ ನಮ್ಮ ಅತಿಥಿಗಳಾಗಿದ್ದು ಬಿಡಿ ಅಷ್ಟೆ. ತೀರ್ಮಾನ ಕೇಳಿದಮೇಲೆ ನಿಮ್ಮ ಇಷ್ಟ ಬಂದಲ್ಲಿಗೆ ಹೋಗಬಹುದು. ನಿಮ್ಮ ಇಷ್ಟವಿದ್ದರೆ ಒಂದು ಸರ್ಟಿಫಿಕೇಟ್ ಕೊಡುತ್ತೇವೆ. ಬೇಡವಾದರೆ ಬೇಡ. ನೀವು ಅಪೇಕ್ಷಿಸಿದ ವಸ್ತುಗಳು ನಿಮ್ಮ ಮುಂದೆ ಹಾಜರಾಗುತ್ತವೆಂದು ತಿಳಿಯಿರಿ. ಮೊಕದ್ದಮೆ ಮುಗಿಯುವತನಕ ಮಾತ್ರ ನಿಮ್ಮನ್ನು ಬಿಡಲಾರೆವು.

ರಮಾನಾಥನು ದೀನತೆಯಿಂದ ಕೇಳಿದನು— ಅಡ್ಡಾಡುವುದಕ್ಕೂ ಹೋಗಬಾರದೆ?

ಇನ್ಸ್‌ಪೆಕ್ಟರ್‌ರು ಸೂತ್ರರೂಪವಾಗಿ ಎಂದರು— ಇಲ್ಲ.

ದರೋಗನು ಆ ಸೂತ್ರವನ್ನು ವ್ಯಾಖ್ಯಾನಿಸಿ– ನಿಮಗೆ ಆ ಸ್ವಾತಂತ್ರ್ಯ ಕೊಟ್ಟಿದ್ದೆವು. ನೀವು ಅದನ್ನು ದುರುಪಯೋಗ ಮಾಡಿಕೊಂಡಿರಿ.

ಮೂವರೂ ಹೊರಟು ಹೋದಮೇಲೆ ರಮಾನಾಥನು ಒಂದು ಸಿಗಾರ ಹಚ್ಚಿ ಪರಿಸ್ಥಿತಿಯ ಕುರಿತು ಯೋಚಿಸತೊಡಗಿದನು.

೪೩

ಇನ್ನೂ ಒಂದು ತಿಂಗಳು ಕಳೆಯಿತು. ಮೊಕದ್ದಮೆಯು ಹೈಕೋರ್ಟಿನಲ್ಲಿ ವಿಚಾರಣೆಯಾಗುವ ದಿನ ನಿಶ್ಚಿತವಾಯಿತು. ರಮಾನಾಥನ ಸ್ವಭಾವದಲ್ಲಿ ಈಗ ಮರಳಿ ಹಿಂದಿನ ಭೀರುತೆ, ಸೊಗಸುತನಗಳು ಮನೆಮಾಡಿದ್ದುವು. ಈಗವನು ಆಫೀಸರರು ಎಂದಂತೆ ಕೇಳುತ್ತಾನೆ. ಶರಾಬಿನ ಪ್ರಮಾಣ ಹಿಂದಿಗಿಂತ ಹೆಚ್ಚಾಗಿದೆ. ವಿಲಾಸತೆಗೆ ಮಾರುಹೋಗಿರುವನು. ಒಮ್ಮೊಮ್ಮೆ ಅವನ ಕೋಣೆಗೆ ಜೋಹರಳೆಂಬ ವೇಶ್ಯೆಯೊಬ್ಬಳು ಬರುತ್ತಿದ್ದಳು ಅವನು ಅವಳ ಗಾನವನ್ನು ಬಹಳ ಪ್ರೇಮದಿಂದ ಕೇಳುತ್ತಿದ್ದನು.

ಒಂದು ದಿನ ಅವನು ಬಹಳ ಖೇದದಿಂದ ಎಂದನು— ನಿನ್ನ ಮೇಲೆ ಎಲ್ಲಿ ನನ್ನ ಪ್ರೇಮ ಬೆಳೆಯುವುದೊ ಎಂದು ನನಗೆ ಭಯವಾಗುತ್ತಿದೆ. ಅತ್ತ ಅತ್ತ ಕಾಲ ಕಳೆಯುವ ಹೊರತು ಇದರಿಂದ ಬೇರೇನು ಪರಿಣಾಮ ವಾದೀತು? ನೀನು ವಿಶ್ವಾಸವನ್ನು ಮುರಿಯುವುದಿಲ್ಲವೆಂದು ನಂಬುವುದು ಹೇಗೆ?

ಜೋಹರಳು ಮನಸ್ಸಿನೊಳಗೆ ಆನಂದಿಸಿ, ತನ್ನ ದೊಡ್ಡ ದೊಡ್ಡ ಚಂಚಲ ಕಣ್ಣುಗಳಿಂದ ಅವನನ್ನು ನೋಡಿ ಎಂದಳು— ಹೌದು ಸ್ವಾಮಿ, ಹೌದು. ವಿಶ್ವಾಸದ ಕತೆ ನಮಗೇನು ಗೊತ್ತು? ವೇಶ್ಯೆಯರಲ್ಲವೆ! ವಿಶ್ವಾಸ ಘಾತಕಿಯಾದ ವೇಶ್ಯೆಯನ್ನು ನಂಬಲಿಕ್ಕಾಗುವುದೆ?

'ಮತ್ತೆ ಅದರಲ್ಲಿ ಸಂದೇಹವುಂಟೆ?'

'ಇಲ್ಲ, ಸ್ವಲ್ಪವೂ ಇಲ್ಲ. ನೀವು ನಮ್ಮ ಹತ್ತಿರ ಪ್ರೇಮದಿಂದ ತುಳುಕುವ ಹೃದಯವನ್ನು ಹಿಡಕೊಂಡು ಬರುತ್ತೀರಲ್ಲವೆ? ನಾವು ಮಾತ್ರ ಅದನ್ನು ಲಕ್ಷ್ಯ ಮಾಡುವುದಿಲ್ಲ. ನಿಮ್ಮಲ್ಲಿ ಏನೂ ತಪ್ಪಿಲ್ಲ. ಹೀಗಲ್ಲವೆ ನಿಮ್ಮ ಆಶಯ?'

ರಮಾ— ಖಂಡಿತವಾಗಿಯೂ.

ಜೋಹರ— ಕ್ಷಮಿಸಿರಿ. ನೀವು ಗಂಡಸರ ಪಕ್ಷ ಕಟ್ಟುತ್ತಿದ್ದೀರಿ. ನೀವಲ್ಲಿಗೆ ಹೋಗುವುದು ಬರೀ ಮನೋರಂಜನೆಗಾಗಿ, ಬರೀ ಆನಂದ ಪಡೆಯುವುದಕ್ಕಾಗಿ. ನೀವೇನು ವಿಶ್ವಾಸವನ್ನು ಹುಡುಕಿಕೊಂಡು ಹೋಗುತ್ತೀರಾ ಅಲ್ಲಿಗೆ? ನಿಮಗದು ಹೇಗೆ ಸಿಕ್ಕೀತು? ನಮ್ಮಲ್ಲೆಷ್ಟು ಮಂದಿ ಗಂಡಸರ ಮೋಸದಿಂದ ನಿರಾಶರಾಗಿ ಸುಖವಿಹೀನರಾಗುತ್ತಾರೆಂಬುದನ್ನು ಲೋಕವು ತಿಳಿದ ದಿನ ಅದರ ಕಣ್ಣು ತೆರೆದೀತು ವಿಲಾಸದ ವಸ್ತುವಿನಿಂದ ವಿಶ್ವಾಸವನ್ನು ಬಯಸುವುದೇ ತಪ್ಪು. ಗಿಡುಗನ ಗೂಡಿನಲ್ಲಿ ಮಾಂಸವನ್ನು ಹುಡುಕುವುದೆ?

ಆ ದಿನ ಜೋಹರ ಹೋಗುವಾಗ ದರೋಗರನ್ನು ನೋಡಿ ಶುಭ ಸಮಾಚಾರವನ್ನು ತಿಳುಹಿದಳು. ಅವರಿಗೆ ಹಿಡಿಸಲಾರದಷ್ಟು ಆನಂದವಾಯಿತು. ದೇವರು ನಡೆಸಿದರೆ ಇನ್ನು ನಾಲ್ಕು ದಿನಗಳಲ್ಲಿ ಇವನಿಗೆ ಹೆಂಡತಿಯ ಹೆಸರೇ ಮರೆತು ಹೋಗುವುದೆಂದು ಅವರೆಣಿಸಿದರು.

ದರೋಗರೆಂದರು— ನಿನ್ನನ್ನು ಮತ್ತೆ ಏತಕ್ಕೆ ಕರೆಯಿಸಿದ್ದೆಂದು ಮಾಡಿದಿ? ಅವನ ಹೆಂಡತಿ ಇಲ್ಲಿಂದ ಹೊರಟುಹೋದರೆ ಮತ್ತೆ ಕೇಳುವುದೇ ಬೇಡ. ಸ್ವರಾಜ್ಯದವರೊಟ್ಟಿಗೆ ನೇರಿ ಅವಳು ಹೀಗೆಲ್ಲಾ ಮಾಡುತ್ತಿರುವಳೆಂದು ನಾನೆಣಿಸುತ್ತೇನೆ.

ಜೋಹರಳ ಆಮದು ರಫ್ತು ಹೆಚ್ಚಿದಂತೆ, ರಮಾನಾಥನು ಆಫೀಸರರ ಎದುರು ತನ್ನ ಮೇಲೆ ಅವಳಿಗಿರುವ ಪ್ರೇಮದ ಬಡಾಯಿ ಕೊಚ್ಚಿಕೊಂಡು ಹಿರಿತನವನ್ನು ಪ್ರದರ್ಶಿಸುತ್ತಿದ್ದನು. ಜೋಹರಳೀಗ ಅವನಿಗೆ ಪ್ರೇಮ-ವಿಶ್ವಾಸಗಳ ಮೂರ್ತಿಯಂತೆ ತೋರುತ್ತಿದ್ದಳು. ಜಾಲಪಳಷ್ಟು ಸುಂದರಿಯಲ್ಲವಾದರೂ, ಮಾತಿನಲ್ಲಿ ಅವಳಿಗೂ ಮಿಗಿಲು, ಹಾವಭಾವದಲ್ಲಿ ಅವಳಿಗಿಂತ ಮೇಲು, ಸಮ್ಮೋಹನ ಕಲೆಯಲ್ಲಿ ಅವಳಿಗಿಂತ ಎಷ್ಟೋ ನಿಪುಣೆ. ರಮಾನಾಥನ ಹೃದಯದಲ್ಲಿ ಹೊಸಹೊಸ ಮನೋರಥಗಳು ನಲಿದಾಡತೊಡಗಿದುವು.

ಒಂದು ದಿನ ಅವನು ಜೋಹರಳೊಡನೆಂದನು— ಜೋಹರಾ, ಅಗಲಿಕೆಯ ಸಮಯ ಬಹಳ ದೂರವಿಲ್ಲ. ಎರಡು-ಮೂರು ದಿನಗಳಲ್ಲಿ

ನಾನಿಲ್ಲಿಂದ ಹೊರಡಬೇಕಾಗಿದೆ. ಆ ಮೇಲೆ ನಿನಗೆ ನನ್ನ ನೆನಪು ಹೇಗೆ ಇದ್ದೀತು ?

ಜೋಹರ— ನಾನು ನಿಮ್ಮನ್ನು ಹೋಗಲಿಕ್ಕೆ ಬಿಟ್ಟರಲ್ಲವೆ ? ಇಲ್ಲೀ ಒಂದು ಒಳ್ಳೆಯ ನೌಕರಿ ಮಾಡಿಕೊಂಡು ಸುಖವಾಗಿದ್ದುಬಿಡೋಣ.

ರಮಾನಾಥನು ಅನುರಕ್ತನಾಗಿ ಎಂದನು— ಮನಃಪೂರ್ವಕವಾಗಿ ಹೇಳುತ್ತಿದ್ದೀಯಾ ಜೋಹರಾ ? ನನ್ನಾಣೆ, ಮೋಸಗೊಳಿಸಬೇಡ.

ಜೋಹರಾ— ಆ ಹೆದರಿಕೆಯಿದ್ದರೆ ನಿಕಾ ಮಾಡಿಕೊಳ್ಳಿ. ಅದಾಗದಿದ್ದರೆ ವಿವಾಹವೇ ಆಗಲಿ. ಪಂಡಿತರನ್ನು ಕರೆಯಿಸಿ. ನನ್ನ ಪ್ರೇಮಕ್ಕೆ ಇನ್ನೂ ರುಜುವಾತು ಬೇಕೆ ? ಇಷ್ಟು ಸಾಕೆ ?

ಈ ನಿಷ್ಕಪಟ ಪ್ರೇಮದ ಪರಿಚಯವು ರಮಾನಾಥನನ್ನು ವಿಹ್ವಲನಾಗಿ ಮಾಡಿತು. ಈ ಶಬ್ದಗಳ ಸಮ್ಮೋಹಕ ಶಕ್ತಿ ಜೋಹರಳ ಬಾಯಿಂದ ಹೊರಟುದರಿಂದ ಅದೆಷ್ಟು ಅಧಿಕವಾಗಿತ್ತು ? ದೊಡ್ಡ ದೊಡ್ಡ ಶ್ರೀಮಂತರು ಬಾಯಿ ಬಾಯಿ ಬಡಿದುಕೊಳ್ಳುವ ಈ ಕಾಮಿನಿ ತನಗಾಗಿ ಇಷ್ಟು ದೊಡ್ಡ ತ್ಯಾಗಕ್ಕೆ ಸಿದ್ಧಳಾಗಿರುವಳಲ್ಲಾ ? ಬೇರೆಯವರಿಗೆ ಬರಿಯ ಹೊಯಿಗೆ ದೊರೆವ ಕಣಿಯಲ್ಲಿ ಒಬ್ಬನಿಗೆ ಚಿನ್ನದ ಗಟ್ಟಿಗಳು ಸಿಕ್ಕಿದರೆ ಅವನಿಗೆ ಆನಂದವಾಗುವುದಿಲ್ಲವೆ? ರಮಾನಾಥನ ಹೃದಯದಲ್ಲಿ ಕೆಲವು ದಿನ ಸಂಗ್ರಾಮ ನಡೆಯಿತು. ಜಾಲಪಳ ಜತೆಯಲ್ಲಿ ಅವನ ಜೀವನವು ಎಷ್ಟು ನಿರಸವೂ, ಎಷ್ಟು ಕಠಿನವೂ ಆಗುವುದು ? ಅವಳ ಧರ್ಮ ಸತ್ಯಗಳ ದೆಸೆಯಿಂದ ಜೀವನವು ಎಂದೂ ರಮಾನಾಥನ ಆದರ್ಶವಾಗಿದ್ದಿಲ್ಲ. ಸಾಮಾನ್ಯ ಜನರಂತೆ ಅವನಿಗೂ ಭೋಗವಿಲಾಸಗಳ ಹಂಬಲು. ಜಾಲಪಳಿಂದ ತಿರುಗಿದ ಅವನ ವಿಲಾಸಾಸಕ್ತ ಮನಸ್ಸು ಪ್ರಬಲ ವೇಗದಿಂದ ಜೋಹರಳ ಕಡೆಗೆ ಹರಿಯಿತು. ಈಗವನಿಗೆ ವ್ರತ ಹಿಡಿದ ವೇಶ್ಯೆಯರ ಉದಾಹರಣೆಗಳು ನೆನಪಿಗೆ ಬರತೊಡಗಿದುವು. ಚಂಚಲವೃತ್ತಿಯ ಗರತಿಯರ ಉದಾಹರಣೆಗಳೂ ಸ್ಮರಣೆಗೆ ಬಂದುವು. ಇದೆಲ್ಲಾ ಪ್ರಪಂಚದ ಸೋಗೆಂದು ಅವನು ನಿಶ್ಚಯಿಸಿದನು. ಜನ್ಮದಿಂದ ಯಾರೂ ನಿರ್ದೋಷಿಗಳೂ ಅಲ್ಲ, ದೋಷಿಗಳೂ ಅಲ್ಲ. ಎಲ್ಲಾ ಪರಿಸ್ಥಿತಿಯನ್ನವಲಂಬಿಸಿಕೊಂಡಿರುತ್ತದೆ.

ಇದುವರೆಗೆ ರಮಾನಾಥನಿಗೆ ಅತ್ತಿತ್ತ ಅಂಡಲೆಯಲು ಸಂದರ್ಭವೇ ಸಿಕ್ಕಿದ್ದಿಲ್ಲ. ರೆಕ್ಕೆ ಹುಟ್ಟಿದೊಡನೆ ಅವನು ಬೇಡನ ಪಂಜರದೊಳಗೆ ಸಿಕ್ಕು ಬಿದ್ದನು. ಕೆಲವು ದಿನ ಪಂಜರವನ್ನು ಬಿಟ್ಟು ಹೊರಗಿದ್ದರೂ ಅವನಿಗೆ ಹಾರುವ ಸಾಹಸ ಬರಲಿಲ್ಲ. ಈಗ ಅವನ ಮುಂದೆ ನವೀನ ದೃಶ್ಯವೊಂದಿತ್ತು. ಅದು ಆ ಚಿಕ್ಕ ಸಲಿಕೆಗಳ ಪಂಜರವಲ್ಲ, ಹೂವಿನಿಂದ ನಳನಳಿಸುತ್ತಿದ್ದ ಒಂದು ಉಪವನ. ಇಲ್ಲಿಯ ಬಂಧನದಲ್ಲಿಯೇ ಸ್ವಾತಂತ್ರ್ಯದ ಆನಂದವಿದೆ ಎಂದಮೇಲೆ ಅವನೇಕೆ ಈ ಉಪವನದಲ್ಲಿ ಕ್ರೀಡೆಯ ಆನಂದವನ್ನು ಅನುಭವಿಸಬಾರದು ?

## ೪೪

ರಮಾನಾಥನು ಜೋಹರಳ ಪ್ರೇಮಪಾಶದಲ್ಲಿ ಸಿಲುಕುತ್ತಾ ಹೋದ ಹಾಗೆ ಪೋಲೀಸರು ಅವನ ಕಡೆಯಿಂದ ನಿಶ್ಚಿಂತರಾಗಹತ್ತಿದರು. ಕೊನೆ ಗೊಂದು ದಿನ ಡಿಪ್ಟಿಯವರು ಅವನನ್ನು ಕಾರಿನಲ್ಲಿ ಕೂರಿಸಿಕೊಂಡು ಅಡ್ಡಾ ಡಲು ಹೋದರು. ದೇವೀದೀನನ ಮನೆ ಸಮೀಪವಾದೊಡನೆ ರಮಾನಾಥನು ತನ್ನ ಕುತ್ತಿಗೆಯನ್ನು ಸರಕ್ಕನೆ ಒಳಗೆಳೆದುಕೊಂಡು ಲಜ್ಜಾಭರಿತನಾಗಿ ಕೂತುಬಿಟ್ಟನು. ಜಾಲಪಳು ಅಲ್ಲಿಯೇ ಇರುವಳೇ ಅಥವಾ ಹೊರಟು ಹೋಗಿರಬಹುದೇ ಎಂಬುದನ್ನು ತಿಳಿಯಬೇಕೆಂಬ ಉತ್ಸುಕತೆ ಬಹಳ ವಾಗಿದ್ದರೂ ನಾಚುಗೆ ಬಿಡಲಿಲ್ಲ. ಈ ಮೂವರ ಮೊಗ ನೋಡದಿರುವುದೇ ಉತ್ತಮ ಮಾರ್ಗವೆಂದು ಅವನೆಣಿಸಿದನು. ಇಡಿ ಕಲ್ಕತ್ತೆಯಲ್ಲಿ ಈ ಮೂವರ ಹೊರತು, ಬೇರೆ ಯಾರ ಟೀಕೆ, ತಿರಸ್ಕಾರಗಳ ಭಯವೂ ಅವನಿಗಿದ್ದಿಲ್ಲ.

ಮೋಟಾರು ಅಲ್ಲಲ್ಲಿ ಅಡ್ಡಾಡಿಕೊಂಡು ಹೌರಾ ಬ್ರಿಜ್‌ನ ಕಡೆಗೆ ಹೋಗುತ್ತಿದ್ದಾಗ ರಮಾನಾಥನಿಗೆ ಯಾರೋ ಒಬ್ಬಳು ಕೃಶಾಂಗಿಯಾದ ಹೆಂಗಸು ನೀರಿನ ಬಿಂದಿಗೆಯನ್ನು ಬಹು ಕಷ್ಟದಿಂದ ತಲೆಯ ಮೇಲಿರಿಸಿ ಕೊಂಡು ಸ್ನಾನಘಟ್ಟದಿಂದ ಮೇಲೆ ಬರುತ್ತಿರುವುದು ಕಂಡಿತು. ಅವಳ ನಡಿಗೆ ಜಾಲಪಳ ನಡಿಗೆಯನ್ನು ಹೋಲುತ್ತಿತ್ತು. ಜಾಲಪ ಇಲ್ಲಿ ಯಾಕೆ ಬಂದಾಳೆಂದು ಯೋಚಿಸುವಷ್ಟರಲ್ಲಿ ಕಾರು ಮುಂದೆ ಹಾರಿಬಿಟ್ಟಿತು.

ರಮಾನಾಥನಿಗೆ ಈಗ ಆ ಹೆಂಗಸಿನ ಮುಖವು ಚೆನ್ನಾಗಿ ಕಾಣಿಸಿತು. ಅವಳು ಜಾಲಪಳೇ ಆಗಿದ್ದಳು. ಎಷ್ಟು ದುರ್ಬಲಳಾಗಿದ್ದಳು! ಅನಾಥೆಯಂತೆಯೂ, ಮುದುಕಿಯಂತೆಯೂ ಕಾಣುತ್ತಿದ್ದಳು. ಆ ಹಿಂದಿನ ಕಾಂತಿಯಿಲ್ಲ, ಚಂಚಲತೆಯಿಲ್ಲ, ಗರ್ವವಿಲ್ಲ. ದೇವೀದೀನನು ಇವಳನ್ನು ಮನೆಯಿಂದ ಹೊರಗೆ ಹಾಕಿರಬಹುದೆ? ಅಥವಾ ಇವಳೇ ಅವನ ಹಂಗಿನ ಬೀಡನ್ನು ತೊರೆದು ಸ್ವತಂತ್ರಳಾಗಿ ಮನೆಗೆಲಸ ಮಾಡಲು ಸೇರಿರಬಹುದೆ? ವಿಷಯವನ್ನು ಹೇಗೆ ಗೊತ್ತು ಮಾಡಿಕೊಳ್ಳಲಿ ?

ಮೋಟರು ಬಹುದೂರ ಬಂದಿತ್ತು. ರಮಾನಾಥನ ಭೋಗಲಿಪ್ಸೆಯೂ ಚಂಚಲತೆಯೂ ಮಾಯವಾಗಿದ್ದುವು. ಮಲಿನವಸನೆಯೂ ದುಃಖಿನಿಯೂ ಆದ ಜಾಲಪಳ ಮೂರ್ತಿ ಅವನ ಕಣ್ಣೆದುರು ನಲಿಯುತ್ತಿತ್ತು. ಯಾರೊಡನೆನ್ನಲಿ? ಏನೆನ್ನಲಿ? ಇಲ್ಲಿ ನನ್ನವರಾರಿರುವರು? ಜಾಲಪಳ ಹೆಸರು ಕೇಳಿದರೆ ಸಾಕು, ನನಗೆ ಮತ್ತೆ ಮನೆಯಿಂದ ಹೊರಬರುವಂತಿಲ್ಲ. ಅಯ್ಯೋ! ಜಾಲಪಳ ಮುಖದಲ್ಲಿ ಎಷ್ಟು ನಿರಾಶೆಯಿತ್ತು, ಹೃದಯದ ವೇದನೆ ಎಷ್ಟು ಸ್ಪಷ್ಟವಾಗಿ ಕಾಣುತ್ತಿತ್ತು !

ಸ್ವಲ್ಪ ಹೊತ್ತಿನ ಅನಂತರ ಮೆಲುನಡೆಯಿಂದ ಬಳಕುತ್ತಾ ನಸುನಗುತ್ತಾ ಜೋಹರ ಪ್ರವೇಶಿಸಿದಳು. ಆದರೆ ರಮಾನಾಥನ ಮನಸ್ಸು ಇಂದು ಅವಳಿಂದಲೂ ವಿಮುಖವಾಗಿ ಬಿಟ್ಟಿತ್ತು.

ಜೋಹರ ಕೇಳಿದಳು-- ಏನು ಯಾರನ್ನು ನೆನಸುತ್ತಿದ್ದೀರಿ ?

•ಹೀಗನ್ನುತ್ತಾ ತನ್ನ ಉರುಟಾದ, ಬೆಣ್ಣೆಯಂತೆ ಕೋಮಲವಾದ ಬಾಹುಗಳನ್ನು ಅವನ ಕಂಠದ ಮೇಲೆ ಹಾಕಿ ತನ್ನ ಕಡೆಗೆ ಬರಸೆಳೆದಳು. ರಮಾನಾಥನು ಮೌನವಾಗಿ ಇನ್ನು ತನಗೆ ಇದೇ ಆಶ್ರಯವೋ ಎಂಬಂತೆ ಅವಳ ಹೃದಯದ ಮೇಲೆ ಮಸ್ತಕವನ್ನಿರಿಸಿದನು.

ಜೋಹರಳೆಂದಳು— ನಿಜವನ್ನು ಹೇಳಿರಿ. ಇಂದು ನೀವು ಇಷ್ಟು ಉದಾಸರಾಗಿರುವಿರೇಕೆ? ನನ್ನ ಮೇಲೆ ಸಿಟ್ಟೇ?

ರಮಾನಾಥನು ಆವೇಶದಿಂದ ನಡುಗುವ ಸ್ವರದಲ್ಲಿ ಹೇಳಿದನು—ಇಲ್ಲ ಜೋಹರ, ನಿನ್ನ ಮೇಲೆ ನಾನು ಸಿಟ್ಟಾಗುವೆನೆ? ನನ್ನಂತಹ ದುರ್ಭಾಗ್ಯನ ಮೇಲೆ ನೀನು ತೋರಿಸಿದ ದಯೆಗಾಗಿ ನಾನು ನಿನಗೆ ಎಂದೆಂದೂ ಕೃತಜ್ಞನಾಗಿರುವೆ. ನನ್ನ ಬಾಳ್ವೆಯ ಮುರಿದುಹೋದ ದೋಣಿ ಮುಳುಗಲು ತೊಡಗಿದ್ದಾಗ ನೀನದನ್ನು ಎತ್ತಿ ಹಿಡಿದೆ. ನನ್ನ ಜೀವನದ ಈ ಮಂಗಲಮಯ ದಿನಗಳ ಸ್ಮೃತಿಯನ್ನು ಹೃದಯದಲ್ಲಿರಿಸಿ ಪೂಜೆ ಮಾಡುತ್ತಿರುವೆ. ಆದರೆ ನಿರ್ಭಾಗ್ಯರನ್ನು ಆಪತ್ತು ತನ್ನ ಕಡೆಗೆ ಸೆಳೆಯುತ್ತಲೇ ಇರುವುದು. ಪ್ರೇಮದ ಬಂಧನವು ಕೂಡಾ ಅವರನ್ನು ಉಳಿಸಿಕೊಳ್ಳಲಾರದು. ಜಾಲಪಳನ್ನು ನಾನು ಈ ಹೊತ್ತು ಯಾವ ರೂಪದಲ್ಲಿ ಕಂಡೆನೋ, ಅದು ನನ್ನೆದೆಯನ್ನು ಈಟಿಯಿಂದ ತಿವಿದಂತೆ ನೋಯಿಸುತ್ತಿದೆ. ಹರಕು-ಕೊಳಕು ಬಟ್ಟೆಯನ್ನುಟ್ಟು, ಬಿಂದಿಗೆಯನ್ನು ಹೊತ್ತುಕೊಂಡು ಬರುತ್ತಿದ್ದ ಆಕೆಯನ್ನು ಕಂಡು ನನ್ನೆದೆಯು ಒಡೆದು ಚೂರುಚೂರಾಗಿದೆ. ಇಷ್ಟು ದುಃಖವು ನನ್ನ ಜೀವನದಲ್ಲಿ ಹಿಂದೆಂದೂ ನನಗಾದುದಿಲ್ಲ. ಜೋಹರ, ಅವಳ ದಶೆ ಹೀಗೇಕಾಗಿದೆಯೆಂದು ನಾನು ಹೇಳಲಾರೆ.

ಜೋಹರ— ಆ ಮುದಿ ಖಟಿಕನ ಮನೆಯಲ್ಲಿದ್ದವಳಲ್ಲವೆ?

ರಮಾ— ಹೌದು, ಇದ್ದಳು. ಆದರೆ ಆ ಮನೆಯನ್ನು ತೊರೆದಳೇತಕ್ಕೆಂಬುದು ಸಮಸ್ಯೆಯಾಗಿದೆ. ಇನ್ಸ್‌ಪೆಕ್ಟರ್ ಸಾಹೇಬರು ನನ್ನ ಹತ್ತಿರವೇ ಇದ್ದುದರಿಂದ ನನಗೆ ಅವಳೊಡನೆ ಮಾತನಾಡಲಾಗಲಿಲ್ಲ. ಜೋಹರ, ನೀನು ಏನೇ ಹೇಳು, ನಾನಂತೂ ನಿನಗೆ ನನ್ನ ಮೇಲೆ ಪ್ರೇಮವಿದೆಯೆಂದು ಬಗೆಯುತ್ತೇನೆ ನಮ್ಮನ್ನು ಪ್ರೇಮಿಸುವವರು ನಮ್ಮ ಕಷ್ಟಗಳಲ್ಲಿ ಭಾಗಿಗಳಾಗದಿದ್ದರೆ ಅವರ ಪ್ರೇಮವು ನಿಜವೆಂದಾಗುವುದೆ? ನನ್ನನ್ನು ಹಾದಿಗೆ ಹಚ್ಚುವುದಕ್ಕೆಂದು ನಿನ್ನನ್ನು ಕಳುಹಿದರು. ಆದರೆ ನಿನಗೆ ನನ್ನ ಮೇಲೆ ದಯೆ ಬಂತು. ನೆಲಕ್ಕೆ ಬಿದ್ದವನನ್ನು ಒದೆಯುವುದು ತರವಲ್ಲೆಂದು ನೀನು ಬಗೆದಿಯೆಂದು ಕಾಣುವುದು. ಯಾವುದಾದರೂ ಕಾರಣದಿಂದ ನೀನು ಇಂದು ಕೋಪಿಸಿಕೊಂಡಿ ಎನ್ನುವ. ನಾಳೆ ನನ್ನ ಕಷ್ಟವನ್ನು ನೋಡಿ ನಿನಗೆ

ನೋವಾಗಲಾರದೆ ? ನಾನು ಹಸಿವೆಯಿಂದ ಸಾಯುವುದನ್ನು ನೋಡಿ. ಮನುಷ್ಯರು ನಾಯಿಗೆ ತೋರಿಸುವುದಕ್ಕಿಂತ ಸ್ವಲ್ಪ ಹೆಚ್ಚು ದಯೆಯನ್ನು ನೀನು ನನಗೆ ತೋರಿಸಲಾರೆಯಾ ? ಪ್ರೇಮವು ಒಮ್ಮೆ ವಾಸಮಾಡಿದ ಸ್ಥಾನದಲ್ಲಿ ಉದಾಸೀನತೆ ವಿರಾಗಗಳು ಬೇಕಾದರೆ ಹುಟ್ಟಿಕೊಳ್ಳಲಿ, ಹಿಂಸೆಯ ಭಾವವು ಎಂದೂ ಉಂಟಾಗಲಾರದು. ಜೋಹರಾ, ನೀನು ನನಗೆ ಸ್ವಲ್ಪವೂ ಸಹಾನುಭೂತಿ ತೋರಿಸುವುದಿಲ್ಲವೆ? ನೀನು ಮನಸ್ಸು ಮಾಡಿದರೆ ಜಾಲಪಳು ಎಲ್ಲಿರುವಳೆಂದೂ, ಯಾಕೆ ಹಾಗಿರುವಳೆಂದೂ ನನ್ನ ಕುರಿತು ಅವಳ ಮನಸ್ಸಿನಲ್ಲಿ ಏನಿರುವುದೆಂದೂ, ಎಂದಿನತನಕ ಇಲ್ಲಿ ಇರಲಿಚ್ಛಿಸುವಳೆಂದೂ, ತಿಳಿದುಕೊಂಡು ಬರುವುದು ಕಷ್ಟವಲ್ಲ. ನೀನು ಹೇಗಾದರೂ ಮಾಡಿ ಅವಳನ್ನು ಪ್ರಯಾಗಕ್ಕೆ ಹೋಗಲೊಪ್ಪಿಸಿದರೆ ನಾನು ನಿನ್ನ ಗುಲಾಮನಾದೇನು ಈ ಪರಿಸ್ಥಿತಿಯಲ್ಲಿ ನಾನವಳನ್ನು ನೋಡಲಾರೆ. ಇಂದು ರಾತ್ರಿಯೇ ಇಲ್ಲಿಂದ ಓಡಿ ಹೋಗಲಿಕ್ಕೂ ಸಾಕು. ನಾನು ಶೂರನಲ್ಲ, ಅಪಾಯವನ್ನು ಕಂಡೊಡನೆ ನನ್ನ ಎದೆ ಕುಸಿಯುತ್ತದೆ. ಎಲ್ಲ ಹೌದು, ಆದರೆ ಈ ನೋವನ್ನು ಮಾತ್ರ ಸಹಿಸಿಕೊಂಡಿರಲಾರೆ

ಜೋಹರ ವೇಶ್ಯೆಯಾಗಿದ್ದಳು. ಒಳ್ಳೆಯ–ಕೆಟ್ಟ ಎಷ್ಟೋ ಮಂದಿಯನ್ನು ಅವಳು ಕಂಡಿದ್ದಳು ಈ ಪರದೇಶಿ ಯುವಕನಿಗೂ ಆ ಅನ್ಯ ವ್ಯಕ್ತಿಗಳಿಗೂ ಒಂದು ದೊಡ್ಡ ಭೇದವಿರುವುದನ್ನು ಅವಳ ಕಣ್ಣು ಮೊದಲೇ ಗುರುತಿಸಿತ್ತು. ಮೊದಮೊದಲು ಅವಳು ಇಲ್ಲಿಗೆ ಬಂದುದು ಹಣದ-ಸಲುವಾಗಿಯೇ ಆದರೂ, ನಾಲ್ಕಾರು ದಿನಗಳ ಮೇಲೆ ಅವಳ ಮನಸ್ಸು ರಮಾನಾಥನ ಕಡೆಗೆ ಆಕರ್ಷಿತವಾಗಿತ್ತು. ಪ್ರೌಢೆಯರು ಅನುರಾಗದ ಅವಹೇಳನೆಯನ್ನು ಮಾಡಲಾರರು. ರಮಾನಾಥನಲ್ಲಿ ಬೇರೆಲ್ಲ ಗುಣಗಳು ದೋಷಗಳೆಂದಿಟ್ಟುಕೊಂಡರೂ, ಅನುರಾಗವೊಂದಿತ್ತು. ತನ್ನ ಹೃದಯದಲ್ಲಿದ್ದುದನ್ನು ಮರೆಮಾಜದೆ ಹೇಳಿ; ಮುಚ್ಚುಮರೆಯಿಲ್ಲದೆ ವರ್ತಿಸಿದವನೊಬ್ಬನನ್ನು ಜೋಹರ ಕಾಣುವುದು ಇದೇ ಮೊದಲಬಾರಿ. ಅವನ ಮಾತುಗಳನ್ನು ಕೇಳಿ ಅವಳಿಗೆ ಸ್ವಲ್ಪವೂ ಈರ್ಷೆಯಾಗಲಿಲ್ಲ; ಬದಲು ಸ್ವಾರ್ಥಮಯ ಸಹಾನುಭೂತಿಯೊಂದು ಉತ್ಪನ್ನವಾಯಿತು. ಪ್ರೇಮದ ವಿಷಯ

ದಲ್ಲಿ ಇಷ್ಟು ಸರಳಸಾದ ಈ ಯುವಕನನ್ನು ಪ್ರಸನ್ನಗೊಳಿಸಿದರೆ, ಅವನು ತನ್ನ ಜೀವನದ ದಾಸನಾಗುವನು.

ಜೋಹರ— ಇಷ್ಟಕ್ಕಾಗಿ ನೀವು ದುಃಖಪಡುತ್ತಿರುವುದೇ ಪ್ರಿಯಾ? ನಿಮ್ಮ ಸಲುವಾಗಿ ಜೋಹರಳು ಏನು ಮಾಡಲೂ ಸಿದ್ಧಳು. ನಾನು ನಾಳೆಯೇ ಜಾಲಪಳ ಪತ್ತೆ ಹಿಡಿದು ಅವಳು ಇಲ್ಲೇ ಇರಬಯಸುವು ದಾದರೆ ಅದಕ್ಕೆ ತಕ್ಕುದಾದ ಏರ್ಪಾಡನ್ನು ಮಾಡುವೆ; ಹೋಗಲಿಚ್ಛಿಸುವು ದಾದರೆ ರೈಲಿನಲ್ಲಿ ಕುಳ್ಳಿರಿಸಿ ಬರುವೆ.

ರಮಾನಾಥನು ದೀನತೆಯಿಂದ ಎಂದನು–ನಾನೊಂದು ಸಲ ಅವಳನ್ನು ನೋಡುವಂತಿದ್ದರೆ ಹೃದಯದಿಂದ ಒಂದು ಹೊರೆ ಇಳಿಯುತ್ತಿತ್ತು.

ಜೋಹರ ಚಿಂತಿತಳಾಗಿ ಎಂದಳು— ಪ್ರಿಯನೆ, ಅದು ಮಾತ್ರ ಸ್ವಲ್ಪ ಕಷ್ಟ. ಇಲ್ಲಿಂದ ನಿಮ್ಮನ್ನು ಬಿಡುವವರು ಯಾರು?

ರಮಾ— ಏನಾದರೂ ಉಪಾಯ ಹೇಳು.

ಜೋಹರ— ನಾನು ಅವಳನ್ನು ಪಾರ್ಕಿನಲ್ಲಿ ನಿಲ್ಲಿಸಿ ಬರುವೆ. ನೀವು ಡಿಪ್ಟಿ ಸಾಹೇಬರೊಡನೆ ಅಲ್ಲಿಗೆ ಹೋಗಿ ಏನಾದರೂ ನೆವದಿಂದ ಅವಳನ್ನು ಭೇಟಿಯಾಗಬೇಕು. ಹೊರತು ಬೇರೆ ಉಪಾಯವೇನೂ ನನಗೆ ಕಾಣಿ ಸುವುದಿಲ್ಲ.

ರಮಾನಾಥನು ಏನೋ ಹೇಳಬೇಕೆಂದಿದ್ದನು. ಅಷ್ಟರಲ್ಲಿ ದರೋಗನು ಕೂಗಿದನು – ನಾನು ಒಳಗೆ ಬರಬಹುದೆ?

ಇಬ್ಬರೂ ಸರಿಯಾಗಿ ಕೂತರು. ದರೋಗನು ಮುಗುಳ್ನಗುತ್ತ ಜೋಹರಳ ಮಗ್ಗುಲಲ್ಲಿ ಕೂತು ಎಂದನು— ಈ ಹೊತ್ತು ಇಲ್ಲಿ ಸದ್ದಿಲ್ಲ. ಕಾರಣವೇನು? ಏನು ಖಜಾನೆ ಖಾಲಿಯಾಗಿದೆಯೆ? ಜೋಹರಾ, ನಿನ್ನ ಸುಂದರ ಕೈಗಳಿಂದ ಒಂದು ಗ್ಲಾಸು ತುಂಬಿಸಿ ಕೊಡು ನೋಡುವ. ತಮ್ಮಾ ರಮಾನಾಥ, ಕೋಪಿಸಬೇಡ.

ರಮಾನಾಥನು ಕಠೋರವಾಗಿ ಎಂದನು— ದರೋಗಜೀ, ಈಗ ಬೇಡ ಬಿಡಿ. ನೀವು ಕುಡಿದು ಬಂದಂತೆ ಕಾಣುತ್ತಿದೆ.

ದರೋಗನು ಜೋಹರಳ ಕೈ ಹಿಡಿದು ಎಂದನು— ಒಂದು ಗ್ಲಾಸು ಸಾಕು, ಜೋಹರಾ. ಒಂದೇ ಗ್ಲಾಸು! ಇನ್ನೊಂದು ಮಾತು ಇವತ್ತು ನೀನು ನನ್ನ ಆತಿಥ್ಯವನ್ನು ಸ್ವೀಕರಿಸಬೇಕು.

ರಮಾನಾಥನು ಕೆಂಡವಾಗಿ ಹೇಳಿದನು— ದರೋಗಜೀ, ನೀವು ಈಗ ಹೋಗುವುದೊಳ್ಳೆಯದು. ನಾನು ಇದನ್ನು ಸಹಿಸಲಾರೆ.

ದರೋಗನು ಅಮಲೇರಿದ ಕಣ್ಣುಗಳಿಂದ ಅವನನ್ನು ನೋಡಿ ಎಂದನು-- ಏನು ನಿಮಗೆಂದು ಪಟ್ಟ ಬರೆದು ಕೊಟ್ಟಿದೆಯೆ?

ರಮಾ— ಹೌದುಹೌದು, ಪಟ್ಟಾ ಬರೆಸಿದ್ದೇನೆ.

ದರೋಗ— ಹಾಗಾದರೆ ನಿಮ್ಮ ಪಟ್ಟಾ 'ಕ್ಯಾನ್ಸಲ್!'

ರಮಾ— ಇಲ್ಲಿಂದ ಹೊರಡಿ ನೀವು.

ದರೋಗ— ಒಳ್ಳೆಯದು! ಈಗ ಕಪ್ಪೆಗೂ ನೆಗಡಿಯಾಗಲುತೊಡಗಿದೆಯೆ! ಇರಲಿರಲಿ ಜೋಹರಾ ಹೊರಡು. ಇವರಿಲ್ಲಿ ಬಾಯಿ ಬಡಕೊಳ್ಳುತ್ತಿರಲಿ.

ಹೀಗೆಂದು ಅವನು ಜೋಹರಳನ್ನು ಕೈ ಹಿಡಿದು ನಿಲ್ಲಿಸಿದನು.

ರಮಾನಾಥನು ಅವರ ಕೈಯನ್ನು ಜೋರಿನಿಂದ ಕೊಡಹಿ ಎಂದನು— ನಾನು ಹೇಳುವುದನ್ನು ಹೇಳಿಯಾಯಿತು. ಜೋಹರ ಈಗ ನಿಮ್ಮೊಡನೆ ಬರಲು ಸಾಧ್ಯವಿಲ್ಲ. ಅವಳು ಹೋದರೆ, ಅವಳ ಮತ್ತು ನಿಮ್ಮ ಇಬ್ಬರ ರಕ್ತವನ್ನೂ ಕುಡಿದುಬಿಡುವೆ. ಜೋಹರ ನನ್ನವಳು. ನಾನಿರುವವರೆಗೆ ಬೇರೆ ಯಾರೂ ಅವಳ ಕಡೆ ಕಣ್ಣೆತ್ತಿ ನೋಡಲಾರರು—

ಹೀಗೆನ್ನುತ್ತಾ ಅವನು ದರೋಗ ಸಾಹೇಬರ ಕೈಯನ್ನು ಅವುಕಿ ಹಿಡಿದು ಬಾಗಿಲಿಂದ ಹೊರಗೆ ದೂಡಿ, ಬಾಗಿಲು ಮುಚ್ಚಿ, ಅಗಳಿ ಹಾಕಿ

ದನು. ದರೋಗರು ಬಾಗಿಲ ಹೊರಗಿನಿಂದ ಬೈಗಳ ಸುರಿಮಳೆಗರೆಯ ಹತ್ತಿದರು.

ರಮಾನಾಥನೆಂದನು:- ಜಗಲಿಯಿಂದ ಕೆಳಗೆ ದೊಬ್ಬಿ ಬರಲೇ ಹೇಗೆ?

ಜೋಹರ— ಬೊಗಳುತ್ತಿರಲಿ, ತಾನಾಗಿ ಹೋಗುತ್ತಾನೆ.

ರಮಾ— ಹೋದ.

ಜೋಹರ— ಅವನನ್ನು ಹೊರಗೆ ಹಾಕಿದ್ದು ಒಳ್ಳೆಯದಾಯಿತು. ಇಲ್ಲವಾದರೆ ನನ್ನನ್ನು ಕರೆದುಕೊಂಡು ಹೋಗಿ ತೊಂದರೆ ಕೊಡುತ್ತಿದ್ದ. ಏನು ನೀವು ಅವನನ್ನು ಖಂಡಿತವಾಗಿ ಕೊಲ್ಲುತ್ತಿದ್ದಿರಾ?

ರಮಾ— ಖಂಡಿತವಾಗಿ ಅವನ ಪ್ರಾಣ ತೆಗೆದುಬಿಡುತ್ತಿದ್ದೆ. ಆಗ ನನ್ನ ಬುದ್ಧಿ ನನ್ನ ವಶದಲ್ಲಿದ್ದಿಲ್ಲ. ಎಲ್ಲಿಂದ ನನಗೆ ಅಷ್ಟು ಶಕ್ತಿ ಬಂತೋ ದೇವರೇ ಬಲ್ಲ.

ಜೋಹರ— ನಾಳೆ ಅವನು ನನ್ನನ್ನು ಇಲ್ಲಿಗೆ ಬರಗೊಡದಿದ್ದರೆ?

ರಮಾ— ಹಾಗೇನಾದರೂ ಮಾಡಿದರೆ ಗೋಲಿ ಹಾರಿಸದಿರುತ್ತೇನೆಯೆ? ಅಲ್ಲಿ ನೋಡು ಪಿಸ್ತೂಲು. ನೀನೀಗ ನನ್ನವಳು ಜೋಹರಾ! ನಾನು ನನ್ನ ಸರ್ವಸ್ವವನ್ನು ನಿನ್ನ ಚರಣಗಳಲ್ಲಿ ಸಮರ್ಪಿಸಿರುವೆ, ನಿನ್ನ ಸರ್ವಸ್ವವನ್ನು ಪಡೆದೇ ನಾನು ಸಂತುಷ್ಟನಾಗುವೆ. ನೀನು ನನ್ನವಳು, ನಾನು ನಿನ್ನವನು. ಮೂರನೆಯ ಯಾವ ಸ್ತ್ರೀ-ಪುರುಷರಿಗೂ ನಮ್ಮ ನಡುವೆ ಬರುವ ಹಕ್ಕಿಲ್ಲ. ಖಂಡಿತ ನಾನು ಸಾಯುವತನಕ ಆ ಹಕ್ಕಿಲ್ಲ.

ಜೋಹರಳ ಕಣ್ಣುಗಳು ಹೊಳಹೊಳೆದುವು. ರಮಾನಾಥನ ಕುತ್ತಿಗೆಯ ಮೇಲೆ ತನ್ನ ತೋಳುಗಳನ್ನು ಸುತ್ತಿ ಹೇಳಿದಳು— ಪ್ರಿಯನೇ, ಅಂತಹ ಮಾತುಗಳನ್ನು ಹೇಳದಿರು.

---

* ಮುಂದಿನ ಪುಟದ ಸಂಖ್ಯೆ ತಪ್ಪಿ ೨೭೧ರ ಬದಲು ೨೭೩ ಬಿದ್ದು, ಹಾಗೇ ಮುಂದುವರಿದಿದೆ, ವಿಷಯುವೇನೂ ಲೋಪವಾಗಿಲ್ಲವೆಂಬುದು ವಿದಿತವಿರಲಿ.

[೪೪]

ಆ ದಿನವೆಲ್ಲ ರಮಾನಾಥನು ಉದ್ವೇಗದ ಹಳುವಿನಲ್ಲಿ ಅಲೆಯುತ್ತಲೇ ಇದ್ದನು. ಒಮ್ಮೆ ನಿರಾಶೆಯ ಕತ್ತಲೂ ಕಣಿವೆಯೂ, ಮತ್ತೊಮ್ಮೆ ಆಶೆಯ ಹಸುರೂ ಒಂದರ ಬಳಿಕೊಂದು ಅವನಿಗೆ ಗೋಚರವಾಗುವುದು. 'ಜೋಹರಾ ಜಾಲಪಳನ್ನು ನೋಡು ಹೋಗಿರುವಳೋ ಇಲ್ಲವೋ? ನನಗೇನೋ ಭಾಷೆಕೊಟ್ಟಿರುವಳು ಹೌದು. ಆದರೆ ಮೋಸಕ್ಕೆಳೆದು ಡಿಸ್ಪಿಯವರ ಹತ್ತಿರ ನಡೆದುದನ್ನೆಲ್ಲಾ ಹೇಳಿಬಿಟ್ಟಳೆ? ಹಾಗೆ ಮಾಡಿದಳಾದರೆ ಜಾಲಪಳಿಗೆ ಬಂತು ಕೇಡು. ಆದರೆ ಜೋಹರಾ ಇಷ್ಟು ನೀಚಪ್ರಕೃತಿಯವಳಲ್ಲ ಖಂಡಿತವಾಗಿಯೂ ಅಲ್ಲ. ಅವಳು ನನಗೆ ಮೋಸಮಾಡಲಾರಳು' ಆ ವೇಳೆ ಅವನಿಗೆ ತಾನು ಆಫೀಸಿನಿಂದ ಬಂದೊಡನೆ ಓಡಿಬಂದು ಜೇಬಿಗೆ ಕೈಹಾಕಿ ರೂಪಾಯಿಗಳನ್ನು ತೆಗೆಯುವ ಜಾಲಪಳ ನೆನಹುಂಟಾಯಿತು ಆಗ ಅವಳು ಪ್ರೀತಿಯ ವಸ್ತುವಾಗಿದ್ದಳಾದರೆ, ಈಗ ಉಪಾಸನೆಯ ವಸ್ತು. ಜಾಲಪಾ! ನಾನು ನಿನಗೆ ತಕ್ಕವನಲ್ಲ ನಾನು ನಿನಗೆ ಈಗಲೂ ನಮಿಸುವೆ. ನೀನು ನನ್ನನ್ನು ಹೃದಯದಿಂದ ಹೊರದಬ್ಬಿರುವಿಯೆಂದೂ, ವಿರಕ್ತೆಯಾಗಿರುವಿಯೆಂದೂ, ನಾನೀಗ ಮುಳುಗಿಹೋದಲ್ಲಿ ದುಃಖವೂ ದಡವನ್ನು ಸೇರಿದರೆ ಆನಂದವೂ ನಿನಗಾಗದೆಂದೂ ನಾನುಬಲ್ಲೆ ಆದರೂ ಈಗ ನಾನೊಂದು ದೊಡ್ಡ ಸಂಕಟದಲ್ಲಿ ಬೀಳುವುದಾದರೆ ನಿನ್ನ ಕಣ್ಣುಗಳಿಂದ ನೀರು ಸೂಸದಿರದು; ನಾನೆಲ್ಲಾದರೂ ಸತ್ತುಹೋದಪಕ್ಷಕ್ಕೆ ನೀನು ನನ್ನ ಶವವನ್ನು ನೋಡಲು ನೀನು ಅಗತ್ಯವಾಗಿಯೂ ಬರುವಿ.

ತಾನು ಜಾಲಪಳ ಮಾತಿನಂತೆ ಹೇಳಿಕೆಯನ್ನು ಬದಲಿಸದಿದ್ದುದಕ್ಕೆ ರಮಾನಾಥನಿಗೀಗ ತುಂಬಾ ಪಶ್ಚಾತ್ತಾಪವಾಯಿತು. ಅವಳ ಮಾತಿನಂತೆ ನಡೆಯುತ್ತಿದ್ದರೆ ಈಪರಿಸ್ಥಿತಿಯೊದಗುತ್ತಿತ್ತೆ? ಜಾಲಪಳು ಅವನೊಡನಿರುತ್ತಿದ್ದರೆ ಅವನು ಎಂತಹ ಕಷ್ಟಗಳನ್ನಾದರೂ ಸಹಿಸಲು ಸಮರ್ಥನಾಗುತ್ತಿದ್ದನು. ಆಕೆಯ ಶ್ರದ್ಧೆಪ್ರೇಮಗಳ ಕವಚವನ್ನುತೊಟ್ಟು ಅಜೇಯನಾಗುತ್ತಿದ್ದನು. ಆಗ ಗಲ್ಲೇಆದರೂ ಅದನ್ನು ನಗುನಗುತ್ತಾ ಸಹಿಸಬಹುದಿತ್ತು.

ಜಾಲಪಳನ್ನು ಬಿಟ್ಟು ತಾನು ಬಾಳಲಾರೆನೆಂದು ಅವನಿಗೆ ಇಂದು ತಿಳಿ

ಪ್ರಸನ್ನಗೊಳಿಸುವುದು ಆಗುವಹೋಗುವ ಮಾತಲ್ಲ. ಈ ರೀತಿಯಾಗಿ ಬಾಳುವೆ ಮಾಡಲಿಕ್ಕೆ ಜೋಹರಳು ಒಪ್ಪಲಿಕ್ಕಿಲ್ಲ; ನನ್ನನ್ನು ಕ್ಷಮಿಸಲಿಕ್ಕಿಲ್ಲ. ಅವಳಿಗಾಗಿ ನಾನು ಇಂತಹ ಯಾತನೆಗೊಳಗಾಗಿರುವೆನೆಂದು ಹೇಳಿದರೂ ಕ್ಷಮಿಸಲೊಲ್ಲಳು. 'ನನಗಾಗಿ ನಿಮ್ಮ ಆತ್ಮವನ್ನು ಕೆಡಿಸಿಕೊಳ್ಳ ಹೇಳಿದೆನೆ?' ಎಂದು ಕೇಳಿದರೆ ಕಷ್ಟ.

ಆದಿನ ರಮಾನಾಥನಿಗೆ ಸ್ನಾನಭೋಜನಗಳ ಪರಿವೆಯೇ ಇರಲಿಲ್ಲ; ಮೈಯೆಲ್ಲ ಕಣ್ಣಾಗಿ ರಸ್ತೆಯ ಕಡೆಗೇ ನೋಡುತ್ತಿದ್ದನು. ರಾತ್ರಿಯ ಘಟನೆಯಿಂದ ಕುಪಿತರಾಗಿಯೋ ಏನೋ ತಿಳಿಯದು, ದರೋಗರ ಸವಾರಿಯೂ ಇಲ್ಲ

ರಮಾನಾಥನಿಗೆ ತನ್ನ ಪತನವನ್ನು ಎಣಿಸಿದಹಾಗೆ ನಾಚುಗೆ ಹೆಚ್ಚುತ್ತಿತ್ತು. ದುರ್ಬಲ ಜನರ ಸ್ವಭಾವವೇ ಹಾಗೆ. ಒಬ್ಬನೇ ಕುಳಿತಾಗ ಅವನಿಗೆ ತನ್ನ ದಶೆಯನ್ನು ಕಂಡು ದುಃಖವು ಮರುಕಳಿಸುವುದು 'ನನ್ನ ವಿಲಾಸವೃತ್ತಿ ಇಷ್ಟು ಪ್ರಬಲವಾಗಿದೆ ಏಕೆ? ದುರ್ಭೋಗತೆಯಲ್ಲಿಯೂ ಪ್ರಸನ್ನನಾಗಿರುವುದಕ್ಕೆ ನಾನೇನು ವಿವೇಕಶೂನ್ಯನೇ?' ಎಂದು ಯೋಚಿಸುವನು. ಆದರೆ ಒಡನಾಟದ ಜನರು, ಶರಾಬಿನ ಸೀಸೆ, ಜೋಹರಳ ಒನಪು ಒಯ್ಯಾರಗಳ ಮುಂದೆ ಅವನ ಯೋಚನೆ, ವಿವೇಕ, ಧರ್ಮಜ್ಞಾನಗಳೆಲ್ಲ ಮಾಯವಾಗುತ್ತಿದ್ದುವು.

ರಾತ್ರಿಗಂಟೆ ಹತ್ತಾದರೂ ಜೋಹರಳ ಸೊಲ್ಲಿಲ್ಲ ರಮಾನಾಥನ ನಿರಾಶೆ ಬಲವಾಯಿತು ಅಂದು ರಾತ್ರಿ ಕಣ್ಣಲ್ಲೇ ಬೆಳಗಾಯಿತು ಅವಳ ಮನೆಗೆ ಜನ ಕಳುಹಿಯಾದರೂ ಅವಳನ್ನು ಬರ ಹೇಳಬೇಕೆಂದು ದರೋಗನ ಹತ್ತಿರ ಹೋಗಿ 'ಜೋಹರಾ ನಿನ್ನೆ ಬರಲೇಇಲ್ಲ ಎಲ್ಲಿ ಕೋಪಿಸಿಕೊಂಡಿದ್ದಾಳೋ ಏನೋ? ಯಾರನ್ನಾದರೂ ಕಳಿಸಿ ವಿಚಾರಿಸುತ್ತೀರಾ?' ಎಂದು ಹೇಳಿದನು.

ದರೋಗರು ಸ್ವಲ್ಪ ಗಟ್ಟಿಯಾಗಿಯೇ ಹೇಳಿದರು—ಅವಳಿಗೆ ಅಷ್ಟು ಗರ್ಜಿದ್ದರೆ ತಾನಾಗಿ ಬರುತ್ತಾಳೆ ಯಾರನ್ನೂ ಕಳಿಸುವುದು ಬೇಡ.

ರಮಾನಾಥನಿಗೆ ದರೋಗರ ಮಾತಿನ ಕಾರಣವೇನೆಂಬುದು ತಿಳಿದಿದ್ದುದರಿಂದ ಅವನು ಮತ್ತೆ ಹಟಮಾಡಲಿಲ್ಲ.

೨

ಒಂದು ವಾರ ಸಂದರೂ ಜೋಹರಳ ದರ್ಶನ ವಿಲ್ಲ ರಮಾನಾಥನ ಇನ್ನು ಅವಳು ಬರುವ ಆಸೆಯನ್ನೇ ತೊರೆದನು ಆಕೆ ವಿಶ್ವಾಸ ಘಾತಕಿ ಯೆಂಬುದು ಸ್ಪಷ್ಟವಾಯಿತು. ಅಥವಾ ಪೋಲೀಸು ಅಧಿಕಾರಿಗಳು ಅಡ್ಡ ಬಂದಿರಬಹುದೆ? ಹಾಗಿದ್ದರೆ ಪತ್ರ ಬರೆಯಲಿಕ್ಕೇನು? ನಾನು ಅವಳ ಹತ್ತಿರ ಈ

ಗುಟ್ಟನ್ನು ಹೇಳಿದುದೇ ತಪ್ಪಾಯಿತು. ಆದರೆ ಜೋಹರಾ ಯಾರಿಗೆ ಮೋಸ ಮಾಡಿದರೂ ನನಗೆ ಮಾಡಲಾರಳೆಂದು ನನ್ನ ಅಂತರಾತ್ಮವು ನುಡಿಯುತ್ತಿದೆ. ಕಣ್ಣಲ್ಲಿ ನೀರು ತುಂಬಿಕೊಂಡು, ಕಂಠವುಮ್ಮಳಿಸುತ್ತಾ 'ನೋಡಿ, ನನ್ನನ್ನು ಮರೆಯಬಾರದು' ಎಂದು ನಿಷ್ಕಪಟ ಹೃದಯದಿಂದ ಹೇಳುತ್ತಿದ್ದ ಜೋಹರಾ ಮೋಸ ಮಾಡಿಯಾಳೆ? ಅಂತಹ ಸಂಗತಿಯೇನಾದರೂ ಇಲ್ಲದಿರುತ್ತಿದ್ದರೆ, ಇದುವರೆಗೆ ಬಂದೇಬರುತ್ತಿದ್ದಳು.

ಏಳನೆಯ ದಿನ ಎಂಟು ಗಂಟೆಯ ಹೊತ್ತು ದರೋಗರೊಡನೆ ಸಿನೆಮಾಕ್ಕೆ ಹೋಗಲೆಂದು ಉಡುಪು ಹಾಕಿಕೊಳ್ಳುತ್ತಿದ್ದಾಗ ಜೋಹರಾ ಬಂದಳು. ರಮಾನಾಥನು ಒಂದು ಸಲ ಅವಳ ಕಡೆಗೆ ನೋಡಿ ಆಮೇಲೆ ತಲೆ ಬಾಚಿಕೊಳ್ಳುವುದರಲ್ಲಿ ತಲ್ಲೀನನಾದನು. ಜೋಹರಳ ಮೈಯಲ್ಲಿ ಏನೂ ಆಭರಣ ಇರಲಿಲ್ಲ ಬರೇ ಒಂದು ಬಿಳಿವಸ್ತ್ರವನ್ನುಟ್ಟುಕೊಂಡ ಆಕೆಯ ಈ ಅಪೂರ್ವ ವೇಷವನ್ನು ಕಂಡು ಅವನಿಗೆ ಆಚ್ಚರಿ ಎನಿಸಿತಾದರೂ, ಅವನು ಮಾತಾಡಲಿಲ್ಲ

ಅವಳು ಒಂದು ಕ್ಷಣ ಸುಮ್ಮಗೆ ನಿಂತಿದ್ದು ಆಮೇಲೆಂದಳು—ಏನು, ನನ್ನ ಮೇಲೆ ಸಿಟ್ಟೆ? ನಾನು ಇಷ್ಟುದಿನ ಬರಲಿಲ್ಲವೆಂದೆ?

ರಮಾನಾಥನು ರಸವಿಹೀನವಾದ ಮಾತುಗಳನ್ನಾಗೆದನು—ನೀನು ಈ ಹೊತ್ತು ಬರದಿದ್ದರೂ, ನಮ್ಮದೇನು ನಡೆಯುತ್ತಿತ್ತು? ಏನೋ ಮಾರಾಯಿತಿ, ಇವೊತ್ತಾದರೂ ದಯಮಾಡಿಸಿದೆಯಲ್ಲವೋ?

"ಒಳ್ಳೆಯ ಆಟ ನಿಮ್ಮದು! ಕೆಲಸ ಕೊಟ್ಟುದೂ ನೀವೆ, ಕೆಲಸ ಮುಗಿಸಿ ಮರಳಿದಾಗ ಬೈಯುವುದೂ ನೀವೆ? ಬಾಯಿ ತೆರೆದ ಕೂಡಲೆ ಆಗಿಹೋಗುವಷ್ಟು ಸುಲಭ ಕೆಲಸವೆಂದೆಣಿಸಿದಿರಾ? ಹೊರಗೆ ಹೂವಿನಂತೆ ತೋರುತ್ತಿದ್ದು, ಒಳಗೆ ಕಲ್ಲಾಗಿರುವ ಆ ದೇವಿಯಬಳಿ ಇರದಾನ ಬೇಡಲು ಕಳಿಸಿದಿರಿ. ಅಬ್ಬಾ, ಅವಳು ಎಷ್ಟು ಕೋಮಲೆಯೋ ಅಷ್ಟೇ ದೃಢಳು!

",ಎಲ್ಲಿದ್ದಾಳೆ? ಏನು ಮಾಡುತ್ತಿದ್ದಾಳೆ."

"ಗಲ್ಲಿನ ಶಿಕ್ಷೆದೊರೆತ ಆ ದಿನೇಶನ ಮನೆಯಲ್ಲಿದ್ದಳು. ಅವನ ಮಕ್ಕಳ ನ್ನಾಡಿಸುವುದು, ನದಿಯಿಂದ ನೀರು ತರುವುದು, ಮನೆಗೆಲಸವನ್ನು ಮಾಡುವುದು, ದೊಡ್ಡದೊಡ್ಡ ಜನರ ಹತ್ತಿರ ಹೋಗಿ ಆ ಬಡ ಕುಟುಂಬದ ಸಲುವಾಗಿ ಚಂದಾ ಒಟ್ಟುಗೂಡಿಸುವದು. ಇದೇ ಕೆಲಸ. ಪಾಪ ಆ ದಿನೇಶನ

ಮನೆಯ ಅವಸ್ಥೆ ದೇವರಿಗೇ ಗೊತ್ತು. ಮೂರು ಮೂರು ದಿನ ಉಪವಾಸ ವ್ರತವೂ ನಡೆದಿತ್ತಂತೆ! ಜಾಲಪಾ ಹೋದುದರಿಂದ ಅವರಿಗೆ ಹೊಸ ಜೀವ ಬಂದಂತಾಗಿದೆ ”

“ನೀನು ನಿಂತಿರುವುದೇಕೆ? ಬಾ, ಕೂತುಕೋ. ಮೊದಲಿನಿಂದ ಒಂದು ಸೊಲ್ಲನ್ನಾದರೂ ಬಿಡದೆ ಹೇಳು. ನೀನು ಅವಳ ಬಳಿಗೆ ಹೇಗೆ ಹೋದಿ? ಅವಳು ಅಲ್ಲಿರುವಳೆಂದು ಹೇಗೆ ತಿಳಿಯಿತು.”

“ದೇವೀದೀನನಲ್ಲಿಗೆ ಹೋದೆ. ಅಲ್ಲಿ ಕೇಳಿಕೊಂಡು ದಿನೇಶನಲ್ಲಿಗೆ ಹೋದೆ ”

“ನೀನು ಹೋಗಿ ಆಕೆಯನ್ನು ಕರೆದಿಯಾ? ನಿನ್ನನ್ನು ಕಂಡು ಆಕೆಗೆ ಆಶ್ಚರ್ಯವಾಗಲಿಲ್ಲವೆ? ಸ್ವಲ್ಪ ಸಂಕೋಚವಂತೂ ಆಗಿರಬಹುದು ”

“ನಾನು ಈ ರೂಪದಲ್ಲಿ ಹೋಗಿದ್ದೆನಲ್ಲವೆ? ದೇವೀದೀನನ ಮನೆಯಿಂದ ನನ್ನ ಮನೆಗೆ ಹೋಗಿ ಬ್ರಹ್ಮಸಮಾಜದ ಸ್ತ್ರೀಯರಂತೆ ಉಡುಪು ಹಾಕಿಕೊಂಡು ಹೋದೆ. ಕಾಲೇಜಿನ ಲೇಡೀಟೀಚರಳಂತೆ ತೋರುತ್ತಿದ್ದೆ. ಜಾಲಪಳನ್ನು ಬಿಡಿ, ನಿಮಗಾದರೂ ಆಗ ನಾನು ಯಾರೆಂಬುದು ತಿಳಿಯುತ್ತಿದ್ದಿಲ್ಲ ದಿನೇಶನ ತಾಯಿಯ ಹತ್ತಿರ ನಾನು ಇಲ್ಲಿ ವಿಶ್ವವಿದ್ಯಾಲಯದಲ್ಲಿ ಓದುವವಳೆಂದೂ, ಮನೆ ಮುಂಗೇರದಲ್ಲೆಂದೂ ಹೇಳಿದೆ ಮಕ್ಕಳಿಗೆ ಮಿಠಾಯಿ ತೆಗೆದುಕೊಂಡು ಹೋಗಿದ್ದೆ ಅಲ್ಲಿ ಮಾತಾಡುತ್ತಿದ್ದಾಗ ಜಾಲಪಾ ಗಂಗಾಜಲವನ್ನು ಹೊತ್ತುಕೊಂಡು ಬಂದಳು. ದಿನೇಶನ ತಾಯಿಯ ಹತ್ತಿರ ನಾನು ಬಂಗಾಳಿಯಲ್ಲಿ ‘ಇವಳು ಕೆಲಸದ ಹೆಂಗುಸೋ?’ ಎಂದು ಕೇಳಿದೆ ಆಗ ಅವಳು ‘ಅಲ್ಲ, ಇವಳು ಸಹ ನಿನ್ನ ಹಾಗೆಯೆ ನಮ್ಮ ಮೇಲೆ ಕನಿಕರ ಪಟ್ಟು, ನಮ್ಮ ದುಃಖದಲ್ಲಿ ಪಾಲುಗಾರ್ತಿಯಾಗಲು ಬಂದವಳೊಬ್ಬಳು. ಇವಳ ಗಂಡನಿಗೆ ಇಲ್ಲಿ ಯಾವುದೋ ಆಫೀಸಿನಲ್ಲಿ ಕೆಲಸವಂತೆ. ಇವಳ ವಿಷಯ ಇದಕ್ಕಿಂತ ಹೆಚ್ಚು ನನಗೆ ತಿಳಿಯದು ದಿನವೂ ಬೆಳಿಗ್ಗೆ ಬಂದು ಮಕ್ಕಳನ್ನಾಡಿಸುವುದಕ್ಕೆ ಹೊರಗೆ ಕರೆದುಕೊಂಡು ಹೋಗುತ್ತಾಳೆ ನನ್ನನ್ನು ಬಿಡದೆ ತಾನೇ ಗಂಗಾಜಲವನ್ನು ಹೊತ್ತು ತರುತ್ತಾಳೆ. ಇವಳು ಬಂದು ನಮಗೆ ಜೀವದಾನ ವಿತ್ತಳು. ಹಿಂದಿಲ್ಲ ಮುಂದಿಲ್ಲ ಎಂದಿದ್ದ ನಮಗೆ ಈ ಮಾತಾಯಿ ಬಂದಂದಿನಿಂದ ಯಾವ ತರದ ಕಷ್ಟವೂ ತಿಳಿಯುವುದಿಲ್ಲ. ಇಂತಹ ವರದಾನ ಸಿಗಬೇಕಾದರೆ ನಾವೇನೋ ಪೂರ್ವಪುಣ್ಯ ಮಾಡಿದ್ದಿರಬೇಕು ”

ಆ ಮನೆಯ ಮುಂದೆಯೇ ಒಂದು ಚಿಕ್ಕ ಪಾರ್ಕಿದೆ. ಜಾಲಪಾ ಮಕ್ಕಳನ್ನು ಕೂಡಿಕೊಂಡು ಅಲ್ಲಿಗೆ ಹೋದಾಗ ನಾನು ಅವಳ ಬೆನ್ನುಹತ್ತಿದೆ. ಮಕ್ಕಳು ಆಟವಾಡುತ್ತಿದ್ದಾಗ, ನಾವು ಮಾತುಕತೆಗೆ ತೊಡಗಿದೆವು

ಇಲ್ಲಿ ರಮಾನಾಥನು ಉತ್ಸುಕತೆಯಿಂದ ಕೇಳಿದನು---ನೀನು ಮಾತಿಗೆ ಆರಂಭಿಸಿದುದು ಹೇಗೆ ?

ಜೋಹರಾ---ಅದನ್ನೇ ಹೇಳುತ್ತಿರುವೆನಲ್ಲಾ! 'ಜಾಲಪಾದೇವಿಯವರೇ, ನೀವು ಎಲ್ಲಿರುತ್ತೀರಿ? ಈ ಮನೆಯ ಹೆಂಗುಸರಿಬ್ಬರ ಬಾಯಿಯಿಂದಲೂ ನಿಮ್ಮ ಪ್ರಶಂಸೆಯನ್ನು ಕೇಳಿ ನಿಮ್ಮ ಮೇಲೆ ಮುಗ್ಧಳಾಗಿದ್ದೇನೆ' ಎಂದು ಹೇಳಿದೆ.

ರಮಾ---ನೀನು ಹೇಳಿದ ಶಬ್ದಗಳು ಇವೇ ಏನು?

ಜೋಹರಾ---ಸ್ವಲ್ಪ ವಿನೋದ ಮಾಡುವ ಎಂದು ಕಂಡಿತು ಅವಳು ನನ್ನನ್ನು ಆಶ್ಚರ್ಯದಿಂದ ನೋಡಿ, 'ನಿನ್ನನ್ನು ನೋಡುವಾಗ ನೀನು ಬಂಗಾಳಿ ಸ್ತ್ರೀಯರಂತೆ ಕಾಣುವದಿಲ್ಲವಲ್ಲಾ?' ಎಂದು ಹೇಳಿದಳು. ಆಗ ನಾನು ಮಾತನ್ನು ತಿರುಗಿಸಿ 'ನಿಮ್ಮನ್ನು ಯಾವಾಗಲೂ ಕಾಣುತ್ತಿರಬೇಕೆಂದು ಮನಸ್ಸು ಆಶಿಸುತ್ತಿದೆ ನೀವಿರುವುದೆಲ್ಲಿ? ನಿಮ್ಮ ಹತ್ತಿರ ಒಂದೆರಡು ತಾಸು ಕುಳಿತಾದರೂ ಮನುಷ್ಯತ್ವವೇನೆಂಬುದನ್ನು ಕಲಿಯುವೆ'

ಜಾಲಪಳು ನಾಚಿಕೊಂಡು ಹೇಳಿದಳು---ನೀನಂತೂ ನನ್ನ ಹೊಗಳಿಕೆಗೇ ಇಲ್ಲಿ ಬಂದಿರುವಂತೆ ಕಾಣುತ್ತಿದೆ. ಕಾಲೇಜಿನಲ್ಲಿ ಓದುವ ನೀನೆಲ್ಲಿ, ಹಳ್ಳಿಯ ಹೆಂಗುಸಾದ ನಾನೆಲ್ಲಿ? ನಿನ್ನ ಸಹವಾಸದಿಂದ ನಾನೇ ಮನುಷ್ಯತ್ವವನ್ನು ಕಲಿಯಬೇಕಾದೀತು. ಮನಸ್ಸು ತೋರಿದಾಗ ಇಲ್ಲಿಗೇ ಬಾ, ಇದೇ ನನ್ನ ಮನೆಯೆಂದು ತಿಳಿ.

ನಾನೆಂದೆ 'ನಿಮ್ಮ ಪತಿದೇವರು ನಿಮಗೆ ಇಷ್ಟೊಂದು ಸ್ವಾತಂತ್ರ್ಯವನ್ನು ಕೊಟ್ಟಿರುವುದನ್ನು ನೋಡುವಾಗ ಅವರು ತುಂಬಾ ವಿಚಾರವಂತರಿರಬೇಕು. ಯಾವ ಆಫೀಸಿನಲ್ಲಿ ಕೆಲಸ?'

ಜಾಲಪಾ ತನ್ನ ಉಂಗುರುಗಳನ್ನು ನೋಡುತ್ತಾ 'ಪೋಲೀಸು ಕೆಲಸಕ್ಕೆ ಉಮೇದುವಾರರಾಗಿದ್ದಾರೆ' ಎಂದಳು.

ನಾನು ಅಚ್ಚರಿಗೊಂಡು ಕೇಳಿದೆ-- ಪೋಲೀಸಿಗೆ ಸೇರಿದವರಾಗಿ ನಿಮಗೆ ಇಷ್ಟು ಸ್ವಾತಂತ್ರ್ಯ ಕೊಟ್ಟಿದ್ದಾರೆಯೆ?

ಜಾಲಪಳು ಈ ಪ್ರಶ್ನೆಗೆ ಸಿದ್ಧವಾಗಿರಲಿಲ್ಲವೆಂದು ತೋರಿತು. ಸ್ವಲ್ಪ ಗಲಿಬಿಲಿಯಿಂದ ಹೇಳಿದಳು—ಅವರು ನನಗೆ ಏನೂ ಹೇಳುವುದಿಲ್ಲ.......... ನಾನು ಅವರ ಹತ್ತಿರ ಇಲ್ಲಿಗೆ ಬರುತ್ತೇನೆಂದು ಹೇಳುವುದಿಲ್ಲ ..........ಅವರು ಮನೆಗೆ ಬರುವುದೇ ಕಡಮೆ. ಹೆಚ್ಚಾಗಿ ಪೋಲೀಸಿನವರ ಸಂಗಡವೇ ಇರುತ್ತಾರೆ.

ಹೀಗೆ ಅವಳು ಒಂದೇ ಸಲಕ್ಕೆ ಮೂರು ಉತ್ತರವನ್ನು ಕೊಟ್ಟರೂ, ತಾನು ಕೊಟ್ಟ ಯಾವ ಉತ್ತರವೂ ಕೇಳುವವರಿಗೆ ಸರಿತೋಚೀತೆಂದು ಅವಳಿಗೆ ವಿಶ್ವಾಸವಾಗಲಿಲ್ಲ ಸ್ವಲ್ಪ ಲಜ್ಜಿತಳಾದಂತೆ ಬೇರೆ ಕಡೆ ನೋಡತೊಡಗಿದಳು.

ನಾನು ಕೇಳಿದೆ—ನೀವು ನಿಮ್ಮ ಸ್ವಾಮಿಯ ಹತ್ತಿರ ಹೇಳಿ ಹೇಗಾದರೂ ನನಗೆ ಈ ಕೈದಿಗಳ ವಿರುದ್ಧ ಸಾಕ್ಷಿಹೇಳಿದ ಸಾಕ್ಷಿಗಾರನನ್ನೊಮ್ಮೆ ತೋರಿಸಿ ಕೊಡುವಿರಾ?

ರಮಾನಾಥನ ಎದೆ 'ಧಕ್ ಧಕ್' ಎನತೊಡಗಿತು.

ಜೋಹರ ಎಂದಳು—ನಾನು ಹಾಗೆ ಹೇಳಿದ ಕೂಡಲೆ ಅವಳು ನನ್ನನ್ನು ಚುಚ್ಚುವ ಕಣ್ಣಿನಿಂದ ನೋಡಿ ನೀನು ಅವರನ್ನು ಕಂಡು ಏನು ಮಾಡಬೇಕ್ಲೆ ? ಎಂದು ಕೇಳಿದಳು.

ನಾನೆಂದೆ—ನೀವು ನಾನು ಹೇಳಿದಹಾಗೆ ಹೇಳುವಿರೋ ಇಲ್ಲವೋ ಅವನ ಹತ್ತಿರ ಬೇರೇನೂ ಕೇಳುವುದಿಲ್ಲ; ಇಷ್ಟು ಮಂದಿ ನಿರ್ದೋಷಿಗಳನ್ನು ಸಿಕ್ಕಿಸಿ ಹಾಕಿ ನಿನಗೇನು ಅಂತಹ ಪರ್ವತ ದೊರೆಯಿತೆಂದು ಕೇಳುವೆ.

ಜಾಲಪಳ ಮುಖವು ಗಂಭೀರವಾಯಿತು ಅವಳೆಂದಳು; ನನ್ನ ಸ್ವಂತ ಲಾಭಕ್ಕಾಗಿ ಹೀಗೆ ಮಾಡಿದೆನೆಂದು ಹೇಳಿಯಾರು. ಲಾಭವನ್ನು ಬಿಟ್ಟು ಯಾರಿದ್ದಾರೆ ? ಅಲ್ಲದೆ ನೀವು ನನ್ನನ್ನೇ ಏಕೆ ವಿಚಾರಿಸುವುದು ? ನೂರಾರು ಮಂದಿ ಪೋಲೀಸರಿಲ್ಲವೆ ? ಅವರನ್ನು ಕೇಳಿ ಎಂದು ಹೇಳಿಯಾರು. ಹೀಗೆ ಹೇಳಿದರೆ ನೀನು ಕೇಳಿಯೂ ಏನು ಪ್ರಯೋಜನವಾದಂತಾಯಿತು?'

ನಾನೆಂದೆ—ಆದಿರಲಿ, ನಿಮ್ಮ ಪತಿದೇವರೇ ಹಾಗೆ ಸಾಕ್ಷಿ ಹೇಳಿದರೆಂದು ಮಾಡಿ. ಆಗ ನೀವೇನು ಮಾಡುತ್ತಿದ್ದಿರಿ?

ಜಾಲಪಾ—ಈ ಪ್ರಶ್ನೆಗೆ ಉತ್ತರವನ್ನು ನಿನ್ನ ಹೃದಯದಲ್ಲಿಯೇ ಅರಸ ಬಾರದೆ? ನನಗೇಕೆ ಕೇಳುತ್ತೀಯೆ?

ನಾನು ಹೇಳಿದೆ—ನಾನಾಗುತ್ತಿದ್ದರೆ ಅವರ ಮುಖಾವಲೋಕನವನ್ನೇ ಮಾಡುತ್ತಿದ್ದಿಲ್ಲ.

ಜ್ವಾಲಪಳು ಗಂಭೀರ ಆಲೋಚನೆಯ ಭಾವದಿಂದ ಹೇಳಿದಳು— ಬಹುಶಃ ನಾನು ನಿನ್ನ ಹಾಗೆಯೇ ಯೋಚಿಸುತ್ತಿದ್ದೆ .... ಅಥವಾ ಯೋಚಿ ಸುತ್ತಿರಲಿಲ್ಲ ....ಯಾವುದನ್ನೂ ಖಂಡಿತವಾಗಿ ಹೇಳಲಾರೆ ಪೋಲೀಸು ಆಫೀಸರುಗಳ ಮನೆಯಲ್ಲಿ ಹೆಂಗುಸರಿರುವುದಿಲ್ಲವೆ? ಅವರು ತಮ್ಮ ಗಂಡಂದಿ ರನ್ನು ಎಚ್ಚರಿಸುವುದಿಲ್ಲವೇಕೆ? ಅದು ಹೇಗೆ ಅವರ ಹೃದಯವು ಅವರ ಗಂಡಂ ದಿರ ಹೃದಯದಂತಾಗಿರುವುದೋ, ಅಂತೆಯೇ ನನ್ನ ಹೃದಯವು ಮಾರ್ಪಡು ತ್ತಿದ್ದರೆ ........

ಅಷ್ಟರಲ್ಲಿ ಕತ್ತಲಾಯಿತು! ಜ್ವಾಲಪಾದೇವಿ ಯೆಂದಳು—ಇನ್ನು ತಡ ವಾಯಿತು. ಮಕ್ಕಳೂ ಇದ್ದಾವೆ ಸಾಧ್ಯವಿದ್ದರೆ ನಾಳೆಬಾ. ನಿನ್ನ ಹತ್ತಿರ ಮಾತಾಡುವುದೆಂದರೆ ನನಗೆ ಬಹಳ ಆನಂದ.

ನಾನು ಹೊರಡುವಾಗ ಮತ್ತೆ ನನ್ನನ್ನು ಕರೆದು—ಅಯ್ಯೋ, ನಿನ್ನ ಹೆಸರು ಕೇಳಲೇ ಇಲ್ಲ. ನಿಮಗೆ ಅವಸರ ವಿಲ್ಲವಾದರೆ ಇನ್ನೂ ಸ್ವಲ್ಪಹೊತ್ತು ಮಾತಾಡುವ

ನನಗೆ ಬೇಕಾಗಿದ್ದುದೂ ಇದೇ. ನನ್ನ ಹೆಸರು ಜೋಹರಾ.

ರಮಾನಾಥ—ಅಂ, ನಿಜಕ್ಕೂ ಹೀಗೆಯೇ ಹೇಳಿದಿಯಾ?

ಜೋಹರಾ—ಮತ್ತೆ, ಹೇಳದೆ ಏನು? ಜ್ವಾಲಪಳಿಗೆ ಮೊದಲು ಸ್ವಲ್ಪ ಆಶ್ಚರ್ಯವಾಯಿತು ಆಮೇಲೆ ಬಂಗಾಳಿ ಮುಸಲ್ಮಾನಳಿರಬಹುದೆಂದು ಯೋಚಿಸಿದಳೆಂದು ತೋರುವುದು. ನಾವಿಬ್ಬರೂ ದಿನೇಶನ ಮನೆಗೆ ಹಾಗೆ ಬಂದೆವು. ಮನೆಯೊಳಗೆ ಬಂದಾಗ, ನೀರು, ಮಂಚ, ಚಾಪೆಗಳು—ಎಲ್ಲ ಒಂದೊಂದು ಕಡೆ ಅಸ್ತವ್ಯಸ್ತವಾಗಿ ಬಿದ್ದಿದ್ದುವು. ದುರ್ವಾಸನೆಯಿಂದ ಮೂಗು ಕಳಚಿಬಿದ್ದ ಹಾಗಾಗುತಿತ್ತು ದಿನೇಶನ ಪತ್ನಿ ಪಾತ್ರೆ ತಿಕ್ಕುತ್ತಿದ್ದಳು. ಜ್ವಾಲಪಳು ಅವಳನ್ನೆಬ್ಬಿಸಿ ಮಕ್ಕಳಿಗೆ ಊಟ ಮಾಡಿಸುವ ಹಾಗೆ ಹೇಳಿ ತಾನು ಸ್ವತಃಆ ಕೆಲಸಕ್ಕೆ ಕೂತಳು. ಅವಳ ಆ ಸ್ನೇಹಶ್ರದ್ಧೆಯನ್ನು ಕಂಡು ನನಗೂ ಸುಮ್ಮನಿರಲಾಗಲಿಲ್ಲ ಅವಳು ತಿಕ್ಕಿಟ್ಟ ಪಾತ್ರೆಗಳನ್ನು ನಾನು ತೊಳೆಯ ತೊಡಗಿದೆ ಆಗ ಜ್ವಾಲಪಳು ನೀರಿನ ಹಂಡೆಯನ್ನು ದೂರ ಸರಿಸಿ 'ನಿನಗೆ ಯಾಕೆ ಈ ಕೆಲಸ? ಹೋಗಿಲ್ಲಿಂದ. ನಿನಗೆ ನೀರು ಕೊಡುವುದಿಲ್ಲ ನನ್ನಾಣೆ, ಇಲ್ಲಿಂದೆದ್ದು ಹೋಗು. ಇಂಥ ಕೆಲಸ ನೀನು ಜೀವಮಾನವಿಡೀ ಮಾಡಿರಲಿ ಕ್ಕಿಲ್ಲ. ನಾನೆಂದೆ 'ನೀನುಕೂಡಾ ಮಾಡಿದವಳಲ್ಲ.' ಆಗ ಜ್ವಾಲಪಾ

ಎಂದಳು—ನನ್ನ ವಿಷಯ ಬೇಕೇ ನಾನು ಕೇಳಿದೆ, 'ಅದೇನು? ಹೇಳು ನೋಡುವಾ. ಮುಸುರೆ ತಿಕ್ಕುವುದಕ್ಕೆ ಕೆಲಸದವಳನ್ನು ಮಾಡಿಕೊಳ್ಳಬಾರದೆ?,

ಜಾಲಪಾ—ಅವಳಿಗೆ ಏಳೆಂಟು ರೂಪಾಯಿಕೊಡುವುದಕ್ಕೆ ಎಲ್ಲಿ ಹೋಗುವುದು?

ನಾನು—ನಾನು ಕೊಡುತ್ತೇನೆ.

ನಿಜವಾದ ಪ್ರೇಮದ ಜತೆಗೆ ನಿಜವಾದ ಉಲ್ಲಾಸವೂ ಆಶೀರ್ವಾದವೂ ತುಂಬಿದದೃಷ್ಟಿಯಿಂದ ಜಾಲಪಳು ನನ್ನನ್ನು ನೋಡಿದಳು. ಆ ದೃಷ್ಟಿ! ಅದೆಷ್ಟು ಪವಿತ್ರ ವಾಗಿತ್ತು! ಅವಳ ಈ ನಿಸ್ವಾರ್ಥಸೇವೆಯ ಇದಿರು ನನ್ನ ಜೀವನವು ಎಷ್ಟುನಿಕೃಷ್ಟವೆಂದೂ, ತಿರಸ್ಕಾರಾರ್ಹವೆಂದೂ ಆಗ ನನಗೆ ತಿಳಿಯಿತು. ಪಾತ್ರೆಯನ್ನು ತೊಳೆಯುವುದರಲ್ಲಿ ನನಗುಂಟಾದ ಆನಂದವನ್ನು ಒಣ್ಣಿಸಲ ರೆ.

ಜಾಲಪಾ ಪಾತ್ರೆ ತೊಳೆದು ಮುಗಿಸಿ ಮುದುಕಿಯ ಕಾಲೊತ್ತುವುದಕ್ಕೆ ಹಿಡಿದಳು. ಅದನ್ನೂ ಮುಗಿಸಿ ಸುಮಾರು ಒಂಬತ್ತುಗಂಟೆಯ ಮೇಲೆ ನಾವು ಅಲ್ಲಿಂದ ಹೊರಟೆವು. ದಾರಿಯಲ್ಲಿ ನಾನು ಹೇಳಿದೆ—ಜಾಲಪಾದೇವಿಯವರೇ, ನೀವು ನಿಜವಾಗಿಯೂ ದೇವಿಯೇ ಸರಿ.

ಜಾಲಪಾ— ಜೋಹರಾ, ಹಾಗೆನ್ನಬೇಡ. ನಾನು ಮಾಡುತ್ತಿರುವುದು ಸೇವೆಯಲ್ಲ, ನನ್ನ ಪಾಪಗಳ ಪ್ರಾಯಶ್ಚಿತ್ತ. ನನ್ನಂತಹ ಅಭಾಗಿನಿ ಈ ಪ್ರಪಂಚದಲ್ಲಿ ಇನ್ನಾರೂ ಇರಲಿಕ್ಕಿಲ್ಲ

ನಾನೆಂದೆ—ನೀವು ಹೇಳಿದ್ದು ಯಾವುದೂ ನನಗೆ ಅರ್ಥವಾಗಲಿಲ್ಲ

ಜಾಲಪಾ—ಎಂದಾದರೊಂದು ದಿನ ಅರ್ಥವಾಗುವುದು. ತಂಗಿ, ನನ್ನ ಪ್ರಾಯಶ್ಚಿತ್ತವು ಈ ಜನ್ಮದಲ್ಲಿ ಪೂರ್ಣವಾಗುವಂತಿಲ್ಲ.

ನಾನು—ನನಗೊಂದೂ ಅರ್ಥವಾಗುವುದಿಲ್ಲ ಎಲ್ಲವನ್ನೂ ನನಗೆ ತಿಳಿಸದ ತನಕ ನಾನು ನಿನ್ನ ಬೆನ್ನು ಬಿಡುವ ಹಾಗೆಯೂ ಇಲ್ಲ

ಜಾಲಪಾ—ನಮ್ಮ ಹೃದಯದ ಭಾರವನ್ನು ಇನ್ನೊಬ್ಬರ ಮೇಲೆ ಹೇರುವುದಕ್ಕಿಂತ, ಸ್ವತಃ ಅಡಗಿಸಿಟ್ಟುಕೊಳ್ಳುವುದು ಎಷ್ಟೋ ಸುಲಭ

ನಾನು ಆರ್ತಕಂಠದಿಂದ ಹೇಳಿದೆ—ಹಾಂ, ಹಾಂ. ಮೊದಲ ಭೆಟ್ಟಿಯಲ್ಲಿ ನಿಮಗೆ ನನ್ನ ಮೇಲೆ ವಿಶ್ವಾಸಬಾರದಿದ್ದರೂ, ಒಂದಿಲ್ಲ ಒಂದು ದಿನ ನೀವಾಗಿ ನಿಮ್ಮ ಸಮಾಚಾರ ಹೇಳದಿರುವುದಿಲ್ಲ.

ಸ್ವಲ್ಪದೂರ ನಾವಿಬ್ಬರೂ ಮೌನವಾಗಿ ನಡೆದೆವು. ಜಾಲಪಳು ಒಮ್ಮಿ ದೊಮ್ಮೆಗೆ ನಡಗುವದನಿಯಲ್ಲಿ 'ಜೋಹರಾ, ನಾನು ಯಾರೆಂಬುದು ನಿನಗೀಗ ತಿಳಿದುದೇ ಆದರೆ ನೀನು ನನ್ನ ಮೇಲೆ ತಿರಸ್ಕಾರದಿಂದ ನೋಗದಿರುಹಿ, ನನ್ನ ನೆರಳನ್ನು ಬಿಟ್ಟು ದೂರ ಓಡಿ ಹೋಗದಿರಲಾರೆ'

ಅವಳಿಂದ ಈ ನುಡಿಯಲ್ಲಿ ಎಂತಹ ಮಾಟವಿತ್ತೊ ನನಗರಿಯದು, ಒಮ್ಮೆಗೆ ನನ್ನ ರೋಮುಗಳೆಲ್ಲ ನೆಟ್ಟಗಾದವು ಕಣ್ಣಿನಲ್ಲಿ ನೀರು ಉಕ್ಕಿಬಂತು. ನನ್ನ ಛದ್ಮವೇಷವನ್ನೆಲ್ಲಾ ಅಲ್ಲಿಯೇ ಬಹಿರಂಗಪಡಿಸಿ ಬಿಡಬೇಕೆಂದೂ ಮನಸ್ಸಾಯಿತು. ಆದರೆ ಹೇಗೆ ಹೇಗೋ ಸಾವರಿಸಿಕೊಂಡೆ. ಮಾತಿಗೆ ತೊಡಕಿದಾಗ ಕುತ್ತಿಗೆ ಬಿಗಿಯುತ್ತಿತ್ತು. ಜಾಲಪಾದೇವಿಯವರೆ, ಇದು ನಿಮ್ಮ ತಪ್ಪು ಭಾವನೆ. ನಿಮ್ಮನ್ನು ತಿರಸ್ಕರಿಸುವುದಂತಿರಲಿ, ನಿಮ್ಮ ಕಾಲ ಮೇಲೆ ಬಿದ್ದು ನಮಸ್ಕರಿಸುವೆ. ತನ್ನ ಅಥವಾ ತನ್ನವರ ಕೆಟ್ಟ ಕೆಲಸಗಳಿಗಾಗಿ ನಾಚುಗೆ ಪಡುವದು ಶುದ್ಧ ಹೃದಯವುಳ್ಳವರಿಗೆ ಮಾತ್ರಸಾಧ್ಯ.

ಜಾಲಪಳೆಂದಳು—ನನ್ನ ಸ್ಥಿತಿಯನ್ನರಿತು ನಿನಗಾಗುವ ಲಾಭವೇನು? ನಾನೊಬ್ಬ ದರಿದ್ರ ಅಭಾಗಿನಿ ಹೆಂಗಸೆಂದು ತಿಳಿ

ನಾನು ಅಂಗಲಾಚಿ ಬೇಡಿಕೊಂಡಾಗ ಅವಳಿಗೆ ಹೇಳಲೇ ಬೇಕಾಗಿ ಬಂತು 'ಕೈದಿಗಳನ್ನು ಆಪತ್ತಿನಲ್ಲಿ ಸಿಲುಕಿಸಿದ ಸಾಕ್ಷಿದಾರನ ಹೆಂಡತಿಯೇ ನಾನು' ಎಂದುಹೇಳಿ ಜೋರಾಗಿ ಅತ್ತುಬಿಟ್ಟಳು. ತುಸು ಹೊತ್ತಿನ ಬಳಿಕಸ್ವರವನ್ನು ಸರಿಪಡಿಸಿಕೊಂಡು ಹೇಳಿದಳು—ನಾವು ಅಲ್ಲಹಾಬಾದಿನವರು. ಮನೆಯಲ್ಲೇನೋ ಗಡಿಬಿಡಿಯಿಂದಾಗಿ ಇವರು ಸುಮ್ಮಸುಮ್ಮಗೆ ಕಾಲಿಗೆ ಬುದ್ಧಿ ಹೇಳಿದರು. ಹಲವು ತಿಂಗಳುಗಳು ಕಳೆದ ಬಳಿಕ ಇಲ್ಲಿರುವರೆಂಬುದು ತಿಳಿಯಿತು.

ರಮಾನಾಥನೆಂದನು— ಅದು ಒಂದು ದೊಡ್ಡ ಕಥೆಯೇ ಇದೆ. ಆ ಮೇಲೆ ಹೇಳುತ್ತೇನೆ.

ಜೋಹರಾ—ನೀವು ಹೇಳುವ ಅಗತ್ಯವಿಲ್ಲ. ಜಾಲಪಳೇ ಮರುದಿನ ಎಲ್ಲಾ ಸಂಗತಿಯನ್ನು ತಿಳಿಸಿದಳು. ಕೊನೆಗೆ ಹೀಗೆಂದಳು 'ಜೋಹರಾ' ನಾನೀಗ ಉಭಯ ಸಂಕಟದಲ್ಲಿ ಬಿದ್ದಿರುವೆ. ಒಂದುಕಡೆ ಒಬ್ಬ ಮನುಷ್ಯನ ಉಳಿವೂ ಹಲವು ಪರಿವಾರಗಳ ನಾಶವೂ ಇದೆ; ಇನ್ನೊಂದು ಕಡೆ ಸ್ವತಃ ನನ್ನ

ಸರ್ವನಾಶವಿದೆ. ನಾನು ಮನಸ್ಸುಮಾಡಿದರೆ ಪ್ರಮಾಣಪೂರ್ವಕವಾಗಿ ಸಾಕ್ಷಿ ಹೇಳಿ ಇವರೆಲ್ಲರ ಪ್ರಾಣ ಉಳಿಸಬಲ್ಲೆ. ಆದರೆ ಈ ಸಾಕ್ಷಿಗಾರನನ್ನೇನು ಮಾಡಲಿ? ಇವರು ಹಾಳಾಗುವುದನ್ನು ಕಣ್ಣಾರೆ ನೋಡುವುದು ಹೇಗೆ? ಇಲ್ಲ, ಇಲ್ಲ, ನಾನು ಇವರ ಅನಿಷ್ಟಕ್ಕೆ ಕಾರಣವಾಗಲಾರೆ. ನ್ಯಾಯ ದೇವತೆಗೆ ಬಲಿ ಕೊಡಲಾರೆ. ಒಮ್ಮೊಮ್ಮೆ ಇದ್ದದ್ದನ್ನು ಇದ್ದಹಾಗೆ ಹೈಕೋರ್ಟಿನಲ್ಲಿ ಹೇಳಿ ಬಿಟ್ಟು ಕೂಡಲೇ ವಿಷತಿಂದು ಚಿಂತಾಮುಕ್ತಳಾಗಬೇಕೆಂದು ತೋರುತ್ತದೆ

ಅಷ್ಟು ಹೊತ್ತಿಗೆ ದೇವೀ ದೀನನ ಮನೆಯ ಬಾಗಿಲು ಬಂತಿತು. ಜಾಲ ಪಳು ನನ್ನನ್ನು ಮರುದಿನವೂ ಅಲ್ಲಿಗೆ ಬರಲಿಕ್ಕೆ ಆಮಂತ್ರಿಸಿದಳು. ದಿನವಿಡೀ ಚಂದಾಹಣ ಒಟ್ಟುಗೂಡಿಸುವುದರಲ್ಲೇ ಕಾಲಕಳಿಯುತ್ತಿತ್ತಂತೆ ಎಲ್ಲಿಯಾದರೂ ಸಿಕ್ಕಿದರೆ ಸಂಜೆಯ ಹೊತ್ತು ಪುರುಸೊತ್ತು ಸಿಗಬೇಕು ನಾನು ಒಮ್ಮೆ 'ಈ ಕರಕರೆಯನ್ನೆಲ್ಲಾ ಬಿಟ್ಟು ಮನೆಗೆ ಹೋಗಬಾರದೆ?' ಎಂದು ಮೆಲ್ಲಗೆ ಸೂಚಿಸಿದೆ. ಆದರೆ ಆಕೆಯ ಮುಖಭಾವದಿಂದ ಆ ಮಾತು ಅವಳಿಗೆ ಸ್ವಲ್ಪವೂ ಒಗ್ಗಲಿಲ್ಲವೆಂದು ತೋರಿತು. ಇನ್ನೊಂದು ಮಾತಿದೆ ನೀವು ಹೇಳಬೇಕೆಂದರೆ ಹೇಳುವೆ

ರಮಾ:—ಅದೇನು ಹೇಳಿಬಿಡು.

ಜೋಹರಾ:— ಡೆಪ್ಟಿ ಸಾಹೇಬರ ಹತ್ತಿರ ಜಾಲಪಳನ್ನು ಅಲ್ಲಹಾಬಾದಿಗೆ ಮುಟ್ಟಿಸಿರೆಂದು ಹೇಳೋಣ. ಅವಳಿಗೆ ಯಾವ ತೊಂದರೆಯೂ ಆಗದಂತೆ ನೋಡಿಕೊಳ್ಳಬಹುದು. ಇಬ್ಬರು ಹೆಂಗುಸರು ಅವಳನ್ನು ಮಾತಿನ ನಡುವೆ ಸ್ಟೇಶನ್ನಿನ ತನಕ ಒಯ್ದು, ಅಲ್ಲಿ ಸಿದ್ಧವಾಗಿರುವ ಗಾಡಿಯಲ್ಲಿ ಕೂಡಿಸಿದರಾಯಿತು.

ರಮಾ— ಹೀಗೆ ಮಾಡುವದು ಉಚಿತವೆ?

ಜೋಹರಾ ನಾಚಿಕೊಂಡು ಎಂದಳು:—ಉಚಿತವಲ್ಲವೇನೋ ಹೌದು. ರಮಾನಾಥನು ಬೇಗಬೇಗನೇ ಕಾಲಿಗೆ ಮೆಟ್ಟನ್ನು ಸಿಕ್ಕಿಸಿಕೊಳ್ಳುತ್ತಾ ಅವಳು ದೇವೀದೀನನ ಮನೆಯಲ್ಲೇ ಇದ್ದಾಳಲ್ಲವೆ? ಎಂದು ಕೇಳಿದನು

'ಏನು, ಈಗಲೇ ಹೊರಟಿರಾ?'

'ಹೌದು, ಜೋಹರಾ, ಈಗಲೇ ಹೋಗಬೇಕಾಗಿದೆ ಅವಳ ಹತ್ತಿರ ಎರಡು ಸ್ಪಷ್ಟ ಮಾತುಗಳನ್ನಾಡಿ, ಈ ಹೊತ್ತಿಗೆ ಬಹಳ ಹಿಂದೆಯೇ ನಾನು ಎಲ್ಲಿಗೆ ತೆರಳಬೇಕಾಗಿತ್ತೋ, ಆ ಸ್ಥಳಕ್ಕೆ ಹೋಗುವೆ.

‘ ಆದರೆ ಪರಿಣಾಮವೇನಾಗಬಹುದೆಂದು ಯೋಚಿಸಿ ನೋಡಿ ”

‘ಎಲ್ಲ ಯೋಚಿಸಿ ನೋಡಿದ್ದೇನೆ. ಅಂಥಾದ್ದಾದರೆ ನಾಲ್ಕು ವರ್ಷ ಶಿಕ್ಷೆಯಾದೀತು. ಅಷ್ಟೆ ಅಲ್ಲವೆ? ಚಿಂತಿಲ್ಲ. ಇಗೋ, ಹೊರಟೆ ಮರೆಯಬೇಡ, ಜೋಹರಾ, ಇನ್ನು ಯಾವಾಗ ಪುನರ್ಮಿಲನವೋ ತಿಳಿಯೆ.’

ಬಾಗಿಲನ್ನು ಹಾದು ಹೋಗುವಾಗ ದರವಾನನು ಕೇಳಿದನು–ಹುಜೂರ್, ದರೋಗರಿಗೆ ಹೇಳಿದ್ದೀರಾ?

ರಮಾ—ಇಲ್ಲ, ಅವರಿಗೆ ಹೇಳಬೇಕಾಗಿಲ್ಲ

ದರವಾನ—ಆದರೆ ನಮ್ಮ ಹೊಟ್ಟೆಗೆ ಕೇಡುಬರುತ್ತದಲ್ಲ ಸ್ವಾಮಿ.

ರಮಾನಾಥನು ಈ ಮಾತನ್ನು ಲಕ್ಷಿಸದೆ, ರಸ್ತೆಯನ್ನು ಸೇರಿದನು. ಜೋಹರಾ ನಿಸ್ಪಂದಳಾಗಿ ನಿಂತು ದುಃಖಪೂರಿತನೇತ್ರಗಳಿಂದ ಅವನು ಹೋಗುವುದನ್ನೇ ನೋಡುತ್ತಿದ್ದಳು ಅವನ ಮೇಲೆ ಈಗ ಉಂಟಾದಷ್ಟು ಪ್ರೇಮವು ಅವಳಿಗೆ ಹಿಂದೆಂದು ಉಂಟಾಗಿರಲಿಲ್ಲ. ವೀರಬಾಲೆಯೋರ್ವಳು ತನ್ನ ಪ್ರಿಯತಮನು ಸಮರದ ಭೂಮಿಗೆ ಅಭಿಮುಖವಾಗಿ ಹೋಗುತ್ತಿರುವುದನ್ನು ಕಂಡು ಗರ್ವಿತಳಾಗುವಂತೆ, ಜೋಹರಳ ಎದೆಯು ಹೆಮ್ಮೆಯಿಂದ ಉಬ್ಬಿತು.

ದರವಾನನು ಹಾರಿಹೋಗಿ ದರೋಗರಿಗೆ ಸೂಚನೆಯನ್ನಿತ್ತುದೇ ತಡ, ಪಾಪ, ಅವರು ಆಗಲೇ ಉಂಡು ಮಲಗಿದ್ದರಾದರೂ, ಓಡಿಯೋಡಿ ಬಂದು ರಮಾನಾಥನನ್ನು ಕೂಗತೊಡಗಿದರು— ರಮಾನಾಥ ಬಾಬೂ, ಇಲ್ಲಿ ಕೇಳಿ; ಒಂದು ನಿಮಿಷ....ಸ್ವಲ್ಪನಿಲ್ಲಿ. ನೀವು ಹೀಗೆ ಮಾಡಿದರೆ ಹೇಗೆ? ಸ್ವಲ್ಪಯೋಚಿಸಿ ...ಎಲ್ಲಿಗೆ ಹೋಗುತ್ತಿದ್ದೀರಿ? ಅದಾದರೂ ಹೇಳಿ.

ಅಷ್ಟರಲ್ಲಿ ದಾರಿಯ ಮೇಲಿನ ಕಲ್ಲೊಂದನ್ನು ಎಡವಿ ಬಿದ್ದರು. ರಮಾನಾಥನು ಅವರು ಬೀಳುವುದನ್ನು ನೋಡಿ, ಹಿಂದೆ ಬಂದು ಎಬ್ಬಿಸಿ, ಕೇಳಿದನು, ‘ಏನೂ ವಿಶೇಷ ಪೆಟ್ಟಾಗಿಲ್ಲವಷ್ಟೆ? ’

‘ಛೇ, ಛೇ! ಚಿಂತಿಲ್ಲಬಿಡಿ ನೀವು ಎಲ್ಲಿಗೆಹೊರಟದ್ದೀರಿ? ಪರಿಣಾಮವನ್ನು ಯೋಚಿಸಿನೋಡಿ.’

‘ಇನ್ನು ಒಂದು ತಾಸಿನಲ್ಲಿ ನಾನು ಪುನಃ ಇಲ್ಲಿಯೇ ಇದ್ದೇನೆ. ಬೇರೆಲ್ಲಿಗೂ ಹೋಗುವುದಿಲ್ಲ. ಜಾಲಪಳಿಗೆ ಯಾರೋ ಹೈಕೋರ್ಟಿಗೆ ಅರ್ಜಿಮಾಡುವಂತೆ ಒತ್ತಾಯಪಡಿಸಿರಬೇಕು ಅವಳನ್ನು ಹಾಗೆ ಮಾಡಕೂಡದೆಂದು ಸಮಜಾಯಿಸಿ ಬರುತ್ತೇನೆ.’

'ಇದು ನಿಮಗೆ ಹೇಗೆ ತಿಳಿಯಿತು.'

'ಜೋಹರಳಿಗೆ ಯಾರೋ ಹೇಳಿದರಂತೆ'

"ಎಂಥ ಹೆಂಗಸು ಈ ಜಾಲಪಾ! ಇಂಥವರನ್ನು ತಲೆಕಡಿದು ಹಾಕಿದರೂ ದೋಷವಿಲ್ಲ"

'ಅದಕ್ಕೋಸ್ಕರವೇ ಹೊರಟಿದ್ದೇನೆ. ಹೆಚ್ಚು ಮಾತಾಡಲು ಸಮಯವಿಲ್ಲ. ಈ ಒಂದು ರಾತ್ರಿಯುಮಟ್ಟಿಗೆ ನಿಮ್ಮ ಬಂಧನವನ್ನು ಸಡಲಿಸಿ.'

"ನಾನೂ ಬರುತ್ತೇನೆ. ನಿಲ್ಲಿ."

"ನೀವು ಬಂದರೆ ಕೆಲಸ ಕೆಟ್ಟೇಹೋಗುವುದು. ಈಗ ಬಂದೆ."

ದರೋಗರು ನಿರುತ್ತರರಾದರು. ರಮಾನಾಥನು ಒಂದು ಟಾಂಗಾ ಮಾಡಿಕೊಂಡು ದೇವೀದೀನನ ಮನೆಗೆ ಹೋದನು.

ಜಾಲಪಾ ದಿನೇಶನ ಮನೆಯಿಂದ ಆಗಲೇ ಬಂದಿದ್ದಳು ಮೂವರೂ ಮೇಲಿನ ಕೊಠಡಿಯಲ್ಲಿ ಮಾತಾಡುತ್ತಿದ್ದರು. ರಮಾನಾಥನು ಕೆಳಗಿಂದ ಕರೆದನು. ದೇವೀದೀನನಿಗೆ ಧ್ವನಿಯು ಪರಿಚಯುವಾಯಿತು 'ರಮಾನಾಥ ನಿರಬೇಕು.' ಎಂದು ಹೇಳಿ ಕೆಳಗೆ ಹೋಗಲನುವಾದನು. ಜಾಲಪಾ ಎಂದಳು—ಇಲ್ಲಿಗೆ ಯಾಕೆ ಬಂದಿರುವರೆಂದು ಕೇಳಿ ಅಲ್ಲಿಂದಲ್ಲಿಗೇ ಕಳಿಸಿ ಬಿಡುವ.

ದೇವೀ—ಹಾಗೆ ಮಾಡಬಾರದಮ್ಮಾ ನೋಡುವಾ. ಅವನನ್ನು ಹೇಗೆ ಬಿಟ್ಟರೆಂದು ಕೇಳಿಬರುತ್ತೇನೆ.

ಜಾಲಪಾ—ನನ್ನನ್ನು ಸಮಜಾಯಿಸುವುದಕ್ಕೆ ಬಂದಿರಬಹುದು. ಮುಖದ ಮಸಿಯನ್ನೆಲ್ಲಾ ತೊಳೆದುಕೊಂಡು ಬರಲಿ!

ದೇವೀದೀನನು ಕೆಳಗೆ ಹೋಗಿ ಬಾಗಿಲು ತೆರೆದನು ರಮಾನಾಥನು ಒಳಗೆ ಕಾಲಿರಿಸಿ 'ತಂದೆ, ನನ್ನನ್ನು ನೋಡಿ ನಿಮಗೆಲ್ಲ ಆಶ್ಚರ್ಯವಲ್ಲವೆ? ಒಂದು ತಾಸಿನ ಪುರಸೊತ್ತಿನಲ್ಲಿ ಬಂದಿದ್ದೇನೆ. ನಿಮ್ಮ ಹತ್ತಿರ ನನ್ನ ಅಪರಾಧಗಳ ಕ್ಷಮೆ ಬೇಡಲೆಂದು ಬಂದಿರುವೆ. ಜಾಲಪಾ ಎಲ್ಲಿದ್ದಾಳೆ?

ದೇವೀ—ಮೇಲೆ ಇದ್ದಾಳೆ. ಕೂತುಕೋ. ಏನಾದರೂ ತಿನ್ನಲಿಕ್ಕೆ ತರಲಿ?

ರಮಾ—ಬೇಡ, ಬೇಡ. ಊಟವಾಗಿದೆ. ಯಾವುದಕ್ಕೂ ಜಾಲಪಳ ಹತ್ತಿರ ಎರಡು ಮಾತಾಡಿ ಬರುತ್ತೇನೆ.

ದೇವಿ—ಅವಳು ಹಾಗೆಲ್ಲ ಕೇಳುವ ಹೆಂಗುಸಲ್ಲ ಮಗೂ. ನಿನ್ನನ್ನು ಹಂಗಿಸಿ ಸಾಚುಗೆಗೀಡು ಮಾಡಿಯಾಳು.

ರಮಾ—ನನ್ನ ಹತ್ತಿರ ಎರಡು ಮಾತುಗಳನ್ನಾಡುವುದಕ್ಕೂ ಆಕ್ಷೇಪ ವಿದೆಯೆ? ಅಥವಾ ನನ್ನ ಮುಖನೋಡುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದಾಳೆಯೆ?

ದೇವಿ—ಇದರಲ್ಲಿ ಕೇಳುವುದೇನಿದೆ, ಮಗೂ. ಹೋಗು ಮೇಲಿನ ಕೊಠಡಿಯಲ್ಲಿದ್ದಾಳೆ. ಈ ಮನೆ ನಿನ್ನ ಅಂದಿನ ಮನೆಯೇ ಎಂಬುದನ್ನು ತಿಳಿ.

ರಮಾ—ಹಾಗಲ್ಲ ತಂದೆ, ಅವಳನ್ನು ಕೇಳಿ ಬಾ.

ದೇವೀದೀನನು ಮೇಲೆ ಹೋಗಿ ಮಗಳೇ, ನಿನ್ನ ಹತ್ತಿರ ಏನೊ ಮಾತಾಡಲಿಕ್ಕಿದೆಯಂತೆ.' ಎಂದು ಹೇಳಿದನು.

ಜಾಲಪಳೆಂದಳು—ಅದೇನೆಂದು ಹೇಳಬಾರದೆ? ನಾನೇನೂ ಇವರ ನಾಲಿಗೆಯನ್ನು ಬಿಗಿ ಹಿಡಿದಿಲ್ಲ ಹೇಳಲಿ.

ಜಾಲಪಳು ಗಟ್ಟಿಯಾಗಿ ಹೇಳಿದ ಈ ಮಾತು ಕೆಳಗೆ ನಿಂತಿದ್ದ ರಮಾನಾಥನಿಗೂ ಕೇಳಿಸಿತು. ಅವಳ ನಿರ್ಮಮತೆಯ ತೀವ್ರತೆಯನ್ನು ಕಂಡು ಅವನ ಎಲ್ಲಮಿಲನಲಾಲಸೆಯೂ ಇಂಗಿ ಹೋಯಿತು ಕೆಳಗೆ ನಿಂತುಕೊಂಡೇ ಹೇಳಿದನು— ಅವಳಿಗೆ ನನ್ನ ಹತ್ತಿರ ಮಾತಾಡುವುದಕ್ಕೆ ಇಷ್ಟವಿಲ್ಲವಾದರೆ ನನ್ನದೇನೂ ಒತ್ತಾಯವಿಲ್ಲ ಜಡ್ಜರ ಹತ್ತಿರ ನಡೆದ ಸಂಗತಿಯನ್ನೆಲ್ಲ ಬಿಚ್ಚಿ ಹೇಳಬೇಕೆಂದು ನಿರ್ಧರಿಸಿದ್ದೇನೆ. ಅದಕ್ಕೋಸ್ಕರವೇ ಹೊರಟಿರುವುದು ನನ್ನ ದೆಸೆಯಿಂದಾಗಿ ಅವಳಿಗೆ ಅನೇಕ ಕಷ್ಟಗಳನ್ನು ಸಹಿಸಬೇಕಾತಲ್ಲಾ ಎಂದು ದುಃಖಿಸುತ್ತಿದ್ದೇನೆ. ಆ ವಿಷನಿಮಿಷದಲ್ಲಿ ನನ್ನ ಬುದ್ಧಿಯು ಮೇಲೆ ತೆರೆ ಬಿದ್ದಿತ್ತು. ಸ್ವಾರ್ಥ ನನ್ನನ್ನು ಕುರುಡಗೊಳಿಸಿತ್ತು. ಪ್ರಾಣ ಮೋಹವೂ, ಕಷ್ಟಗಳ ಭಯವೂ ನನ್ನ ಬುದ್ಧಿಯನ್ನು ಅಪಹರಿಸಿದ್ದುವು. ಯಾವುದೋ ಗ್ರಹವೊಂದು ನನ್ನ ಮೇಲೆ ವಕ್ರದೃಷ್ಟಿಯನ್ನು ಬೀರಿರಬೇಕು. ಆದರೆ ಈಕೆಯ ಅನುಷ್ಠಾನಗಳಿಂದ ಆ ಗ್ರಹವು ಶಾಂತವಾಗಿದೆ. ನನಗೆ ಮೂರು ನಾಲ್ಕು ವರ್ಷ ಸರಕಾರದ ಆತಿಥ್ಯದಲ್ಲಿರಬೇಕಾಗಿ ಬಂದೀತು ಆದಕ್ಕೇನೂ ನಾನು ಬೆದರುವುದಿಲ್ಲ.

ಜೀವದಿಂದ ಮರಳಿದರೆ ಮತ್ತೆ ಭೆಟ್ಟಿಯಾಗುವುದು. ನನ್ನ ದೋಷಗಳೇನಿದ್ದರೂ ಅವೆಲ್ಲವನ್ನು ಕ್ಷಮಿಸಿ ಮರೆತುಬಿಡಬೇಕು. ನನಗೆ ಆಶ್ರಯದಾತರಾದ ತಂದೆ ತಾಯಿಗಳೇ, ನೀವು ಕೂಡಾ ನನ್ನ ಅಪರಾಧಗಳನ್ನು ಕ್ಷಮಿಸಬೇಕು. ಜೀವದಿಂದ ಹಿಂತಿರುಗಿದರೆ ನಿಮ್ಮ ಸೇವೆಮಾಡಿ ಋಣ ತೀರಿಸುವೆ. ನೀವು ನನಗೆ ಮಾಡಿದ ಉಪಕಾರವನ್ನು ಸಾಯುವ ತನಕ ಮರೆಯಲಾರೆ. ಹೇಗೂ ನನ್ನ ಬಾಳುವೆಯು ಹಾಳಾಯಿತು. ಅತ್ತ ಧರ್ಮವೂ ಇಲ್ಲ. ಇತ್ತ ಸಂಸಾರವೂ ಇಲ್ಲ. ಅವಳ ಆಭರಣಗಳನ್ನು ಕಳವು ಮಾಡಿದ ಕಳ್ಳನು ನಾನೇ ಎಂಬದನ್ನು ಆಕೆಗೆ ತಿಳಿಸು. ಸರಾಫನ ಹಣವನ್ನು ಸಲ್ಲಿಸುವ ಸಲುವಾಗಿ ಆ ಕುಕರ್ಮಕ್ಕೆ ಕೈಯಿಕ್ಕಬೇಕಾಯಿತು. ಅದರ ಫಲವನ್ನು ಇಂದಿನ ವರೆಗೂ ಭೋಗಿಸುತ್ತಿರುವೆ; ಪ್ರಾಣ ಹೋಗುವವರೆಗೆ ಭೋಗಿಸುತ್ತಲೇ ಇರುವೆ. ತಂದೆ, ನಿನಗೂ ನಾನು ಬ್ರಾಹ್ಮಣನೆಂದು ಹೇಳಿ ಮೋಸ ಮಾಡಿರುವೆ. ನಾನು ಬ್ರಾಹ್ಮಣನಲ್ಲ, ಕಾಯಸ್ಥನು. ನಿನ್ನಂತಹ ದೇವತೆಯೊಡನೆಯೂ ನಾನು ಕಪಟದಿಂದ ವರ್ತಿಸಿದೆ. ಎಲ್ಲ ಅಪರಾಧಗಳನ್ನೂ ಕ್ಷಮಿಸಬೇಕು. ಇಷ್ಟೇ ನನ್ನ ಹೇಳಿಕೆ.

ಹೀಗೆಂದವನೇ ಬೇಗ ಬೇಗನೆ ಕಾಲು ಹಾಕುತ್ತ ಬಾಗಿಲ ಹೊರಗೆ ನಡೆದುಬಿಟ್ಟನು. ಜಾಲಪಳು ದಡದಡನೆ ಕೆಳಗೆ ಬಂದು ನೋಡುವಾಗ ಅಲ್ಲಿ ರಮಾನಾಥನಿಲ್ಲ! ದೇವೀದೀನನ ಹತ್ತಿರ 'ಎತ್ತ ಹೋದರು? ತಂದೆ' ಎಂದು ಕೇಳಿದಳು. ಅವನು 'ನಾನರಿಯೆ ಮಗಳೇ, ಅವನ ಮಾತುಗಳನ್ನು ಕೇಳುತ್ತ ನನಗೆ ಕಂಬನಿ ತುಂಬಿ ಬಂದಿತ್ತು. ಇನ್ನು ಅವನು ನಮಗೆ ಸಿಗಲಾರನಮ್ಮಾ"

ಜಾಲಪಳು ಕೆಲವು ಕ್ಷಣಗಳ ತನಕ ರಸ್ತೆಯ ಬಳಿ ಕಾಲುದಾರಿಯ ಮೇಲೆ ನಿಸ್ಪಂದಳಾಗಿ ನಿಂತಿದ್ದಳು. 'ಅವರನ್ನು ಹೇಗೆ ತಡೆದು ನಿಲ್ಲಿಸಲಿ? ಈಗವರು ಎಷ್ಟು ದುಃಖಿತರಾಗಿದ್ದಿರಬಹುದು? ಅವರನ್ನೇಕೆ ಕರೆಯಿಸಿಕೊಳ್ಳದೆ ಹೋದೆ? ಭವಿಷ್ಯವನ್ನು ಬಲ್ಲರಾರು? ಇನ್ನೆಂದು ಮಿಲನವೊ! ಎಂದು ಮನಸ್ಸಿನಲ್ಲಿ ಹೊಯ್ದಾಡಿದಳು. ವಿವಾಹಿತ ಜೀವನದ ಎರಡು ಎರಡೂವರೆ ವರುಷಗಳಲ್ಲಿ ಹಿಂದೆಂದೂ ಆಕೆಯ ಹೃದಯವು ಈ ತೆರನಾಗಿ, ಇಷ್ಟು ಆಳವಾಗಿ ಅನುರಾಗದಿಂದ ಮಿಡಿದುದಿಲ್ಲ. ವಿಲಾಸಿನಿಯ ರೂಪದಲ್ಲಿ ಅವಳು ಕಂಡುದು ಪ್ರೇಮದ ಆವರಣವನ್ನು ಮಾತ್ರ. ತ್ಯಾಗಿನಿಯಾದ ಅವಳಿಗಿಂದು ಪ್ರೇಮದ ನಿಜರೂಪವು ಗೋಚರವಾಯಿತು. ಅದೆಷ್ಟು ಮನೋಹರ, ವಿಶುದ್ಧ, ವಿಶಾಲ, ಶೋಭೋಮಯ ದರ್ಶನ! ವಿಲಾಸಿನಿಯು ಪ್ರೇಮೋದ್ಯಾನದ ಗೋಡೆಗಳನ್ನು

ಕಂಡೇ ಸಂತುಷ್ಟಳಾಗಿದ್ದಳು. ತ್ಯಾಗಿನಿಯು ರೂಪದಲ್ಲಿ ಅವಳು ಉದ್ಯಾನದ ಒಳಭಾಗವನ್ನು ತಲುಪಿದ್ದಳು. ಎಂತಹ ರಮ್ಯ ಧೃಶ್ಯವದು! ಅಯಯ ಸುಗಂಧ ವೇನು, ವೈಚಿತ್ರ್ಯವೇನು, ವಿಕಾಸವೇನು! ಪ್ರೇಮವು ತನ್ನ ಉಚ್ಚತಮಸ್ಥಾನಕ್ಕೆ ತಲುಪಿ ದೇವತ್ವದೊಡನೆ ಒಂದುಗೂಡಿತ್ತು. ಜಾಲಪಳ ಮನಸ್ಸಿನಲ್ಲಿ ಈಗ ಯಾವಚಿಂತೆಯೂ ಇಲ್ಲ, ಯಾವಸಂದೇಹವೂಇಲ್ಲ ಈ ಪ್ರೇಮವನ್ನು ಪಡೆದ ಬಳಿಕ ಅವಳು ಜನ್ಮಜನ್ಮಾಂತರಗಳ ವರೆಗೂ ಸೌಭಾಗ್ಯವತಿಯಾಗಿಯೇ ಉಳಿಯುವಳು; ಇದ ಅವಳನ್ನು ವಿಯೋಗ ಪರಿಸ್ಥಿತಿ ಮತ್ತು ಮೃತ್ಯುಗಳ ಭಯದಿಂದ ಮುಕ್ತವಾಗಿಸಿತ್ತು. ಇಂತಹ ಪ್ರೇಮದ ಇದಿರು ಇಡಿ ಪ್ರಪಂಚವೂ, ಅದರ ಅಖಂಡ ವೈಭವವೂ ತುಚ್ಛವೇಸರಿ

ಅಷ್ಟು ಹೊತ್ತಿಗೆ ಜೋಹರಾ ಬಂದು ಜಾಲಪಳನ್ನು ಮಹಡಿಯ ಮೇಲೆ ಕರೆದುಕೊಂಡು ಹೋದಳು.

(೪೫)

ದರೋಗರಿಗೆಲ್ಲಿಯ ವಿಶ್ರಾಂತಿ? ರಮಾನಾಥನು ಹೋದಬಳಿಕ ಒಂದು ತಾಸು ಅವನನ್ನು ಕಾಯುತ್ತಿದ್ದು ಆ ಮೇಲೆ ದೇವೀದೀನನ ಮನೆಯ ದಾರಿ ಹಿಡಿದನು. ಅಲ್ಲಿ ರಮಾನಾಥನು ಅರ್ಧಗಂಟೆಯ ಮೊದಲೇ ಅಲ್ಲಿಂದ ಹೋಗಿದ್ದನೆಂದು ತಿಳಿಯಿತು. ಕೂಡಲೆ ಠಾಣೆಯಲ್ಲಿ ಬಂದು ವಿಚಾರಿಸಿದರು ಅಲ್ಲಿ ಅವನ ಪತ್ತೆಯಿಲ್ಲ ದೇವೀದೀನನು ಎಲ್ಲೋ ಅವನನ್ನು ಅಡಗಿಸಿ ತನ್ನ ಹತ್ತಿರ ಸುಳ್ಳು ಹೇಳಿದನೆಂದು ಅವರಿಗೆ ಥಕ್ಕನೆ ಹೊಳೆದುದರಿಂದ ಮೋಟರ ಸೈಕಲ್ಲಿನ ಮೇಲಿಂದ ಅಲ್ಲಿಗೆ ಮರಳಿ ಧಾವಿಸಿದರು. ದೇವೀದೀನನು ಅವರ ಗದರಿಕೆಗೆ ಬೆದರದೆಎಂದನು—ನಿಮಗೆ ನನ್ನ ಮಾತಿನ ಮೇಲೆ ವಿಶ್ವಾಸ ಬರುವ ದಿಲ್ಲವಾದರೆ, ಮನೆಯನ್ನು ತಲಾಸು ಮಾಡಿರಿ ನನ್ನದೇನೂ ಅಡ್ಡಿಯಿಲ್ಲ

ದರೋಗ:— ಎಲ್ಲಿ ಹೋದರೆಂದು ಹೇಳಬಾರದೆ?

ದೇವೀ:— ನನಗೆ ಗೊತ್ತಿದ್ದರಲ್ಲವೆ ನಿಮಗೆ ಹೇಳುವದು ಇಲ್ಲಿ ಬಂದು ಮನೆಯಾಕಿಯ ಹತ್ತಿರ ಜಗಳ ಮಾಡಿ ಹೋದನು.

ದರೋಗ:— ಜಾಲಪಾದೇವಿ ಅಲ್ಲಹಾಬಾದಿಗೆ ಯಾವಾಗ ಹೊರಡುತ್ತಾರೆ?

ದೇವೀ:— ಯಾಕೆ? ಆ ವಿಷಯ ರಮಾನಾಥ ಏನೂ ಹೇಳಿದ ಹಾಗೆ ತೋರಲಿಲ್ಲ. ಹೈಕೋರ್ಟಿನ ನಿರ್ಣಯ ಮುಗಿಯದೆ ಅವಳಿಲ್ಲಿಂದ ಹೋಗುವುದಿಲ್ಲ.

ದರೋಗ:— ನಿನ್ನ ಮಾತನ್ನು ನಾನು ನಂಬಲಾರೆ.

ಹೀಗೆ ಹೇಳುತ್ತಾ ದರೋಗರು ಕೆಳಗಿನ ಕೊಠಡಿಯಲ್ಲಿ ಪರೀಕ್ಷಾದೃಷ್ಟಿಯಿಂದ ಚನ್ನಾಗಿ ನೋಡಿ. ಮೇಲೆ ಹೋದರು. ಅಲ್ಲಿ ಮೂವರು ಹೆಂಗಸರು ಕುಳಿತಿರುವದನ್ನು ನೋಡಿ ಬೆಚ್ಚಿಬಿದ್ದರು. ಜೋಹರಳಿಗೆ ವಿನೋದದ ಮರುಳು ಹಿಡಿಯಿತು. ಸೆರಗನ್ನು ಮುಖದ ಮೇಲೆ ಎಳೆದುಕೊಂಡು ಬೇಗ ಬೇಗನೆ ಕೈಯನ್ನು ಸೀರೆಯೊಳಗೆ ಬಚ್ಚಿಡುವಂತೆ ನಟಿಸಿದಳು. ದರೋಗರಿಗೆ ರಮಾನಾಥನು ವೇಷ ಬದಲಿಸಿ ಕೂತಿರಬೇಕೆಂದು ಸಂಶಯವಾಯಿತು.

ದೇವೀದೀನನ ಹತ್ತಿರ ಕೇಳಿದರುಃ— ಈ ಮೂರನೆಯ ಹೆಂಗಸು ಯಾರು?

ದೇವೀ:— ಯಾರೆಂಬುದು ಗೊತ್ತಿಲ್ಲ. ಜಾಲಪಳ ಹತ್ತಿರ ಆಗಾಗ ಬರುತ್ತಿರುತ್ತಾಳೆ.

ದರೋಗ:— ಯಾಕೆ, ನನ್ನ ಹತ್ತಿರವೂ ನಿನ್ನ ಕಪಟ ಬುದ್ಧಿಯನ್ನು ತೋರಿಸುತ್ತೀಯಾ? ಇವರಲ್ಲಿ ಜಾಲಪಾದೇವಿಯನ್ನು ಕೆಳಗೆ ಹೋಗುವಂತೆ ಹೇಳು. ಇನ್ನೊಬ್ಬಳು ಇಲ್ಲೇ ಇರಲಿ.

ಜಾಲಪಾ ದೂರ ಸರಿದು ನಿಂತ ಬಳಿಕ ದರೋಗರು ಜೋಹರಳ ಹತ್ತಿರ ಹೋಗಿ, 'ಅರೇ, ರಮಾನಾಥ ಬಾಬೂ, ನನ್ನ ಹತ್ತಿರವೂ ನಿಮ್ಮ ವರಸೆಗಳನ್ನು ತೆಗೆಯುವುದೆ? ಇನ್ನು ಈ ವೇಷ ಸಾಕು ನನ್ನ ಜತೆಯಲ್ಲಿ ಹೊರಡಿ. ಹೂಂ, ತಡವಾಗುತ್ತದೆ.' ಎಂದು ಹೇಳಿ ಆಕೆಯ ಮುಸುಕನ್ನು ಎತ್ತಿ ತೆಗೆದರು. ಜೋಹರಾ ಗಟ್ಟಿಯಾಗಿ ನಕ್ಕು ಬಿಟ್ಟಳು ದರೋಗರು ವಿಸ್ಮಯಸಾಗರಕ್ಕೆ ಜಾರಿ ಬಿದ್ದಂತಾಯಿತು. 'ಎಲಾ ಜೋಹರಾ, ನೀನೇನು? ಇದೇಕೆ ಇಲ್ಲಿಗೆ ಬಂದೆ?' ಎಂದು ಕೇಳಿದಾಗ ಅವಳು 'ಮತ್ತೇನಿಲ್ಲ ಗಸ್ತು ಹೊಡೆಯುತ್ತಿದ್ದೇನೆ.' ಎಂದಳು.

'ರಮಾನಾಥ ಬಾಬುಗಳೆಲ್ಲಿ ಹೋದರೆಂದು ನಿನಗೆ ಗೊತ್ತಿರಲಿಕ್ಕೆಬೇಕು

'ಅವರು ನಾನಿಲ್ಲಿ ಬರುವದಕ್ಕೆ ಮೊದಲೇ ಹೋಗಿದ್ದರು'

'ಅದೇನೇ ಇರಲಿ. ಅವರನ್ನು ಹುಡುಕಬೇಕು. ನನ್ನ ಸಂಗಡ ಬಾ.'

'ಜೋಹರಾ ಕೃತ್ರಿಮ ಕುತೂಹಲವನ್ನು ತೋರಿಸುತ್ತ 'ಏನು ಬಂಗಲೆಗೆ ಇನ್ನೂ ಹಿಂದಿಲ್ಲವೆ?' ಎಂದು ಕೇಳಿದಳು. ದರೋಗರು ಇಲ್ಲವೆಂದು ತಲೆಯ ಲ್ಲಾಡಿಸಿದರು.

ದಾರಿಯಲ್ಲಿ ದರೋಗರು ಕೇಳಿದರು—ಜಾಲಪಾದೇವಿಯವರು ಇಲ್ಲಿಂದ ಯಾವಾಗ ಹೊರಡುತ್ತಾರೆ?

'ಅವರಿನ್ನು ಇಲ್ಲಿಂದ ಹೊರಡಬೇಕೆಂದಿಲ್ಲ ರಮಾನಾಥಬಾಬುಗಳ ಬಿದಂಕೆಗೆ ಗದರ ತಣ್ಣಗಾಗಿದ್ದಾರೆ'

'ಹಾಗಾದರೆ ಇವರು ಇನ್ನೇನೂ ತುಂಟತನಕ್ಕೆ ಕೈ ಹಾಕಲಾರರಲ್ಲವೆ?'

"ನನಗೇನೋ ಹಾಗೆ ಅನಿಸುತ್ತಿದೆ."

"ರಮಾನಾಥ ಬಾಬುವೆಲ್ಲಿ?"

"ಎಲ್ಲೋ ತಿಳಿಯದು"

"ಇನ್ನು ರಿಪೋರ್ಟ ಮಾಡುವುದೊಂದುಳಿಯಿತು ಇನ್‌ಸ್ಪೆಕ್ಟರರಿಗೂ ಡಿಪ್ಟಿಯವರಿಗೂ ಸೂಚನೆ ಕೊಡಬೇಕು. ಬಹಳ ಹೆಚ್ಚು ಕುಡಿದಿದ್ದರೆ?"

"ನೋಡುವಾಗ ಬಹಳ ಕುಡಿದವರಂತೆ ಕಾಣುತ್ತಿತ್ತು."

"ಹಾಗೇನು? ಎಲ್ಲಾದರೂ ಚರಂಡಿಯಲ್ಲಿ ಬಿದ್ದಿರಬಹುದು ಏನು ಉಪದ್ರವ! ನಿನ್ನನ್ನು ಮನೆ ತನಕ ಮುಟ್ಟಿಸಲೆ."

"ಬಹಳ ಉಪಕಾರ ಮಾಡೀತು"

ದರೋಗರು ಜೋಹರಳನ್ನು ಕುಳ್ಳಿರಿಸಿಕೊಂಡು ಅವಳ ಮನೆಗೆ ಮುಟ್ಟಿಸಿದರು. ಆದರೆ ಅಷ್ಟರಲ್ಲಿ ಮನಸ್ಸು ಚಂಚಲವಾಯಿತು.

"ಜೋಹರಾ, ಇನ್ನು ಇಲ್ಲಿಂದ ಹೋಗುವುದೆಂದರೆ ಮನಸ್ಸೇಬರುವು ದಿಲ್ಲ. ನಡಿ, ಈ ಹೊತ್ತಾದರೂ ನಿನ್ನ ಹತ್ತಿರ ಎರಡು ಹರಟೆ ಹೊಡೆಯುವೆ. ನಿನ್ನ ಕೃಪಾದೃಷ್ಟಿ ಬೀಳದೆ ಎಷ್ಟೋ ದಿನಗಳಾದುವು."

"ಮೊದಲು ಇನ್ಸ್‌ಪೆಕ್ಟರ್ ಸಾಹೇಬರಿಗೆ ತಿಳಿಸಿ ಬನ್ನಿ. ಇದು ಹರಟೆಗೆ ಸಮಯವಲ್ಲ."

"ಇಲ್ಲ ಜೋಹರಾ, ನಾಳೆ ಬೆಳಗ್ಗೆ ನೋಡಿಕೊಳ್ಳಬಹುದು"

"ನಾನು ಹೇಳಿದ ಹಾಗೆ ಕೇಳಿ. ಡಿಪ್ಟಿಯವರು ಇವೊತ್ತು ಇಲ್ಲಿಗೆ ಬರುತ್ತೇನೆಂದು ಹೇಳಿ ಕಳುಹಿದ್ದಾರೆ. ಈಗಲೇ ಬಂದರೂ ಬರಬಹುದು."

"ಏನು, ನನ್ನ ಕಣ್ಣಿಗೆ ಧೂಳಿಸೆಯುವುದೇ, ಜೋಹರಾ? ಇಲ್ಲಿ ನೋಡು, ಇಷ್ಟೊಂದು ವಿಶ್ವಾಸಹೀನತೆ ಯೋಗ್ಯವಲ್ಲ"

ಜೋಹರಾ ಮಹಡಿಯ ಮೇಲೆ ಹೋಗಿ ಕದವಿಕ್ಕಿಕೊಂಡು ಆ ಮೇಲೆ ಕಿಡಿಕಿಯೊಳಗಿಂದ ತಲೆಯನ್ನು ಹೊರಹಾಕಿ ದರೋಗರನ್ನು ನೋಡಿ 'ಆದಾಬ್ ಅರ್ಜ್' ಎಂದಳು.

ದರೋಗರು ಮನೆಗೆ ಹೋಗಿ ಮಲಗಿದವರು ಎದ್ದಾಗ ಬೆಳಗ್ಗೆ ಎಂಟು ಗಂಟೆ ಹೊತ್ತಾಗಿತ್ತು. ಕಣ್ಣು ಹಿಸುಕುತ್ತಿದ್ದಾಗಲೇ ಟೆಲಿಫೋನಿನ ಗಂಟೆ ಬಾರಿಸಿತು. ಡಿಪ್ಟಿಸಾಹೇಬರು ಮಾತಾಡುತ್ತಿದ್ದರು— ಈ ರಮಾನಾಥನ ದೆಸೆಯಿಂದ ಎಲ್ಲಾ ಹಾಳಾಯಿತು. ಅವನನ್ನು ಬೇರೆ ಕಡೆ ಇಡಬೇಕಾಗಿರುವುದರಿಂದ ಅವನ ಎಲ್ಲಾ ಸಾಮಾನನ್ನು ಕಮಿಶನರ್ ಸಾಹೇಬರ ಕಡೆಗೆ ಕಳಿಸಬೇಕು. ರಾತ್ರಿ ರಮಾನಾಥ ಬಂಗಲೆಯಲ್ಲಿದ್ದನೆ?

ದರೋಗ—ರಾತ್ರಿ ನನ್ನ ಹತ್ತಿರ ನೆವಹೇಳಿ ತನ್ನ ಮನೆಯವರ ಕಡೆ ಹೋಗಿದ್ದನು.

ಟೆಲಿಫೋನ್—ಅವರನ್ನು ಹೋಗಲಿಕ್ಕೆ ಬಿಟ್ಟದು ತಪ್ಪಾಯಿತು. ಜಡ್ಜರ ಹತ್ತಿರ ಎಲ್ಲಾ ಹೇಳಿರಬೇಕೆಂದು ನನಗೆ ಸಂದೇಹವಾಗುತ್ತಿದೆ. ನೀವು ದೊಡ್ಡ 'ಬ್ಲಂಡರ್' ಮಾಡಿದಿರಿ ಅವನನ್ನು ಜಬರ್ದಸ್ತಿ ನಿಲ್ಲಿಸಬೇಕಾಗಿತ್ತು.

ದರೋಗ—ಏನು, ಅವನು ಜಡ್ಜರಲ್ಲಿಗೆ ಹೋಗಿದ್ದನೆ?

ಟೆಲಿಫೋನ್—ಹೌದು. ಜಡ್ಜರು ಕಾನೂನು ಮುರಿದು ಇನ್ನೊಮ್ಮೆ ಮೊಕದ್ದಮೆ ನಡೆಯಿಸುವವರಿದ್ದಾರೆ. ರಮಾನಾಥನು ತನ್ನ ಹೇಳಿಕೆ ಬದಲಿಸುವನೆಂಬುದರಲ್ಲಿ ಸಂದೇಹವೇ ಇಲ್ಲ.

ಮರಳಿ ವಿಚಾರಣೆ ಆರಂಭವಾಯಿತು. ಇದೊಂದು ಸರ್ವಥಾ ಅಭೂತಪೂರ್ವಘಟನೆ. ಹಿಂದೆಂದೂ ಹೀಗಾಗಿರಲಿಲ್ಲ ಪೋಲೀಸ ಕಮಿಶನರು

ಎಷ್ಟುಪ್ರಯತ್ನ ಮಾಡಿದರೂ ಜಡ್ಜರು ಸುಳ್ಳು ಪ್ರಮಾಣದ ಮೇಲಿಂದ ಹದಿನೈದು ಆತ್ಮಗಳನ್ನು ಕೊಲ್ಲುವ ಹೊಣೆಯನ್ನು ಹೊರುವುದಕ್ಕೆ ಒಪ್ಪಲಿಲ್ಲ

ಇತ್ತ ರಮಾನಾಥನನ್ನು ಹುಡುಕುವ ಕೆಲಸ ಭರದಿಂದ ಸಾಗಿತ್ತು. ಆದರೆ ಅವನೇನೂ ಸಿಗಲಿಲ್ಲ ಸಮಾಚಾರ ಪತ್ರಗಳಲ್ಲಿ ದಿನಾಲೂ ಈ ಮೊಕದ್ದಮೆ ವಿಷಯ ವಿಮರ್ಶೆ—ಪ್ರತಿವಿಮರ್ಶೆಗಳು ಹೊರಡುತ್ತಿದ್ದವು ಒಬ್ಬ ಪತ್ರಕಾರನು ಜಾಲಪಳನ್ನು ಭೆಟ್ಟಿಯಾಗಿ ಅವಳ ಹೇಳಿಕೆಯನ್ನು ಛಾಪಿಸಿದನು ಇನ್ನೊಬ್ಬನು ಜೋಹರಳ ಹೇಳಿಕೆಯನ್ನು ಪ್ರಕಾಶಿಸಿದನು. ಪೋಲೀಸರಿಗೆ ಈ ಹೇಳಿಕೆಗಳನ್ನೆಲ್ಲ ಕಂಡು ಎದೆಗೆ ಶೂಲವಿರಿದಂತಾಯಿತು. ಜೋಹರಾ ಮತ್ತು ಜಾಲಪ ಇವರಿಬ್ಬರು ಕೆಲದಿನಗಳ ಮಟ್ಟಿಗೆ ಎಲ್ಲೋ ಹೋಗಿ ಅಡಗಿರದಿದ್ದರೆ ಪೋಲೀಸರು ಅವರಿಗೆ ಬುದ್ಧಿ ಕಲಿಸದಿರುತ್ತಿದ್ದಿಲ್ಲ.

ಅಂತೂ ಎರಡು ತಿಂಗಳ ಮೇಲೆ ನಿರ್ಣಯವು ಹೊರಬಿತ್ತು. ಶಹರಿನ ಹೊರಗಡೆ ಒಂದು ಬಂಗಲೆಯಲ್ಲಿ ಒಬ್ಬ ಸಿವಿಲಿಯನರನ್ನು ಇದರ ವಿಚಾರಣೆಗೆಂದು ನೇಮಕ ಮಾಡಿದ್ದರು. ಅಪರಾಧಿಗಳು ಬಂಧಮುಕ್ತರಾದ ದಿನ ಆ ಬಂಗಲೆಯ ಬಳಿ ಅರ್ಧ ನಗರವೇ ಕೂಡಿತ್ತು ಪೋಲೀಸರು ಕೈದಿಗಳನ್ನು ರಾತ್ರಿ ಹತ್ತುಘಂಟೆಗೆ ಬಿಟ್ಟರೂ ದರ್ಶಕರ ಗುಂಪು ಸೇರಿಯೇ ಸೇರಿತು. ಜನರು ಜಾಲಪಳನ್ನು ಎಳೆದುಕೊಂಡು ಬಂದಿದ್ದರು ದೇವೀದೀನನು ಅವಳ ಹಿಂದಿನಿಂದ ಬಂದನು ಜಾಲಪಳ ಮೇಲೆ ಪುಷ್ಪವೃಷ್ಟಿಯಾಗುತ್ತಿತ್ತು. ಜಾಲಪಾದೇವೀಕೀ ಜೈ ' ಎಂಬ ಕೂಗು ಆಗಸಕ್ಕಡರುತಿತ್ತು.

ಆದರೆ ರಮಾನಾಥನ ಪರೀಕ್ಷೆ ಇನ್ನೂ ಮುಗಿಯಲಿಲ್ಲ, ಅವನ ಮೇಲೆ ಸುಳ್ಳು ಸಾಕ್ಷಿಯ ಅಭಿಯೋಗ ನಡೆಯಿಸುವದೆಂದು ನಿಶ್ಚಯವಾಯಿತು

## [೪೬]

ರಮಾನಾಥನ ಮೇಲಿನ ಮೊಕದ್ದಮೆಯು ಅದೇ ಬಂಗಲೆಯಲ್ಲಿ ಹತ್ತು ಗಂಟೆಯ ಸುಮಾರಿಗೆ ಆರಂಭವಾಯಿತು. ಪೋಲೀಸರ ಸಾಕ್ಷಿಗಳು ಮುಗಿದ ತರುವಾಯ ರಮಾನಾಥನು ಗತವರ್ಷದ ತನ್ನ ಜೀವನವೃತ್ತಾಂತವನ್ನೆಲ್ಲ ಹೇಳಿದನು. ವಕೀಲರ ಒಂದು ಪ್ರಶ್ನೆಗೆ ಉತ್ತರಕೊಡುತ್ತಾ ಹೀಗೆಂದನು—

ಜಾಲಪಳ ತ್ಯಾಗ, ನಿಷ್ಠೆ, ಮತ್ತು ಸತ್ಯಪ್ರೇಮದಿಂದ, ಅದಕ್ಕೂ ಹೆಚ್ಚಾಗಿ ಜೋಹರಳ ನಿಷ್ಕಪಟ ವ್ಯವಹಾರದಿಂದ ನನ್ನ ಕಣ್ಣುಗಳು ತೆರೆದುವು. ಎಲ್ಲರಿಗೂ ಅಂಧಕಾರ ದೊರೆವ ಕಡೆ ನನಗೆ ಪ್ರಕಾಶ ದೊರೆತುದು ನನ್ನ ಸೌಭಾಗ್ಯವೆಂದು ನಾನೆಣಿಸುತ್ತೇನೆ ಈ ವಿಷದಲ್ಲಿಯೂ ನನಗೆ ಅಮೃತ ಲಭಿಸಿತು.

ಜೋಹರಾ ಕೊಟ್ಟ ಹೇಳಿಕೆ ಬಹಳ ಪ್ರಭಾವವೋತ್ಪಾದಕವಾಗಿತ್ತು. ಯಾವ ಪ್ರಾಣಿಯನ್ನು ಸರಪಣಿಯಿಂದ ಬಿಗಿಯಲೆಂದು ನನ್ನನ್ನು ಕಳುಹಿದ್ದರೋ ಆ ಪ್ರಾಣಿಗೆ ಚಿಕಿತ್ಸೆಯ ಆವಶ್ಯಕತೆಯಿತ್ತಲ್ಲದೆ ಸರಪಣಿ ಬೇಕಾಗಿರ ಅವನಿಗೆ ಬೇಕಾಗಿದ್ದುದು ನೆರವಿನ ಕೈಯಲ್ಲದೆ ಕಾಲಿನ ಒದೆತವಲ್ಲ. ಜಾಲಪಾಲಿಲ್ಲ ದೇವಿಯ ವಿಷಯದಲ್ಲಿ ಅವನಿಗಿದ್ದ ಶ್ರದ್ಧೆಯನ್ನೂ ಅಚಲ ವಿಶ್ವಾಸವನ್ನೂ ಕಂಡು ನನ್ನನ್ನೇ ನಾನು ಮರೆತೆ. ನನ್ನ ನೀಚತೆಯ ಮೇಲೂ ಸ್ವಾರ್ಥಾಂಧತೆಯ ಮೇಲೂ ನನಗುಂಟಾದ ಲಜ್ಜೆ ಅಷ್ಟಿಷ್ಟಲ್ಲ ನನ್ನ ಜೀವನವು ಎಷ್ಟು ಅಧಮವಾಗಿದೆ, ಎಷ್ಟು ಪತಿತವಾಗಿದೆ ಎಂಬುದು ನನಗೆ ಆಗಲೇ ತಿಳಿಯಿತು. ಜಾಲಪಾದೇವಿಯ ನಿಕಟಸಂಪರ್ಕದಲ್ಲಿ ಬರುವ ಸೌಭಾಗ್ಯವೊದಗಿದಾಗ ಆಕೆಯ ನಿಷ್ಕಾಮಸೇವೆಯನ್ನೂ ಉಜ್ವಲ ತಪಸ್ಸನ್ನೂ ನೋಡಿ ನನ್ನ ಮನಸ್ಸಿನಲ್ಲಿ ಅಳಿದುಳಿದ ಸಂಸ್ಕಾರಗಳೂ ನಾಶವಾದವು. ವಿಲಾಸಯುಕ್ತ ಜೀವನದ ಮೇಲೆ ನನಗೆ ತುಂಬಾ ತಿರಸ್ಕಾರವುಂಟಾಯಿತು. ನನಗೆ ಆಶ್ರಯ ದೊರೆವ ಭರವಸೆಯಿದ್ದರೆ ಅದು ಇದೇ ಸೆರಗಿನಲ್ಲಿ ಎಂದು ನಾನು ನಿರ್ಧರಿಸಿದೆ.

ಜಾಲಪಳ ಹೇಳಿಕೆಯನ್ನು ಕೇಳಿಯಂತೂ ದರ್ಶಕರ ಕಣ್ಣುಗಳು ನೀರಿನಿಂದ ತೊಯ್ದು ಹೊದವು. ಅವಳು ತನ್ನ ಹೇಳಿಕೆಯನ್ನು ಕೊನೆಗೊಳಿಸಿದ ಬಗೆ ಇದು:— ನನ್ನ ಪತಿ ನಿರಪರಾಧಿ. ದೇವರ ದೃಷ್ಟಿಯಲ್ಲಿ ಮಾತ್ರವಲ್ಲ, ನೀತಿಯ ದೃಷ್ಟಿಯಿಂದ ಸಹ ನಿರ್ದೋಷಿ. ನನ್ನ ವಿಲಾಸಾಸಕ್ತಿಯ ಪ್ರಾಯಶ್ಚಿತ್ತವನ್ನು ಮಾಡಬೇಕೆಂದು ಅವರ ಹಣೆಯಲ್ಲಿ ಬರೆದಿತ್ತೋ ಏನೋ ಅವರದನ್ನು ಮಾಡಿ ತೀರಿಸಿದರು. ಊರಿನಿಂದ ಮುಖಮರೆಯಿಸಿಕೊಂಡು ಓಡಿಹೋದರು ಅವರು ನನ್ನ ಇಚ್ಛಾಪೂರ್ತಿ ಮಾಡುವಾಗಲೆಲ್ಲ ಸದ್ಭಾವ ಕಲ್ಪನೆಯಿಂದಲೆ ಕೆಲಸಮಾಡಿದರೆಂಬುದೊಂದೇ ಅವರು ನನ್ನ ಮೇಲೆ ಮಾಡಿದ ಅತ್ಯಾಚಾರ. ನನ್ನನ್ನು ಪ್ರಸನ್ನಗೊಳಿಸಿ ಸುಖಿಯಾಗಿರಿಸುವುದಕ್ಕೋಸ್ಕರ ಅವರು ಎಂತಹ ದೊಡ್ಡ ಭಾರವನ್ನು ಹೊರುವುದಕ್ಕೂ ಹಿಂಜರಿಯಲಿಲ್ಲ. ವಿಲಾಸವೃತ್ತಿ

ತೃಪ್ತಿಯನ್ನರಿಯದೆಂಬುದನ್ನು ಅವರು ಮರೆತರು. ಎಲ್ಲಿ ನನ್ನನ್ನು ತಡೆದು ಹಿಡಿಯಬೇಕಿತ್ತೋ, ಅಲ್ಲಿ ಪ್ರೋತ್ಸಾಹಿಸಿದರು. ನನಗೆ ಕೆಡುಕನ್ನುಂಟು ಮಾಡುವೆನೆಂಬ ಭಯವನ್ನೊಡ್ಡಿಯೇ ಪೋಲೀಸರು ಇವರ ಬಾಯಿಗೆ ಬೀಗ ಹಾಕಿಸಿರೆಂದು ನನ್ನ ದೃಢವಾದ ನಂಬುಗೆ ಯಾರ ಕಾರಣದಿಂದ ಅವರಿಗೆ ಇಷ್ಟೊಂದು ಎಡರು ತೊಡರುಗಳನ್ನನುಭವಿಸಬೇಕಾಯಿತೋ, ಆ ಅಪರಾಧಿನಿ ನಾನಿರುವೆ ಅವರು ಹೇಳಿಕೆ ಬದಲಿಸುವಂತೆ ಮಾಡಿದವಳೂ ನಾನೇ ಅವರು ದರೋಡೆಯಲ್ಲಿ ಕೈಹಾಕಿರುವರೆಂದು ನನಗೆ ನಂಬುಗೆಯುಂಟಾದಲ್ಲಿ, ಎಲ್ಲರಿಗೂ ಮೊದಲಾಗಿ ನಾನೇ ಅವರನ್ನು ತಿರಸ್ಕರಿಸುವೆ ನಿರಪರಾಧಿಗಳ ಮಸಣದ ಮೇಲೆ ಅವರು ತಮ್ಮ ಭವನವನ್ನು ಕಟ್ಟಿಕೊಳ್ಳುವುದನ್ನು ನಾನು ಕಣ್ಣಾರೆ ನೋಡಿ ಸಹಿಸಲಾರೆ. ಇಲ್ಲಿ ದರೋಡೆ ನಡೆದ ದಿವಸಗಳಲ್ಲಿ ನನ್ನ ಪತಿ ಅಲ್ಲಹಾಬಾದಿನಲ್ಲಿದ್ದರೆಂಬುದನ್ನು ನ್ಯಾಯಾಲಯವು ಟೆಲಿಫೋನಿನ ಮುಖಾಂತರ ವಿಚಾರಿಸಿಕೊಳ್ಳಬಹುದು.

ನ್ಯಾಯಾಧೀಶರು ಸರಕಾರಿ ವಕೀಲರ ಹತ್ತಿರ ಕೇಳಿದರು-ಅಲ್ಲಹಾಬಾದಿನಿಂದ ಈ ವಿಷಯದಲ್ಲಿ ಏನಾದರೂ ರಿಪೋರ್ಟ್ ತರಿಸಿದ್ದೀರಾ ?

ವಕೀಲ—ಹೌದು. ಆದರೆ ಆ ವಿಷಯದಲ್ಲಿ ನಮ್ಮದೇನೂ ವಿವಾದವಿಲ್ಲ.

ಪ್ರತಿವಾದಿಯ ಕಡೆಯ ವಕೀಲರೆಂದರು— ಅಪರಾಧಿಯು ದರೋಡೆಯಲ್ಲಿ ಸೇರಿರಲಿಲ್ಲವೆಂಬುದು ಇದರಿಂದ ಸಿದ್ಧವಾದಂತಾಯಿತು. ಅವನು ಸಾಕ್ಷಿಗಾರನಾದನೇಕೆ ಮತ್ತು ಹೇಗೆ ಎಂಬ ಪ್ರಶ್ನೆ ಮಾತ್ರ ಇನ್ನುಳಿದಿರುವುದು.

ವಾದಿಯ ಕಡೆಯ ವಕೀಲರೆಂದರು—ಸ್ವಾರ್ಥಸಿದ್ಧಿಯ ಉದ್ದೇಶವಲ್ಲದೆ ಬೇರೇನು ?

ಪ್ರತಿವಾದಿಯ ಕಡೆಯ ವಕೀಲ—ಮೊದಲು ಅವನನ್ನು ಮೋಸಗೊಳಿಸಿ ತಮ್ಮ ಕೆಲಸವನ್ನು ಸಾಧಿಸಿಕೊಂಡರು. ಅವನಿಗೆ ತಾನು ಪೋಲೀಸರ ಕೈಗೊಂಬೆಯಾಗಲೊಪ್ಪಿದುದು ಒಂದು ನಿರಾಧಾರವಾದ ಭಯದ ಮೇಲಿಂದ ಯೆಂದು ತಿಳಿದುಬಂದಾಗ ಪೋಲೀಸರು ಬೆದರಿಕೆಯನ್ನೊಡ್ಡಿದರು.

ಸರಕಾರದ ಕಡೆಯ ವಕೀಲರು ವಿವಾದಕ್ಕೆ ತೊಡಗಿದರು— ಯುವರ್ ಆನರ್, ಈ ಹೊತ್ತು ತಮ್ಮ ಮುಂದೆ ಸೌಭಾಗ್ಯವಶಾತ್ ಬಹಳ ಕಡಮೆಯಾಗಿ ಸಂಭವಿಸುವಂತಹ ಒಂದು ಅಭಿಯೋಗ ಉಪಸ್ಥಿತವಾಗಿರುತ್ತದೆ. ಜನಕಪುರದ ದರೋಡೆಯ ವಿಷಯ ತಮಗೆ ಚೆನ್ನಾಗಿ ಗೊತ್ತು. ದರೋಡೆ

ಗಳ್ಳರನ್ನು ಪೋಲೀಸರು ಹಿಡಿಯಲು ಪಟ್ಟ ಕಷ್ಟ ಅವರ್ಣನಿಯ. ಆದರೂ ಇಂತಹ ವಿಷಯಗಳಲ್ಲಿ ನ್ಯಾಯಾಲಯಕ್ಕೆ ಪುರಾವೆಗಳನ್ನೊದಗಿಸುವುದು ಎಷ್ಟು ಕಠಿನವೆಂಬುದೂ ತಮಗೆ ತಿಳಿದಿರುವುದು. ಪ್ರಾಣಭಯದಿಂದ ಜನರೆಲ್ಲ ಸಾಕ್ಷಿ ಹೇಳಲು ಹಿಂಜರಿಯುತ್ತಾರೆ.

ಮಹಾನುಭಾವರೆ, ಇಂತಹ ಸಂಕಟದಲ್ಲಿ ಪೋಲೀಸರು ಬಿದ್ದಿರುವ ಹೊತ್ತು ಒಬ್ಬಾನೊಬ್ಬ ಯುವಕನು ಮುಂದೆ ಬಂದು ತಾನು ದರೋಡೆಗಳ್ಳರ ವಿಷಯ ಎಲ್ಲವನ್ನೂ ಬಲ್ಲೆನೆಂದು ಹೇಳಿ, ದರೋಡೆಯ ಘಟನೆಯನ್ನು ಪ್ರಮಾಣಪೂರ್ಣವಾಗಿ ವರ್ಣಿಸಿ, ಅವರನ್ನು ಮೋಸಗೊಳಿಸುತ್ತಾನೆ. ಈ ಯುವಕನು ಅಲ್ಲಹಾಬಾದಿನಿಂದ ಓಡಿ ಒಂದಿದ್ದು, ಈ ನಗರದಲ್ಲಿ ಹೊಟ್ಟೆಗಿಲ್ಲದೆ ಸಾಯುತ್ತಿದ್ದನು. ತನ್ನ ಭಾಗ್ಯನಿರ್ಮಾಣಕ್ಕೆ ಬಿಗಿದು ಬಂದ ಈ ಸುವರ್ಣಸಂದರ್ಭವನ್ನು ಉಪಯೋಗಿಸಿಕೊಳ್ಳಲು ಅವನು ಹವಣಿಸಿದ್ದರಿಂದಲೇ ಪೋಲೀಸರು ಅವನ ಮೋಸಕ್ಕೊಳಗಾದುದು; ಇಲ್ಲವಾದರೆ ಸಾಕ್ಷಿ ಪುರಾವೆಗಳು ಸರಿಯಾಗಿ ಸಿಗದೆ ಪೋಲೀಸರು ಅಪರಾಧಿಗಳ ಮೇಲೆ ಮೊಕದ್ದಮೆ ನಡೆಯಿಸುತ್ತಲೇ ಇದ್ದಿಲ್ಲ.

ಆದರೆ ಈ ನಡುವೆ ಅವನಿಗೆ ಸ್ವಭಾಗ್ಯನಿರ್ಮಾಣಕ್ಕೆ ಇದಕ್ಕಿಂತಲೂ ಒಳ್ಳೆಯ ಸಂದರ್ಭವೊಂದು ದೊರೆತಂತೆ ತೋರುವುದು. ಸರಕಾರದ ವಿರೋಧಿ ಸಂಸ್ಥೆಗಳು ಅವನಿಗೆ ಪ್ರಲೋಭನಗಳನ್ನು ತೋರಿಸಿ, ಸ್ವಾರ್ಥಸಿದ್ಧಿಯ ಹೊಸ ದಾರಿಯನ್ನು ಕಾಣಿಸಿರಬೇಕೆಂಬುದು ಬಹಳ ಸಂಭವವಾಗಿ ಕಾಣುವುದು ಅವನು ಸ್ವಾರ್ಥಕ್ಕೋಸುಗ ಏನು ಮಾಡಲಿಕ್ಕೂ ಸಿದ್ಧನು— ಒಬ್ಬನ ಕತ್ತು ಹಿಚುಕಲೂ ಅಂಜುವವನಲ್ಲ, ಸಾಧುವೇಷಧರಿಸಲೂ ಹಿಂಜರಿವವನಲ್ಲ! ಅವನ ಜೀವನದ ಲಕ್ಷ್ಯವೇ ಇದು ಅವನ ಹೇತುವೇನೇ ಆಗಿದ್ದರೂ ಕೊನೆಗವನ ಸದ್ಬುದ್ಧಿಯು ಅವನ ಸ್ವಾರ್ಥವನ್ನು ಜಯಿಸಿದುದನ್ನು ನೋಡಿ ನಾವೆಲ್ಲಾ ಸಂತೋಷಿಸಬೇಕಾಗಿದೆ. ಅಪರಾಧಿಗಳನ್ನು ಹಾಗೆಯೇ ಬಿಟ್ಟುಬಿಡುವುದು ಪೋಲೀಸರಿಗೆ ಎಷ್ಟು ಆಪತ್ತಿಜನಕವೋ, ಅಷ್ಟೇ ನಿರಪರಾಧಿಗಳಿಗೆ ದಂಡನೆ ಮಾಡುವುದೂ ಸಹ ಎಂಬದನ್ನು ನಾವು ನೆನೆಪಿನಲ್ಲಿಡಬೇಕು ಸರಕಾರವು ತನ್ನ ಕಾರ್ಯಕ್ರಮದ ವೈಭವವನ್ನು ತೋರ್ಪಡಿಸಲೆಂದು ಪೋಲೀಸರ ಮಾತಿಗೊಳಗಾಗಿ, ಸಾರಹೀನವಾದ ಮೊಕದ್ದಮೆಗಳನ್ನು ನಡೆಯಿಸುತ್ತಾ ಕೂಡು

ವಷ್ಟು ನ್ಯಾಯಶೂನ್ಯವಾಗಿದೆಯೆಂದು ನಾವು ಎಣಿಸಲಾಗದು. ಆದರೆ ಸರಕಾರಕ್ಕೆ ಈ ಯುವಕನ ದೆಸೆಯಿಂದಾಗಿ ಉಂಟಾಗಿರುವ ಸಾವಿರಾರು ರೂಪಾಯಿಗಳ ಹಾನಿಯನ್ನು ತುಂಬುವುದಕ್ಕೆ ಹೊಣೆಯಾರು? ಇಂಥವನಿಗೆ ಆದರ್ಶ ದಂಡನೆ ದೊರೆಯತಕ್ಕದ್ದು. ಈ ರೀತಿಯಲ್ಲಿ ಮಿಥ್ಯಾಲೋಕವನ್ನು ನಿರ್ಮಿಸುವ ಮನುಷ್ಯನನ್ನು ಬಂಧನದಲ್ಲಿರಿಸಿದರೆ ಸಮಾಜಕ್ಕೆ ಹಿತವಾದೀತು. ಎಲ್ಲಿ ಈತನಿಗೆ ಕೆಲವು ದಿನಗಳ ತನಕವಾದರೂ ಆತ್ಮಚಿಂತನೆಗೆ ಅವಕಾಶ ದೊರೆವುದೋ ಅದೇ ಇವನಿಗೆ ಈ ಸಮಯ ಉಪಯುಕ್ತವಾದ ಸ್ಥಾನ ಅಲ್ಲಿಯ ಏಕಾಂತವಾಸದಿಂದ ಇವನಿಗೆ ಆಂತರಿಕ ಜಾಗೃತಿ ಪ್ರಾಪ್ತವಾದರೂ ಆಗಬಹುದು. ಇವನು ಪೋಲೀಸರಿಗೆ ಮೋಸಮಾಡಿದನೇ ಇಲ್ಲವೇ ಎಂಬುದಿಷ್ಟೇ ನೀವೀಗ ವಿಚಾರ ಮಾಡಲಿರುವ ಪ್ರಶ್ನೆ. ಆದರಲ್ಲಿಯೂ ಸಂದೇಹ ಉಳಿದಿಲ್ಲ ಇನ್ನು ಬೆದರಿಕೆ-ಗದರಿಕೆಗಳ ಆಕ್ಷೇಪ ಸುಳ್ಳು. ಯಾಕೆಂದರೆ ಮೊದಲಿನ ನ್ಯಾಯಾಲಯದಿಂದ ಜಡ್ಜರ ನ್ಯಾಯಾಲಯಕ್ಕೆ ಮೊಕದ್ದಮೆ ಬಂದಾಗ ಇವನು ತನ್ನ ಹೇಳಿಕೆಯನ್ನು ಹಿಂತೆಗೆಯಬಹುದಿತ್ತು. ಅವನು ಮಾಡಿದುದೆಲ್ಲ ಸ್ವೇಚ್ಛೆಯಿಂದಲೇ ಹೊರತು ಯಾರ ಒತ್ತಾಯದಿಂದಲೂ ಅಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತಿದೆ.

ಆಮೇಲೆ ಪ್ರತಿವಾದಿಯ ಕಡೆಯ ವಕೀಲರು ಎದ್ದು ವಾದಿಸತೊಡಗಿದರು. ಮೊದಲು ರಮಾನಾಥನು ಅಲ್ಲಹಾಬಾದಿನಿಂದ ಓಡಿಬಂದ ಸಂದರ್ಭವನ್ನೂ, ಪೋಲೀಸರ ಕೈಗೆ ಸಿಕ್ಕುಬಿದ್ದ ಪರಿಸ್ಥಿತಿಯನ್ನೂ, ಸುಳ್ಳುಸಾಕ್ಷಿಯನ್ನು ಹೇಳಿಸುವುದಕ್ಕೆ ಅವರು ಹೂಡಿದ ಉಪಾಯಗಳನ್ನೂ, ಜಾಲಪಳ ತ್ಯಾಗವನ್ನೂ, ಜೋಹರಳ ಆತ್ಮಪರಿವರ್ತನೆಯನ್ನೂ ವಿವರಿಸಿದ ಬಳಿಕ ಅವರು ಹೀಗೆಂದರು-

ರಮಾನಾಥನು ಸುಳ್ಳುಸಾಕ್ಷಿ ಹೇಳಿರುವನೆಂಬುದನ್ನು ನಾನೇನೂ ಅಲ್ಲಗಳೆಯುವುದಿಲ್ಲ; ಆದರೆ ಪರಿಸ್ಥಿತಿ ಮತ್ತು ಪ್ರಲೋಭನಗಳನ್ನು ವಿಚಾರಿಸಿ ನೋಡುವಾಗ ಅವನ ಅಪರಾಧದ ಗಹನತೆ ಬಹುಮಟ್ಟಿಗೆ ಇಳಿದು ಹೋಗುವುದೆಂದು ನನ್ನ ಭಾವನೆ ಅವನು ಸುಳ್ಳುಸಾಕ್ಷಿ ಹೇಳಿದುದರಿಂದ ನಿರಪರಾಧಿಗಳಿಗೆ ದಂಡನೆಯಾಗುತ್ತಿದ್ದರೆ ಆಮಾತು ಬೇರೆ. ಹದಿನೈದು ಯುವಕರ ಪ್ರಾಣಗಳು ಉಳಿದಮೇಲೂ ಶಮ್ಮತಿಸುವಾಗ ಅವನು ಶಿಕ್ಷಾರ್ಹನೆ? ಅವನ ಸರಳತೆಯೂ ಸಜ್ಜನತೆಯೂ ವೇಶ್ಯೆಯೊಬ್ಬಳ ಮನಸ್ಸನ್ನಾದರೂ ಹೇಗೆ ಸೂರೆ

ಗೊಂಡಿತೆಂಬುದನ್ನು ತಾವು ಬಲ್ಲಿರಿ. ಅವಳು ತನ್ನ ಉದ್ದೇಶವನ್ನೇ ಮರೆತು ಅವನಿಗೆ ದಾರಿಯ ಬೆಳಕಾಗಿ ಪರಿಣಮಿಸಿದುದು ಕಡಮೆ ಮಹತ್ವದ ವಿಷಯವೆ? ಚಾಲಪಾದೇವಿಯ ಕರ್ತವ್ಯಪರಾಯಣತೆಯು ದಂಡನೆಗೆ ತಕ್ಕದೆ? ಈ ನಾಟಕದ ನಾಯಿಕೆಯಾದ ಅವಳ ಸದನುರಾಗವನ್ನೂ, ಸರಳ ಪ್ರೇಮವನ್ನೂ, ಧರ್ಮ ಪರಾಯಣತೆಯನ್ನೂ, ಇನ್ನಿತರ ಗುಣಗಳನ್ನೂ ಎಷ್ಟು ಹೊಗಳಿದರೂ ತೀರದು! ಅವಳಿಂದು ರಂಗಭೂಮಿಗೆ ಪ್ರವೇಶಿಸದಿರುತ್ತಿದ್ದರೆ ಹದಿನೈದು ಮನೆಗಳು ಹಾಳಾಗುತ್ತಿದ್ದವು. ಹದಿನೈದು ಕುಟುಂಬಗಳಿಗೆ ಅಭಯದಾನವಿತ್ತಾಕೆ ಅವಳು! ಪೋಲೀಸರು ಹೇಳಿದಂತೆ ಕುಣಿಯುವದಾದರೆ ತನ್ನ ಸಾಂಸಾರಿಕ ಭವಿಷ್ಯವು ಎಷ್ಟು ಉಜ್ವಲವಾಗವುದೆಂದೂ, ತನ್ನನ್ನು ಹಗಲಿರುಳು ಕಾಡಿಸುತ್ತಿದ್ದ ಅವೆಷ್ಟುಚಿಂತೆಗಳು ಹೇಳ ಹೆಸರಿಲ್ಲದಾಗುವವೆಂದೂ, ಬೇಕ ಬೇಕಾದ ಒಡವೆ ವಸ್ತುಗಳು, ಮನೆ ಮೋಟಾರು ಇತ್ಯಾದಿಗಳ ಪೂರೈಕೆ ಯಾಗುವುದೆಂದೂ, ಆಕೆಗೆ ತಿಳಿದಿದ್ದರೂ ಅವಳು ಯಾತನೆಯನ್ನನುಭವಿಸಲು ಸಿದ್ಧಳಾಗುತ್ತಾಳೆ. ಅವಳು ಪತಿವಂಚಿತಳಾಗಿ ಜೀವನಪಥದಲ್ಲಿ ತೊಳಲಬೇಕೆಂಬುದು ನಾವವಳ ಧರ್ಮಾನುರಾಗಕ್ಕೆ ಕೊಡುವ ಉಪಯುಕ್ತ ಬಹುಮಾನವೆ? ಉಚ್ಚಕೋಟಿಯ ಶಿಕ್ಷಣವನ್ನು ಪಡೆಯದ ಓರ್ವ ಸಾಧಾರಣ ಸ್ತ್ರೀಯಲ್ಲಿ ಇಂತಹ ನಿಸ್ಪೃತ್ಯಾಗಗಳು ಮೂಡುವುದು ದೈವೀಪ್ರೇರಣೆಯ ಪರಿಚಾಯಕವಲ್ಲವೆ? ಒಬ್ಬಳು ಪತಿತೆಯೂ ಈ ಕಾರ್ಯದಲ್ಲಿ ನೆರವಾದಳೆಂಬುದರಲ್ಲಿ ಏನೊಂದೂ ಮಹತ್ತ್ವವಿಲ್ಲವೆ? ತುಂಬಾ ಮಹತ್ತ್ವವಿದೆಯೆಂದು ನಾನು ನಿಶ್ಚಯವಾಗಿ ಹೇಳಬಲ್ಲೆ. ಇಂತಹ ಅಭಿಯೋಗಗಳು ದಿನನಿತ್ಯವೂ ಬರುತ್ತಿರುವುದಲ್ಲ ತಮ್ಮಗಳ ಜೀವನದಲ್ಲಿ ಇಂತಹ ಅಭಿಯೋಗ ಇದೊಂದೇ ಆದರೂ ಆಗಬಹುದು. ಇನ್ನೊಂದು ವಿಷಯವನ್ನು ತಾವೆಲ್ಲ ನೆನಪಿನಲ್ಲಿಡಬೇಕು. ಈ ನ್ಯಾಯಾಲಯದ ಹೊರಗೆ ನೀವಿಲ್ಲಿ ಮಾಡಿದ ನ್ಯಾಯದ ಕುರಿತು ವಿಚಾರಣೆ ನಡೆಯಿಸುವ ಬೇರೊಂದು ದೊಡ್ಡ ನ್ಯಾಯಾಲಯವಿದೆ. ಆ ನ್ಯಾಯಾಲಯವು ಒಪ್ಪುವಂತಹ ನಿರ್ಣಯವೇ ಸರಿಯಾದ ನಿರ್ಣಯ. ಸುಳ್ಳು ಹೇಳಿದ ಮೇಲೆ ಪಶ್ಚಾತ್ತಾಪ ಪಟ್ಟು ನಿಜವನ್ನು ನುಡಿದನೆಂಬುದರಿಂದ ಮತ್ತು ಭೋಗವಿಲಾಸ ಯುಕ್ತ ಜೀವನವನ್ನು ಕಾಲಿಂದೊದೆದು ಅರೆಹೊಟ್ಟೆಯಿಂದ ಕಾಲಕ್ಷೇಪಮಾಡಿದನೆಂಬುದರಿಂದ, ತಾವು ಒಬ್ಬನನ್ನು ಅಪರಾಧಿಯೆಂದು ನಿರ್ಣಯಿಸುವದಾದರೆ, ಲೋಕದ ಮುಂದೆ ಬಹಳ ಉಚ್ಚ ಆದರ್ಶದ ನ್ಯಾಯವನ್ನು ಪ್ರದರ್ಶಿಸಿದಂತಾಗಲಾರದೆಂದು ನಾನು ದೃಢವಾಗಿ ಹೇಳಬಲ್ಲೆ.

ಸರಕಾರದ ಕಡೆಯ ವಕೀಲರು ಇದಕ್ಕೆ ಪ್ರತ್ಯುತ್ತರವನ್ನು ಕೊಟ್ಟರು— ಧರ್ಮ-ಆದರ್ಶಗಳು ತಂತಮ್ಮ ಸ್ಥಾನದಲ್ಲಿರುವಾಗ ಬಹಳ ಆದರದ ವಸ್ತುಗ ಳೆಂಬದರಲ್ಲಿ ಸಂದೇಹವಿಲ್ಲ; ಆದರೆ ತಿಳಿದೂ-ತಿಳಿದೂ ಸುಳ್ಳುಸಾಕ್ಷಿಯನ್ನಿತ್ತ ಮನುಷ್ಯನು ಅಪರಾಧಿಯೆಂಬುದರಲ್ಲಿಯೂ ಏನೂ ಸಂದೇಹವಿರದು. ಸಜೆಯ ಭಯದಿಂದ ಸುಳ್ಳುಸಾಕ್ಷಿಹೇಳಿ ಅವನು ಪೋಲೀಸರನ್ನು ಮೋಸಗೊಳಿಸಿ ದುದೇಕೆ? ಅವನು ಹಾಗೆ ಮಾಡಿದುದು ಅನುಚಿತವೆಂದು ತಿಳಿಯುವುದಾದರೆ ಅವನಿಗೆ ದಂಡನೆಯನ್ನು ವಿಧಿಸಿಯೇ ತೀರುವಿರೆಂದು ನಾನು ತಿಳಿಯುತ್ತೇನೆ.

ಇನ್ನು ನ್ಯಾಯಾಧೀಶರು ನಿರ್ಣಯವನ್ನೋದುವ ಸಮಯ ಸನ್ನಿಹಿತ ವಾಯಿತು. ನೆರೆದಿದ್ದ ಎಲ್ಲ ಜನರಿಗೂ ರಮಾನಾಥನ ಮೇಲೆ ಸಹಾನುಭೂತಿ ಯುಂಟಾಗಿತ್ತು; ಹಾಗೆಯೇ ಅವನಿಗೆ ದಂಡನೆ ಸಿಕ್ಕೇಸಿಗುವುದೆಂಬುದೂ ಎಲ್ಲ ರಿಗೂ ಖಂಡಿತವಾಗಿತ್ತು. ಜನರು ಬಹಳ ಔತ್ಸುಕ್ಯದಿಂದ ನಿರ್ಣಯವನ್ನಾ ಲಿಸಲು ಸಿದ್ಧರಾದರು.

"ಒಬ್ಬ ಯುವಕನು ತನ್ನ ಪ್ರಾಣರಕ್ಷಣೆಯ ಸಲುವಾಗಿ ಪೋಲೀಸರ ಮರೆಹೊಕ್ಕು, ತಾನು ಯಾವ ಭಯದಿಂದ ಅವರಿಗೆ ಶರಣು ಬಂದಿದ್ದನೋ, ಆ ಭಯವು ನಿರಾಧಾರವಾದುದೆಂದು ತಿಳಿದು ಬಂದೊಡನೆ ತನ್ನ ಹೇಳಿಕೆಯನ್ನು ಹಿಂತೆಗೆದುಕೊಂಡನೆಂಬುದು ವಿವಾದಾಸ್ಪದ ವಿಷಯವಾಗಿದೆ ರಮಾನಾಥ ನಲ್ಲಿ ಅಂತಹ ಸತ್ಯನಿಷ್ಠೆ ಇರುತ್ತಿದ್ದರೆ ಅವನು ಪೋಲೀಸರ ಆಶ್ರಯವನ್ನು ಹಾರೈಸುತ್ತಲೇ ಇದ್ದಿಲ್ಲ; ಪೋಲೀಸರೇ ಅವನಿಗೆ ಪ್ರಲೋಭನಗಳನ್ನು ತೋರಿಸಿ ರಕ್ಷಣೆಗೆ ಇದೊಂದು ಉಪಾಯವನ್ನು ಸೂಚಿಸಿದರೆಂಬುದರಲ್ಲಿ ಏನೂ ಸಂದೇಹವಿಲ್ಲ ಈ ವಿವಾದದಲ್ಲಿ ಸಾಕ್ಷಿ ಹೇಳಬೇಕೆಂಬ ಪ್ರಸ್ತಾಪವು ಅವನ ಮನಸ್ಸಿನೊಳಗೇ ಉತ್ಪನ್ನವಾಯಿತೆಂಬ ಮಾತನ್ನು ನಾನು ಒಪ್ಪಲಾರೆ. ಅವನ ಮುಂದಿರಿಸಿದ ಪ್ರಲೋಭನಗಳನ್ನು ಅವನು ಪ್ರಾಣಭಯದಿಂದಲೇ ಸ್ವೀಕರಿಸಿರಬೇಕು. ಅಷ್ಟುಮಾತ್ರವಲ್ಲದೆ ಅವನು ಯಾರ ವಿರುದ್ಧ ಸಾಕ್ಷಿ ಹೇಳಬೇಕಿತ್ತೋ ಅವರೆಲ್ಲರೂ ನಿಜವಾದ ಅಪರಾಧಿಗಳೆಂದು ಅವನಿಗೆ ಪೋಲೀ ಸರು ಮನಗಾಣಿಸಿರಬೇಕು. ಏಕೆಂದರೆ ರಮಾನಾಥನಲ್ಲಿ ಶಿಕ್ಷೆಯಭಯದ ಜತೆಗೆನೇ ನ್ಯಾಯಭಕ್ತಿಯೂ ಇದೆ. ಸ್ವಾರ್ಥಕ್ಕೋಸುಗ ಸುಳ್ಳುಸಾಕ್ಷಿ ಹೇಳು ವುದನ್ನು ವೃತ್ತಿಯಾಗಿಮಾಡಿಕೊಂಡ ಸಾಕ್ಷಿಗಾರರಲ್ಲಿ ಅವನೊಬ್ಬನಲ್ಲ.

ಪೋಲೀಸರ ಗದರಿಕೆಯಿಂದ ತಾನು ಹಿಂದೆ ಕೊಟ್ಟ ಹೇಳಿಕೆಯನ್ನು ಜಡ್ಜರ ಕೋರ್ಟಿನಲ್ಲಿ ಹಿಂತೆಗೆಯಲಾರದೆ ಹೋದನು. ರಮಾನಾಥನು ಈ ಗದರಿಕೆಗಳಿಗೊಳಗಾದುದು ಅವನ ದೌರ್ಬಲ್ಯವೇನೋ ಖಂಡಿತ; ಆದರೆ ಪರಿಸ್ಥಿತಿಯ ದೃಷ್ಟಿಯಿಂದ ಈ ಅಪರಾಧವುಕ್ಷಮ್ಯ. ಆದುದರಿಂದ ನಾನು ರಮಾನಾಥನು ನಿರ್ದೋಷಿಯೆಂದು ತೀರ್ಪುಕೊಡುತ್ತೇನೆ.

## [೪೭]

ಚೈತ್ರಮಾಸದ ಶೀತಲ, ಸುರಮ್ಯ, ಸ್ಫೂರ್ತಿಮಯ ಸಂಧ್ಯಾಕಾಲ; ನಳನಳಿಸುತ್ತಿರುವ ಬಯಲು, ಸಾಲಾಗಿ ನೆಟ್ಟಿರುವ ಆಲದ ಮರಗಳು, ಅವುಗಳ ಕೆಳಗೆ ಕಟ್ಟಿರುವ ದನಎಮ್ಮೆಗಳು, ಕುಂಬಳ ಮುಂತಾದ ತರತರದ ಬಳ್ಳಿಗಳಿಂದ ರಂಜಿಸುವ ಗುಡಿಸಲುಗಳು; ಧೂಳು-ಗೊಬ್ಬರ, ಬೊಬ್ಬೆ-ಗದ್ದಲ, ಯಾವುದೂ ಇಲ್ಲ ಸುಖಶಾಂತಿಗಳನ್ನು ಬಯಸುವವರಿಗೆ ಇದಕ್ಕಿಂತ ಒಳ್ಳೆಯ ನೆಲವೀಡು ಬೇರಾವುದಿದ್ದೀತು? ಅಲ್ಲೇ ಕೆಳಗೆ ಹೊಂಬಣ್ಣದ ಗಂಗೆಯು ಚೆಂಬಣ್ಣನೀಲವರ್ಣಗಳಿಂದ ಥಳಥಳಿಸುತ್ತಲೂ, ಮಂದಸ್ವರದಲ್ಲಿ ಹಾಡುತ್ತಲೂ, ಒಂದೆಡೆ ನೆಗೆಯುತ್ತಲೂ, ಇನ್ನೊಂದೆಡೆ ಮೆಲುನಡೆಯಿಂದ ಸಾಗುತ್ತಲೂ, ಮತ್ತೊಂದೆಡೆ ಚಪಲೆಯಾಗಿಯೂ, ಮಗುದೊಂದೆಡೆ ಗಂಭೀರೆಯಾಗಿಯೂ, ಅನಂತ ಅಂಧಕಾರಕ್ಕಿದಿರಾಗಿ ಹರಿಯುತ್ತಿದ್ದಾಳೆ. ಬಹು ರಂಜಿತ ಬಾಲ್ಯಸ್ಮೃತಿಯು ಕ್ರೀಡೆಮತ್ತು ವಿನೋದದ ಮಡಿಲಲ್ಲಿ ಆಟವೆಸಗುತ್ತ ಚಿಂತಾಮಯವೂ, ಆನಂದಮಯವೂ, ಅಂಧಕಾರಮಯವೂ ಆದ ಭವಿಷ್ಯದ ದಿಶೆಗೆ ಸಾಗುತ್ತಿದೆಯೋ ಎಂಬಂತಿತ್ತು ಅವಳ ಆ ನಡಿಗೆ. ಪ್ರಯಾಗಕ್ಕೆ ಸಮೀಪದಲ್ಲಿರುವ ಈ ಹಳ್ಳಿಯಲ್ಲಿ ದೇವೀದೀನ ರಮಾನಾಥರು ನೆಲೆಯೂರಿ ಮೂರು ವರುಷಗಳು ಸಂದಿವೆ.

ದೇವೀದೀನನು ಇಲ್ಲಿ ಜಮೀನನ್ನು ತೆಗೆದುಕೊಂಡು, ಬೇಸಾಯ ಮಾಡುತ್ತಾ, ದನಕರಗಳನ್ನು ಸಾಕುತ್ತಾ ಕರ್ಮಯೋಗದಲ್ಲಿ—ಅವಿರತ ಉದ್ಯೋಗದಲ್ಲಿ—ಸುಖಶಾಂತಿಗಳ ನೆಲೆಗಾಣುತ್ತಿದ್ದಾನೆ. ಅವನ ಮುಖದಲ್ಲಿ ಅಂದಿದ್ದ ನಿರಿಗಳು ಈಗ ಮಾಯವಾಗಿ ಅವುಗಳಸ್ಥಾನದಲ್ಲಿ ಸ್ಫೂರ್ತಿಯ ನವಕಾಂತಿ ಉದಯವಾಗಿದೆ

ಸಂಜೆಯಾಯಿತು. ದನಕರುಗಳು ಮೇದು ಬಂದುವು. ಜಗ್ಗೊ ಅವು ಗಳನ್ನು ಗೂಟಕ್ಕೆಕಟ್ಟಿ ಪ್ರತಿಯೊಂದರ ಇದಿರೂ ಸ್ವಲ್ಪಸ್ವಲ್ಪ ಹುಲ್ಲನ್ನು ಹರ ವಿದಳು. ಅಷ್ಟರಲ್ಲಿ ಗೋಪಿ-ದೇವೀದೀನರು ಹೊಲದಿಂದ ಗಾಡಿಯಮೇಲೆ ತಾವು ಕೊಯ್ದ ಗಿಡಗಳ ಹೊರೆ ಹೇರಿಕೊಂಡು ಬಂದರು. ದಯಾನಾಥರು ಹಿಂದೆಯೇ ಆಲದ ಮರದ ಕೆಳಗೆ ಸ್ವಚ್ಛಮಾಡಿಟ್ಟಿದ್ದ ಸ್ಥಳದಲ್ಲಿ ಆ ಹೊರೆ ಯನ್ನು ಇಳಿಸಲಾಯಿತು. ದಯಾನಾಥರು ನೌಕರಿ ಬಿಟ್ಟು ದೇವೀದೀನನ 'ಅಸಿಸ್ಟಂಟ್' ಆಗಿ ಕೆಲಸಮಾಡುತ್ತಿದ್ದರು. ಈಗಲೂ ಅವರಿಗೆ ಬರುವ ಸಮಾಚಾರ ಪತ್ರಗಳಿಗೆ ಮಿತಿಯಿಲ್ಲ ಅವುಗಳನ್ನು ಸುತ್ತಲಿನ ಹಳ್ಳಿಗರಿಗೆ ಓದಿ ಅರ್ಥಹೇಳುವುದೆಂದರೆ ಅವರಿಗೆ ಬಹಳ ಮೆಚ್ಚು.

ರಮಾನಾಥನಿಗೆ ಈಗ ಈ ರೀತಿಯ ಜೀವನದಮೇಲೆ ಬಲು ಮಮತೆ. ಪ್ರಾತಃಕಾಲದಲ್ಲೇ ಎದ್ದು ಗಂಗಾಸ್ನಾನ ಮಾಡಿ, ತುಸು ವ್ಯಾಯಾಮ ತೆಗೆದು ಕೊಳ್ಳುವನು. ಆ ಮೇಲೆ ಹಾಲುಕುಡಿದು ನಸುಕು ಹರಿಯುವ ಹೊತ್ತಿಗೆ ಸರಿಯಾಗಿ ತನ್ನ ಔಷಧಿಗಳ ಪೆಟ್ಟಿಗೆಯನ್ನು ತಂದು ಕೂತು ಬಿಡುವನು. ಹಲವು ವೈದ್ಯಕ ಗ್ರಂಥಗಳನ್ನೋದಿ ಚಿಕ್ಕದೊಡ್ಡ ರೋಗಗಳ ಚಿಕಿತ್ಸಾ ವಿಧಾನ ವನ್ನು ಅರಿತುಕೊಂಡಿರುವನು. ಹತ್ತಿರದ ಹಳ್ಳಿಗಳಿಂದ ಏನಿಲ್ಲವಾದರೂ ದಿನಾಲೂ ಐದಾರು ಜನರಾದರೂ ಚಿಕಿತ್ಸೆಗೆ ಬಂದೇ ಬರುತ್ತಾರೆ. ಈ ಕೆಲಸ ಮುಗಿದಮೇಲೆ ತೋಟದ ಕೆಲಸಕ್ಕೆ ತೊಡಗುವನು

ದೇವೀದೀನನು ಎತ್ತುಗಳನ್ನು ಗಾಡಿಯಿಂದ ಬಿಚ್ಚಿ ಬೇರೆಕಡೆ ಕಟ್ಟಿ ದಯಾನಾಥರ ಹತ್ತಿರ 'ರಮಾನಾಥ ಇನ್ನೂ ಬರಲಿಲ್ಲವೇ?' ಎಂದು ಕೇಳಿದನು

ದಯಾನಾಥರೆಂದರು—ಇನ್ನೂ ಏಕೆ ಬರಲಿಲ್ಲವೋ? ಅವರೆ ನೋಡು ಇನ್ನು ಇವರು ಗುಣಹೊಂದಿಯಾರೆಂದು ನನಗೆ ಆಸೆಯಿಲ್ಲ. ಕಾಲಚಕ್ರದ ಮಹಿಮೆ ಇಲ್ಲವಾದರೆ ಏನುವೈಭವದಲ್ಲಿರುತ್ತಿದ್ದರು! ಬಂಗಲೆ, ಗಾಡಿ, ಮೋಟರು ಯಾವುದಕ್ಕೂ ಕಡಮೆ ಇರಲಿಲ್ಲ ಈಗ ಈ ಸ್ಥಿತಿಗೆ ಬಂದಿದ್ದಾರೆ ಅಣ್ಣತಮ್ಮಂದಿರ ಮಕ್ಕಳುಬಂದು ಇದ್ದುದನ್ನೆಲ್ಲ ದೋಚಿಕೊಂಡು ಹೋದರು.

ದೇವೀದೀನನೆಂದನು—ಕೋರ್ಟಿಗೆ ಹೋದರೆ ಎಲ್ಲಾ ಸಿಗಲು ಶಕ್ಯವಿದೆ ಯೆಂದು ರಮಾನಾಥ ಹೇಳುತ್ತಾನೆ. ಆದರೆ ಕೋರ್ಟಿನಲ್ಲಿ ಸುಳ್ಳು ಹೇಳುವು ದಕ್ಕೆ ಇವರ ಸಮ್ಮತಿಯಿಲ್ಲ. ತುಂಬಾ ಒಳ್ಳೆಯ ವಿಚಾರದ ಹೆಂಗಸು.

ರಾಮೇಶ್ವರಿ ಒಂದು ಕೂಸನ್ನೆತ್ತಿಕೊಂಡು ಬಂದು ದಯಾನಾಥರ ಕೈಯಲ್ಲಿ ಕೊಟ್ಟು, ದೇವೀದೀನನ ಹತ್ತಿರ 'ಅಣ್ಣಾ, ಸ್ವಲ್ಪ ಆಕಡೆ ಹೋಗಿ ರತನಳನ್ನು ನೋಡಿ ಬಾ. ಏನಾಗುವುದೋ ದೇವರೇ ಬಲ್ಲ. ಜೊಹರಾ ಮತ್ತು ವಧು ಅಳುತ್ತಿದ್ದಾರೆ. ಹೊರಗೆ ಹೋದ ರಮಾನಾಥ ಇನ್ನೂ ತೋರುವುದಿಲ್ಲ' ಎಂದಳು. ದೇವೀದೀನನು ದಯಾನಾಥರ ಹತ್ತಿರಹೋಗಿ 'ಹೋಗಿ ನೋಡಿ ಬರೋಣವೆ?' ಎಂದು ಕೇಳಿದನು. ರಾಮೇಶ್ವರಿ, 'ಇವರೆಲ್ಲಿ ಬರುತ್ತಾರೆ? ಹಾಸುಗೆ ಹಿಡಿದವರನ್ನು ನೋಡಿದರೆ ಇವರ ಪ್ರಾಣವೇ ಹಾರಿಹೋದೀತು.' ಎಂದು ಹೇಳಿದಳು.

ದೇವೀದೀನನು ರತನಳ ಕೊಠಡಿಯನ್ನು ಹೊಕ್ಕನು. ಬಿದಿರು ಮಂಚದ ಮೇಲೆ ಮಲಗಿದ್ದ ರತನಳ ದೇಹವು ಸೊರಗಿ ಕಡ್ಡಿಯಾಗಿತ್ತು. ಅರಳಿದ ಸೂರ್ಯಕಾಂತಿ ಹೂವಿನಂತಿರುತ್ತಿದ್ದ ಮುಖವು ಬಾಡಿ ಕಂದಿಹೋಗಿತ್ತು—ಚಿತ್ರಕ್ಕೆ ಜೀವನ ಸ್ಪಂದಗಳನ್ನು ತರುತ್ತಿದ್ದ ಬಣ್ಣವು ಮಾಸಿ ಹೋಗಿ ಬರಿಯ ಆಕೃತಿಯೊಂದು ಉಳಿದಿತ್ತು—ಕೇಳುವುದಕ್ಕೆ ಹಿತವಾದ, ಪ್ರಾಣಪ್ರದವಾದ, ಆಹ್ಲಾದಲ್ಲಿ ತೊಯ್ದ ಸಂಗೀತವು ಆಕಾಶದಲ್ಲಿ ವಿಲೀನವಾಗಿ ಅದರ ಕ್ಷೀಣ ಉದಾಸ ಪ್ರತಿಧ್ವನಿ ಮಾತ್ರ ಉಳಿದಂತೆ ಕಾಣುತ್ತಿತ್ತು. ಜೋಹರಾ ಆಕೆಯ ಬಳಿ ಕೂತು ಕರುಣೆ, ವಿವಶತೆ, ನಿರಾಶೆ ಮತ್ತು ತೃಷ್ಣೆಯಿಂದ ಕೂಡಿದ ನೇತ್ರಗಳಿಂದ ಅವಳನ್ನೇ ನೋಡುತ್ತಿದ್ದಳು. ಈಗ ಒಂದು ವರ್ಷದಿಂದ ಅವಳು ಹಗಲಿರುಳೆನ್ನದೆ ರತನಳ ಸೇವಾಶುಶ್ರೂಷೆಯಲ್ಲಿ ನಿರತಳಾಗಿರುವರು. ರತನಳು ತನ್ನ ಮೇಲೆ ತೋರಿದ ನೇಹವನ್ನೂ, ಅವಿಶ್ವಾಸ ಮತ್ತು ಬಹಿಷ್ಕಾರದ ಆ ವಾತಾವರಣದಲ್ಲಿಯೂ ಅವಳು ತೋರಿದ ಭಗಿನೀಭಾವವನ್ನೂ ನೆನೆದರೆ ಅವಳು ರತನಳ ಉಪಕಾರವನ್ನು ಈ ಜನ್ಮದಲ್ಲಿ ತೀರಿಸುವಂತಿಲ್ಲ. ಜಾಲಪಳಿಂದಲೂ ದೊರೆಯದ ಸಹಾನುಭೂತಿ ರತನಳ ಕಡೆಯಿಂದ ಸಿಕ್ಕಿತು. ದುಃಖ ಪರಿಶ್ರಮಗಳು ಇಬ್ಬರನ್ನೂ ಒಂದುಗೂಡಿಸಿದುದರಿಂದ ಇಬ್ಬರ ಆತ್ಮಗಳೂ ಒಂದರೊಡನೊಂದು ಹೆಣೆದುಕೊಂಡವು. ಇಂತಹ ಘನಿಷ್ಟನೇಹವು ಜೋಹರಾ ಕಲ್ಪನೆಕೂಡಾ ಮಾಡದ ಹೊಸತೊಂದು ಅನುಭವವಾಗಿತ್ತು. ಅವಳ ವಂಚಿತ ಹೃದಯಕ್ಕೆ ಈ ಮೈತ್ರಿಯಲ್ಲಿ ಪತಿಪ್ರೇಮ ಪುತ್ರಪ್ರೇಮಗಳೆರಡೂ ದೊರೆಕೊಂಡವು.

ದೇವೀದೀನನು ರತನಳ ಮುಖವನ್ನು ಚಿಂತಾಯುತ ನೇತ್ರಗಳಿಂದ ನೋಡಿ,ಅವಳ ನಾಡಿಯನ್ನು ಪರೀಕ್ಷಿಸಿ 'ಮಾತಾಡದೆ ಎಷ್ಟುಹೊತ್ತಾಯಿತು?' ಎಂದು ಕೇಳಿದನು. ಜಾಲಪಳು ಕಣ್ಣೊರಸಿಕೊಳ್ಳುತ್ತಾ 'ಮಾತಾಡುತ್ತ ಇದ್ದಳು, ಇದ್ದಕ್ಕಿದ್ದ ಹಾಗೆ ಕಣ್ಣುಗಳು ಮೇಲೆ ಹೋಗಿ ಮೂರ್ಛಿತಳಾದಳು. ಡಾಕ್ಟರರಿನ್ನೂ ಬಂದಿಲ್ಲವೆ?' ಎಂದು ಹೇಳಿದಳು. ದೇವೀದೀನನು 'ಇವಳಿಗೆ ತಾಗುವ ಮದ್ದು ಯಾವ ವೈದ್ಯನ ಹತ್ತಿರವೂ ಇಲ್ಲಮ್ಮಾ' ಎಂದು ಹೇಳಿ, ಒಂದು ಸ್ವಲ್ಪ ಬೂದಿಯನ್ನು ಕೈಯಲ್ಲಿ ತೆಗೆದುಕೊಂಡು, ಬಾಯಲ್ಲಿ ಏನೋ ಗುಣುಗುವಂತ್ರ ಹೇಳಿ, ಒಂದು ಚಿಮುಟಿ ಬೂದಿಯನ್ನು ಆಕೆಯ ಹಣೆಗೆ ಹಚ್ಚಿದನು. ಆ ಮೇಲೆ 'ಮಗಳೇ ರತನ, ಕಣ್ಣು ತೆರೆಯಮ್ಮಾ' ಎಂದನು.

ರತನಳು ಕಣ್ಣುತೆರೆದು ಅತ್ತಿತ್ತ ಚಂಚಲ ನೇತ್ರಗಳಿಂದ ನೋಡಿ, 'ನನ್ನ ಮೋಟರು ಬಂದಿದೆಯೆ? ಅವನೆಲ್ಲಿಗೆ ಹೋದ? ಸ್ವಲ್ಪ ತಡೆದು ತಂದರೆ ಸಾಕೆಂದು ತಿಳಿಸು. ಜೋಹರಾ, ಇವೊತ್ತು ನಾನು ನಿನಗೆ ನನ್ನ ಉಪವನ ವನ್ನು ತೋರಿಸುವೆ. ನಾವಿಬ್ಬರೂ ಉಯ್ಯಾಲೆಯ ಮೇಲೆ ಕೂಡೋಣ' ಎಂದು ಬಡಬಡಿಸಿದಳು.

ಜೋಹರಾ ಮತ್ತೆ ಅಳಹತ್ತಿದಳು. ಜಾಲಪಳು ಕಣ್ಣೀರಿನ ವೇಗವನ್ನು ಸಹಿಸದಾದಳು. ರತನ ಒಂದು ಕ್ಷಣಕಾಲ ಮಾಡಿನ ಕಡೆ ನೋಡುತ್ತಿದ್ದು ಆ ಮೇಲೆ ಒಮ್ಮಿಂದೊಮ್ಮೆಗೆ ಸ್ಮೃತಿಬಂದವಳಂತೆ ಲಜ್ಜಿತಳಾಗಿ ಮೆಲ್ಲಗೆ ನಕ್ಕು 'ಕನಸು ಕಂಡೆ, ತಂದೆ' ಎಂದು ಹೇಳಿದಳು.

ಚೆಂಬಣ್ಣದ ಆಗಸದಮೇಲೆ ಕರಿತೆರೆ ಮುಗಿಬೀಳುವ ಹೊತ್ತು ರತನಳ ಜೀವನದ ಮೇಲೆ ಮೃತ್ಯುವು ತನ್ನ ಕರಿತೆರೆಯನ್ನು ಹೊದೆಯಿಸಿತು.

ರಮಾನಾಥನು ಡಾಕ್ಟರರನ್ನು ಕರೆದುಕೊಂಡು ಬಂದಾಗ ಮನೆಯಲ್ಲಿ ಮೌನವಾವರಿಸಿತ್ತು. ರತನಳ ಮೃತ್ಯುವಿನ ಶೋಕವು 'ಅಯ್ಯಯ್ಯೋ' ಎಂದು ಹುಯ್ಯಲಿಡುವ ಶೋಕವಾಗಿರದೆ, ಮೂಕ ರುದನದಿಂದಲೇ ಮುಗಿಸುವಂತಹು ದಾಗಿತ್ತು. ಅದನ್ನು ಎಂದೆಂದಿಗೂ ಮರೆವಂತಿಲ್ಲ; ಅದರ ಭಾರವು ಎದೆಯಿಂದ ಎಂದೂ ಇಳಿಯುವ ಹಾಗಿಲ್ಲ

ರತನಳು ಹೋದಬಳಿಕ ಜೋಹರಳ ಮನಸ್ಸು ಯಾವ ಕೆಲಸದಲ್ಲಿಯೂ ಸೇರುತ್ತಿದ್ದಿಲ್ಲ. ನದಿಯ ದಡಕ್ಕೆ ಹೋಗಿ ಅವಳನ್ನು ಸ್ಮರಿಸಿ ಚೆನ್ನಾಗಿ ಅಳು

ವುದೂ, ರತನಳೂ ತಾನೂ ಕೂಡಿ ನೆಟ್ಟ ಮಾವಿನ ಸಸಿಯ ಬಳಿ ನಿಂತು ಹಲವು ತಾಸುಗಳತನಕ ಜಾನಿಸುತ್ತಿರುವುದೂ, ಅವಳ ನಿತ್ಯದ ಕೆಲಸಗಳಾಗಿದ್ದುವು. ಮಗುವಿನ ಆರೈಕೆಯ ದೆಸೆಯಿಂದ ಜಾಲಪಳಿಗೆ ಜೋಹರಳೊಡನೆ ಹೆಚ್ಚಾಗಿ ಇರಲು ಬರುವಂತಿದ್ದಿಲ್ಲ. ಎಲ್ಲಾದರೂ ಅವಕಾಶ ಸಿಕ್ಕಿದರೆ ಇಬ್ಬರೂ ಸೇರಿ ರತನಳ ಕುರಿತು ಮಾತಾಡಿ ಮರುಗತೊಡಗುವರು.

ಕಾರುತಿಂಗಳು. ಬುವಿಗೂ ನೀರಿಗೂ ಕದನವಾರಂಭವಾಗಿತ್ತು. ಜಲಸೇನೆಗಳು ವಾಯುಯಾನದ ಮೇಲೆ ಸವಾರಿಮಾಡುತ್ತ ಭೂಮಿಯಮೇಲೆ ಶರವೃಷ್ಟಿಯನ್ನು ಕರೆಯುತ್ತಿದ್ದುವು. ನೀರಿನ ಭೂಸೇನೆಗಳು ಭೂಮಿಯಮೇಲೆ ಉತ್ಪಾತ ವೆಸಗುತ್ತಿದ್ದುವು. ಹಳ್ಳಿಹಳ್ಳಿಗಳೇ ಕೊಚ್ಚಿಕೊಂಡು ಹೋಗುತ್ತಿದ್ದ ಸಮಯವದು. ಜೋಹರಾ ನದೀತಟದಲ್ಲಿ ನಿಂತು ನೆರೆನೀರಿನ ಆಟವನ್ನು ನೋಡುತ್ತಿದ್ದಳು. ತೆರೆಗಳು ಹುಚ್ಚರಂತೆ ನೊರೆಯುತ್ತಾ, ನೊರೆ ಕಾರುತ್ತಾ, ಎತ್ತರ ಎತ್ತರಕ್ಕೆ ಹಾರುತ್ತಿದ್ದುವು. ಒಮ್ಮೆ ಒಂದು ಹೆಜ್ಜೆ ಮುಂಬರಿದು, ಕೂಡಲೇ ಒಂದಷ್ಟುದೂರ ಹಿಂದಕ್ಕೆ ಸರಿದು ಮರಳಿ ಸುಳಿಸುಳಿಯಾಗಿ ಮುನ್ನುಗುತ್ತಿದ್ದುವು. ಒಂದು ಕಡೆ ಗುಡಿಸಲೊಂದು ಕುಡುಕನಂತೆ ಅತ್ತಿತ್ತ ಒಲೆಯುತ್ತ ಭರದಿಂದ ತೇಲಿ ಹೋಗುತ್ತಿತ್ತು; ಇನ್ನೊಂದೆಡೆ ದೊಡ್ಡದೊಂದು ಮರವು ಶಿಲಾಯುಗದ ಜಂತುವಿನಂತೆ ಮುಳುಗುತ್ತ ತೇಲುತ್ತ ಮುಂಬರಿಯುತ್ತಿತ್ತು. ದನ ಎಮ್ಮೆಗಳು, ಚಾಪೆ-ಮಂಚಗಳು ಇಂದ್ರಜಾಲದ ಚಿತ್ರಗಳಂತೆ ಒಂದರ ಹಿಂದೊಂದು ಕಣ್ಣಮುಂದೆ ಹಾದುಹೋಗುತ್ತಿದ್ದುವು.

ಫಕ್ಕನೆ ಒಂದು ಚಿಕ್ಕ ಡೋಣಿ ಕಣ್ಣಿಗೆ ಬಿತ್ತು. ಹತ್ತೆಂಟು ಸ್ತ್ರೀಪುರುಷರು ಅದರಲ್ಲಿ ಒಬ್ಬರಿಗೊಬ್ಬರು ಅವಚಿಕೊಂಡು ಕೂತಿದ್ದರು. ಡೋಣಿ ಒಮ್ಮೆ ಮೇಲೂ ಒಮ್ಮೆ ಕೆಳಗೂ ಓಲಾಡುವುದು. ನೋಡುವವರಿಗೆ 'ಈಗ ಮಗಚೀತು ಈಗಮಗಚೀತು' ಎಂದು ಕಾಣಬೇಕು. ಆದರೂ ಏನು ಸಾಹಸ! ಈಗಲೂ ಅವರ ಬಾಯಿಂದ 'ಗಂಗಾಮಾತಾಕೀಜೈ' ಹೊರಡುತ್ತಿತ್ತು. ಹೆಂಗಸರು ಈಗಲೂ ಗಂಗಾಮಾತೆಯ ಯಶೋಗೀತೆ ಹಾಡುವುದನ್ನು ನಿಲ್ಲಿಸಿರಲಿಲ್ಲ. ಜೀವನ ಮತ್ತು ಮೃತ್ಯುವಿನ ಈ ತರದ ಸಂಘರ್ಷವನ್ನು ಎಲ್ಲಿ ಕಾಣಬಹುದು? ಇತ್ತಟಗಳಜನರೂ ಭಯಭರಿತ ಕುತೂಹಲದಿಂದ ಎದೆಯನ್ನವುಕಿ ಹಿಡಿದು ನಿಂತಿದ್ದರು. ಡೋಣಿಯು ಮಗ್ಗಲುತಿರುವಿದಾಗ ಜನರ

ಎದೆ ಹವ್ವನೆ ಹಾರಿದಂತಾಗುವುದು ಕೆಲವರು ಹಗ್ಗವನ್ನೆಸೆಯಲು ಯತ್ನಿಸಿದರು; ಆದರೆ ಹಗ್ಗವು ಅವರನ್ನು ಮುಟ್ಟದೆ ನಡುವಿನಲ್ಲೇ ಬೀಳುತ್ತಿತ್ತು. ಕೊನೆಗೊಮ್ಮೆ ಎಲ್ಲರೂ ನೋಡುತ್ತಿದ್ದ ಹಾಗೆ ದೋಣಿ ಧೊಪ್ಪನೆ ಮುಗಚಿಬಿತ್ತು. ಸ್ವಲ್ಪಹೊತ್ತು ಸ್ತ್ರೀಪುರುಷರೆಲ್ಲ ನೀರಿನಲ್ಲಿ ತೇಲುಮುಳುಗು ಹಾಕುತ್ತಿರುವುದು ಕಂಡಿತು ಆ ಮೇಲೆ ಎಲ್ಲರೂ ಕಣ್ಮರೆಯಾದರು ಏನೋ ಒಂದು ಬಿಳಿಯಾದ ವಸ್ತು ಕಡೆಗೆ ಬರುವಂತೆ ತೋರಿತು ಒಂದು ದೊಡ್ಡ ಅಲೆಯು ಅದನ್ನು ದಂಡೆಯಿಂದ ಸುಮಾರು ಇಪ್ಪತ್ತು ಗಜಗಳ ದೂರಕ್ಕೆ ತಂದೆಸೆದಾಗ ಆ ವಸ್ತು ಒಬ್ಬಳು ಸ್ತ್ರೀಯಿರಬೇಕೆಂದು ಗೊತ್ತಾಯಿತು ಜೋಹರಾ, ಜಾಲಪಾ, ರಮಾನಾಥ, ಈ ಮೂವರೂ ನಿಂತಿದ್ದರು ಆ ಹೆಂಗಿಸಿನ ಕೈಯಲ್ಲೊಂದು ಹಸುಗೂಸಿದ್ದ ಹಾಗೆ ತೋರಿತು; ಆ ಎರಡು ಜೀವಗಳನ್ನುಳಿಸಬೇಕೆಂದು ದಡದ ಮೇಲಿನ ಈ ಮೂರು ಜೀವಗಳು ಕಾತರಿಸಿದುವು ಆದರೆ ಇಪ್ಪತ್ತು ಗಜ ದೂರ ಈಸಿ ಆಕಡೆ ಹೋಗುವುದು ಅಂಗೈಯ ಮೇಲಿನ ತುತ್ತಾಗಿರಲಿಲ್ಲ ರಮಾನಾಥನು ಈಸುವುದರಲ್ಲಿ ಅಂಥ ಗಟ್ಟಿಗನೂ ಅಲ್ಲ. ಅಲೆಗಳ ಸೆಳೆತದಿಂದ ಕಾಲು ತಪ್ಪಿಹೋದಲ್ಲಿ ಮತ್ತೆ ಮೇಲೆ ಬೀಳುವುದು ಬಂಗಾಳ ಆಖಾತದಲ್ಲಿಯೇ ಸರಿ.

ಜೋಹರಾ 'ನಾನು ಪ್ರಯತ್ನಿಸಿ ನೋಡುತ್ತೇನೆ' ಎಂದಳು- ರಮಾನಾಥನು ನಾಚಿಕೆಯಿಂದ 'ಹೋಗಲಿಕ್ಕೇನು, ನಾನೂ ಸಿದ್ಧನೇ; ಆದರೆ ಅಲ್ಲಿಯವರೆಗೆ ಮುಟ್ಟಲಾಗುವುದು ಸಂಶಯ ಏನು ಸೆಳೆತ!' ಎಂದು ಹೇಳಿದನು. ಜೋಹರಾ ನೀರಿನೊಳಗೆ ಒಂದು ಕಾಲನ್ನಿರಿಸಿ 'ಬೇಡ, ನಾನು ಈಗಲೇ ಎತ್ತಿ ತರುತ್ತೇನೆ' ಎಂದು ಹೇಳಿ ಸೊಂಟದವರೆಗೆ ನೀರಿನಲ್ಲಿಳಿದಳು. ರಮಾನಾಥನು ಸಂಶಯದಿಂದ 'ಯಾಕೆ ಸುಮ್ಮನೆ ಪ್ರಾಣ ಕಳೆದುಕೊಳ್ಳಲು ಹೋಗುತ್ತೀಯೆ? ನೀನಿಳಿದ ಜಾಗೆಯಲ್ಲೇ ಒಂದು ಸುಳಿಯಿರುವಂತೆ ಕಾಣುವುದು. ನಿಲ್ಲು, ನಿಲ್ಲು, ನಾನು ಹೋಗುತ್ತೇನೆ' ಎಂದು ಅವಸರವಸರವಾಗಿ ನುಡಿದನು ಜೋಹರಾ ಕೈಸನ್ನೆ ಮಾಡಿ 'ಬೇಡ, ಬೇಡ. ನನ್ನಾಣೆ, ಬರಬೇಡ. ನನಗೆ ಈಜುಗೊತ್ತಿದೆ' ಎಂದು ತಿಳಿಸಿದಳು.

ಜಾಲಪಾ ಎಂದಳು—ಅದು ಬರಿಯ ಹೆಣವಾಗಿರಲಿಕ್ಕೆ ಬೇಕು.

ರಮಾ—ಪ್ರಾಣ ಇರಲಿಕ್ಕೂ ಸಾಕು.

ಜಾಲಪಾ—ಓಹೋ, ಜೋಹರಳಿಗೆ ಈಜುಕೂಡಾ ಬರುತ್ತಿದೆ. ಎಂತಲೇ ಧೈರ್ಯದಿಂದ ಹೋಗಿದ್ದಾಳೆ

ರಮಾನಾಥನು ಜೋಹರಳ ಕಡೆಗೆ ಚಿಂತಿತದೃಷ್ಟಿಯಿಂದ ನೋಡುತ್ತಾ ಹೇಳಿದನು—ಹಾಂ, ಏನೋ ಸ್ವಲ್ಪಸ್ವಲ್ಪ ಬರುತ್ತಿರಬಹುದು ದೇವರು ಒಮ್ಮೆಗೆ ಅವಳು ಹಿಂದೆ ಬರುವ ಹಾಗೆ ಮಾಡಿದರೆ ಸಾಕು ನನ್ನ ಹೇಡಿತನವನ್ನು ಕಂಡು ನನಗೇ ನಾಚುಗೆ ಎನಿಸುತ್ತಿದೆ.

ಜಾಲಪಾ ನಾಚಿಕೆಗೇಡಿಯಂತೆ ಹೇಳಿದಳು—ಇದರಲ್ಲಿ ನಾಚುಕೆಯಲ್ಲಿಂದ ಬಂತು? ಸತ್ತ ಹೆಣಕ್ಕಾಗಿ ಪ್ರಾಣವನ್ನು ಸಂಕಟಕ್ಕೊಡ್ಡುವುದರಿಂದ ಪ್ರಯೋಜನ ವೇನು? ಜೀವವಿರುತ್ತಿದ್ದರೆ ನಾನೇ ನಿಮಗೆ ಹೋಗಿರೆಂದು ಹೇಳುತ್ತಿರಲಿಲ್ಲವೆ?

ರಮಾನಾಥನು ತನ್ನ ಆತ್ಮವನ್ನು ಧಿಕ್ಕರಿಸಿಕೊಳ್ಳುತ್ತಾ ನುಡಿದನ — ಪ್ರಾಣವಿದೆಯೋ ಇಲ್ಲವೋ ಎಂದು ಇಷ್ಟು ದೂರದಿಂದ ಹೇಗೆ ತಿಳಿಯಬೇಕು? ಮಕ್ಕಳು ಮರಿಯುಳ್ಳ ಮನುಷ್ಯರಿಗೆ ಪೌರುಷ ವಿಲ್ಲವೆಂಬುದು ನನಗೀಗ ಖಚಿತ ವಾಯಿತು. ನಾನು ಗಂಡಸು ನಿಂತಿರುವಾಗ ಜೋಹರಾ ಮುಂದಾಗಬೇಕಾಯಿತು.

ಅಷ್ಟರಲ್ಲಿ ಒಂದು ಜೋರಿನ ತೆರೆ ಬಂದು ಹೆಣವನ್ನು ಸೆಳೆದುಕೊಂಡು ಹೋಗಿಬಿಟ್ಟಿತು. ಜೋಹರಾ ಅದನ್ನು ಸಮೀಪಿಸಿಯಾಗಿತ್ತು; ಎಳೆಯಲೆಂದು ಕೈಚಾಚಿಯೂ ಆಗಿತ್ತು. ಆದರೆ ನಡುವೆ ಈ ಲಹರು ಬಂದು ಅವಳನ್ನೂ ದೂರಕ್ಕೊಗೆಯಿತು. ಸ್ವತಃ ಅವಳೇ ಆದರ ಜೋರಿಗೆ ಸಿಲುಕಿ ಪ್ರವಾಹದಲ್ಲಿ ತೇಲಿಕೊಂಡು ಹೋಗಿಬಿಟ್ಟಳು. ಸ್ವಲ್ಪ ಬಲಮಾಡಿ ಸಾವರಿಸಿಕೊಳ್ಳುವೆನೆನ್ನುವುದರೊಳಗೆ ಇನ್ನೊಂದು ಲಹರು ಅವಳನ್ನು ದೂಡಿಬಿಟ್ಟಿತು.

ರಮಾನಾಥನು ವ್ಯಗ್ರನಾಗಿ ನೀರಿಗೆ ಹಾರಿದನು. 'ಜೋಹರಾ, ಜೋಹರಾ! ಇಗೋ ಬಂದೆ' ಎಂದು ಬೊಬ್ಬೆಯಿಡುತ್ತಾ ಮುಂದುವರಿದನು.

ಆದರೆ ಜೋಹರಳಿಗೆ ತೆರೆಗಳ ಜೊತೆಯಲ್ಲಿ ಹೋರಾಡುವ ಶಕ್ತಿ ಇದ್ದಿರಲಿಲ್ಲ. ಶವದೊಡನೆ ಅವಳು ಭರದಿಂದ ಸಾಗುತ್ತಿದ್ದಳು. ಅವಳ ಕೈಕಾಲುಗಳ ಕಾಟ ನಿಂ[illegible].

ಸಹಸಾ ಇನ್ನೊಂದು ದೊಡ್ಡ ತೆರೆ ಬಂದು ಅವಳು ಅದರಲ್ಲಿ ಮರೆಯಾಗಿ ಬಿಟ್ಟಳು. ಒಂದು ಕ್ಷಣದ ಬಳಿಕ ಅವಳ ಕೂದಲುಗಳು ತೋರಿದುವು. ಅದೂ ಒಂದು ಕ್ಷಣಕಾಲ ಮಾತ್ರ! ಅದೇ ಅವಳ ಅಂತಿಮ ದೃಶ್ಯ!

ರಮಾನಾಥನು ನೂರು ಗಜಗಳವರೆಗೆ ಕೈಕಾಲುಗಳನ್ನು ಬಡಿಯುತ್ತ ಮುಂಬರಿದನು; ಅಷ್ಟಕ್ಕೇ ತೆರೆಗಳ ಪ್ರತಿರೋಧದ ದೆಸೆಯಿಂದ ಅವನಿಗೆ ಉಸಿರು ಕಟ್ಟಿದಂತಾಗಿತ್ತು. ಇನ್ನು ಮುಂದೆಹೋಗುವುದಾದರೂ ಎಲ್ಲಿಗೆ? ಜೋಹರಳೂ ಕಾಣಿಸುವುದಿಲ್ಲ. ಅವಳ ಆ ಅಂತಿಮ ದೃಶ್ಯ ಮಾತ್ರ ಕಣ್ಣ ಮುಂದೆ ನಲಿಯುತ್ತಿತ್ತು.

ಜಾಲಪಾ ದಡದಲ್ಲಿ ನಿಂತು 'ಹಾಯ್ ಹಾಯ್' ಎನುತ್ತಿದ್ದವಳು ತುಸು ಹೊತ್ತಿನ ಬಳಿಕ ತಾನೂ ನೀರಿಗೆ ಹಾರಿದಳು. ರಮಾನಾಥನು ಇನ್ನು ಮುಂಬರಿಯದಾದನು ಒಂದು ಶಕ್ತಿ ಅವನನ್ನು ಮುಂದಕ್ಕೆಳೆಯುತ್ತಿತ್ತು; ಇನ್ನೊಂದು ಹಿಂದೆಜಗ್ಗುತ್ತಿತ್ತು ಮುಂದಿನ ಶಕ್ತಿಯಲ್ಲಿ ಅನುರಾಗ, ನಿರಾಶೆ, ಬಲಿದಾನಗಳಿದ್ದುವು; ಹಿಂದಿನ ಶಕ್ತಿಯಲ್ಲಿ ಕರ್ತವ್ಯ, ನೇಹ ಮತ್ತು ಬಂಧನ ಇದ್ದುವು. ಬಂಧನವು ಅವನನ್ನು ತಡೆಗಟ್ಟಿತು. ಅವನು ಹಿಂದೆ ತಿರುಗಿದನು.

ಕೆಲವು ಕ್ಷಣಗಳವರೆಗೆ ಜಾಲಪಾ ರಮಾನಾಥರು ಮೊಣಕಾಲುದ್ದ ನೀರಲ್ಲಿ ನಿಂತು ಜೋಹರಳನ್ನು ತೆರೆಯು ನುಂಗಿದ ಆ ದಿಕ್ಕನ್ನೇ ದಿಟ್ಟಿಸುತ್ತಲಿದ್ದರು. ರಮಾನಾಥನ ಬಾಯಿ ಆತ್ಮಧಿಕ್ಕಾರದಿಂದ ಮುಚ್ಚಿಹೋಗಿತ್ತು; ಜಾಲಪಳ ನಾಲಗೆಯನ್ನು ಶೋಕಲಜ್ಜೆಗಳು ಬಿಗಿಹಿಡಿದಿದ್ದುವು.

ಜಾಲಪಾ ನೀರಿನಿಂದ ಮೇಲೆ ಬಂದು ದಡದಲ್ಲಿನಿಂತಳು. ಆದರೂ ಬಾಯಲ್ಲಿ ಸೊಲ್ಲು ಹೊರಡದು. ಮೃತ್ಯುವಿನ ಈ ಆಘಾತವು ಅವಳನ್ನು ಪರಾಭೂತಗೊಳಿಸಿತ್ತು ಜೀವನವು ಅದೆಷ್ಟು ಅಸ್ಥಿರವೆಂಬುದು ಎರಡನೆಯ ಬಾರಿ ಅವಳ ಕಣ್ಣೆದಿರಿದಲ್ಲಿಯೇ ಚರಿತಾರ್ಥವಾದಂತಾಯಿತು. ರತನಳು ಸಾಯುವಳೆಂಬ ಸಂದೇಹವಾದರೆ ಮೊದಲಿಂದಲೂ ಇದ್ದಿತ್ತು. ಆದರೆ ಜೋಹರಳ ಮರಣ ಬರಸಿಡಿಲಿಗೆ ಸಮಾನ! ಇದೇ ಅರ್ಧತಾಸಿನ ಹಿಂದೆ ಮೂವರೂ ಒಟ್ಟಾಗಿ ಜಲಕ್ರೀಡೆ ನೋಡಲು ಹೊರಟಿದ್ದರು. ಮೃತ್ಯುವಿನ ಇಂತಹ ಭಯಂಕರ ಕ್ರೀಡೆ ನೋಡಸಿಗುವುದೆಂದು ಯಾರಿಗಾದರೂ ಎಣಿಕೆ ಇತ್ತೆ?

ಈ ನಾಲ್ಕು ವರುಷಗಳಲ್ಲಿ ಜೋಹರಳು ತನ್ನ ಸೇವೆ, ಆತ್ಮತ್ಯಾಗ ಮತ್ತು ಸರಳ ಸ್ವಭಾವದಿಂದ ಎಲ್ಲರನ್ನೂ ಮುಗ್ಧಗೊಳಿಸಿದ್ದಳು. ತನ್ನ ಅತೀತವನ್ನು ಹಾಳುಗೆಡೆವುದಕ್ಕೆ ಹಿಂದಿನ ಕಳಂಕವನ್ನು ತೊಳೆಯುವುದಕ್ಕೆ ಇದೊಂದಲ್ಲದ ಅವಳ ಬಳಿ ಬೇರೆ ಸಾಧನವಾದರೂ ಯಾವುದಿತ್ತು? ಅವಳ ಎಲ್ಲ ಕಾಮನ ಗಳೂ, ಸರ್ವವಾಸನೆಗಳೂ ಸೇವೆಯಲ್ಲಿ ಲೀನವಾದುವು. ಕಲಕತ್ತೆಯಲ್ಲಿ ಅವಳು ವಿಲಾಸ ಮತ್ತು ಮನೋರಂಜನೆಯ ಸಾಮಗ್ರಿಯಾಗಿದ್ದಳು; ಇಲ್ಲಿ ಆದರ ಪಾತ್ರವಸ್ತುವಾದಳು. ಎಲ್ಲರೂ ಅವಳನ್ನು ಮನೆಯವಳಂತೆ ನೋಡು ತ್ತಿದ್ದರು. ದಯಾನಾಥ ರಾಮೇಶ್ವರಿಯರ ಸಮಾಧಾನಕ್ಕೆ ಅವಳು ದೇವಿ ದೀನನ ವಿಧವೆ ಸೊಸೆಯೆಂದು ಹೇಳಿದರು. ಕಲಕತ್ತೆಯಲ್ಲಿ ಅವಳು 'ನಿಮ್ಮೊ ಡನೆ ಇರಲು ಅನುಮತಿ ಕೊಡುತ್ತೀರಾ?' ಎಂದು ಜಾಲಪಳನ್ನು ಬೇಡಿದ್ದಳು ಜಾಲಪಳ ವಿಶ್ವಾಸಮಯಔದಾರ್ಯವು ಅವಳಿಗೆ ಆತ್ಮಶುದ್ಧಿಯ ಮಾಗ ವನ್ನು ತೋರಿಸಿತು; ರತನಳ ನಿಷ್ಕಾಮಜೀವನವು ಅವಳು ಆ ದಾರಿಯಲ್ಲಿ ಮುಂಬರಿವಂತೆ ಹುರುಪುಗೊಳಿಸಿತು.

ಕೆಲಹೊತ್ತಿನ ಬಳಿಕ ರಮಾನಾಥನೂ ನೀರಿನಿಂದ ಮೇಲೆ ಬಂದನು ಇಬ್ಬರೂ ಮನೆಯದಾರಿ ಹಿಡಿದರು

ಆಗಾಗ ರಮಾನಾಥನೂ ಜಾಲಪಳೂ ನದಿಯ ದಡಕ್ಕೆ ಬಂದು ಕುಳಿತ ಜೋಹರಳು ಜಲಮಗ್ನಳಾಗಿದ್ದ ಆ ಸ್ಥಳದಕಡೆಗೇ ನೋಡುತ್ತಿದ್ದರು ಎಷ್ಟೋದಿನಗಳ ವರೆಗೆ ಜೋಹರಾ ಜೀವಂತಳಾಗಿರಬಹುದೆಂಬೂ ಒಂದಲ್ಲ ಒಂದು ದಿನ ಎತ್ತಣಿಂದ ಲಾದರೂ ತಮ್ಮನ್ನು ಬಂದು ಸೇರುವಳೆಂದೂ ಅವ ರಿಗೆ ನಂಬುಗೆಯಿತ್ತು. ಆದರೆ ಮೆಲ್ಲಮೆಲ್ಲಗೆ ಆ ಆಸೆಯೂ ಶೋಕದ ರೂಪ ದಲ್ಲಿ ಅಳಿಯಿತು. ಜೋಹರಳ ರೂಪವು ಅವರ ಕಣ್ಣಮುಂದೆ ಯಾವಾಗಲೂ ತಿರುಗುತ್ತಿತ್ತು. ಅವಳು ಹಚ್ಚಿದ ಗಿಡಬಳ್ಳಿಗಳೂ, ಅವಳು ಸಾಕಿದ ಬೆಕ್ಕೂ ಅವಳು ಕಸೂತಿಮಾಡಿದ ಬಟ್ಟೆಬರೆಗಳೂ, ಅವಳು ವಾಸಿಸುತ್ತಿದ್ದ ಕೋಣೆಯೂ, ಅವಳ ಸ್ಮೃತಿಚಿಹ್ನವಾಗಿ ಉಳಿದಿದ್ದುವು. ಅವನ್ನು ಕಂಡಾ ಗಲೆಲ್ಲ ರಮಾನಾಥನ ಕಣ್ಣಿದಿರು ಜೋಹರಳ ಚಿತ್ರ ಬಾರದಿರುವುದಿಲ್ಲ

—ಸಂಪೂರ್ಣ—